ಇತಿಹಾಸದ ಹೊಸ ಅಭ್ಯಾಸಕ್ರಮಕ್ಕನುಸರಿಸಿ ಬರೆಯಲಾದುದು

# ಜಗತ್ತು ಮತ್ತು ಭಾರತ

(ಜಾಗತಿಕ ಹಿನ್ನೆಲೆಯಲ್ಲಿ ಭಾರತ ಇತಿಹಾಸದ ಓಟದ ನೋಟ)




## ಮೊದಲನೆಯ ಪುಸ್ತಕ

(೮ನೆಯ ವರ್ಗಕ್ಕಾಗಿ)

ಲೇಖಕರು:

**ಪ್ರೊ. ರಾ. ವಿ. ಓತುರಕರ, ಎಂ. ಎಂ.**
'ಹಿಂದುಸ್ತಾನದ ಸುಲಭ ಇತಿಹಾಸ' 'ಸಾಧನ ಪರಿಚಯು'
'ಸುಲಭ ನಾಗರಿಕ ಶಾಸ್ತ್ರ' ಮುಂತಾದವುಗಳ ಲೇಖಕರು

**ಪ್ರೊ. ಶಂ. ವಾ. ಚಿತಳೆ, ಎಂ. ಎ., ಬಿ. ಟಿ.**
'ಇತಿಹಾಸ ಹೇಗೆ ಕಲಿಸಬೇಕು' ನಮ್ಮ ಮಹಾರಾಷ್ಟ್ರ ದೇಶ
ಮುಂತಾದವುಗಳ ಲೇಖಕರು

**ಶ್ರೀ. ಪ್ರ. ಬ. ನರೇಗಲ್ಲ, ಎಂ. ಎ., ಬಿ. ಟಿ.**
ಶಿಕ್ಷಕರು, ನ್ಯೂ ಇಂಗ್ಲಿಶ್ ಸ್ಕೂಲ್, ಹುಬ್ಬಳ್ಳಿ
'ಮಹಾಪುರುಷರ ಕಥೆಗಳು' 'ಕನ್ನಡ ಗೀತಾಂಜಲಿ'
ಮುಂತಾದವುಗಳ ಲೇಖಕರು

ಪ್ರಕಾಶಕರು
ರಾ. ಗೋ. ಹುಕ್ಕೇರಿ
**ಮಾರ್ಕೆಟ್ ಬೀದಿ, ಧಾರವಾಡ**

# ಪ್ರಸ್ತಾವನೆ

೧. ಮುಂಬಯಿ ರಾಜ್ಯದ ವಿದ್ಯಾ ಖಾತೆಯವರು ಮಾಧ್ಯಮಿಕ ಶಾಲೆಗಳ ವರ್ಗಗಳಿಗೆಂದು ಪ್ರಸಿದ್ಧಿಸಿದ ಹೊಸ ಅಭ್ಯಾಸ ಕ್ರಮವನ್ನು ಅನುಸರಿಸಿ ೯ನೆಯ ಇಯತ್ತೆಯ ಸಲುವಾಗಿ ಬರೆದ ಇತಿಹಾಸದ ಪುಸ್ತಕವಿದು. ಈ ಅಭ್ಯಾಸಕ್ರಮದಂತೆ ೫ ರಿಂದ ೧೧ರ ವರೆಗೆ ಇತಿಹಾಸದ ಅಭ್ಯಾಸಮಾಡುವ ವಿದ್ಯಾರ್ಥಿಗಳಿಗೆ ಭಾರತ ಸಂಸ್ಕೃತಿಯ ಜ್ಞಾನವಾಗಿ, ರಾಷ್ಟ್ರೀಯ ಪ್ರಶ್ನೆಗಳನ್ನು ವ್ಯಾಪಕ ಜಾಗತಿಕ ದೃಷ್ಟಿಯಿಂದ ನಿರೀಕ್ಷಿಸುವ ಅಭ್ಯಾಸವಾಗುವದು. ೫, ೬ ಮತ್ತು ೭ ಈ ಇಯತ್ತೆಗಳಿಗಾಗಿ ಗೊತ್ತುಪಡಿಸಿದ ಇತಿಹಾಸದ ಅಭ್ಯಾಸಕ್ರಮದಿಂದ ವಿದ್ಯಾರ್ಥಿಗಳಿಗೆ ಭಾರತ ಇತಿಹಾಸದ ಬಹು ಭಾಗದ ಜ್ಞಾನವಾಗುವದು. ೮, ೯ ಮತ್ತು ೧೦ ಈ ಇಯತ್ತೆಗಳಿಗಾಗಿ ಗೊತ್ತುಪಡಿಸಿದ ಅಭ್ಯಾಸಕ್ರಮದಿಂದ 'ಜಗತ್ತು ಮತ್ತು ಭಾರತ' ಇವುಗಳೊಳಗಿನ ಸಮಕಾಲೀನ ಘಟನೆಗಳ ಪರಿಚಯವಾಗುವದು.

೨. ಹೊಸ ಅಭ್ಯಾಸಕ್ರಮದೊಳಗಿನ ಒಂದು ಭಾಗದ ವಿಷಯದ ಸಂಬಂಧವನ್ನು ಮುಂದಿನ ಭಾಗದೊಡನೆ ಹಚ್ಚುವದು ಸುಲಭವಿಲ್ಲ ಅರ್ಥಾತ್ ಈ ಸಂದರ್ಭದಲ್ಲಿ ವಿದ್ಯಾರ್ಥಿಗಳು ಭಾರತ ಇತಿಹಾಸದ ಸ್ಥೂಲ ಸ್ವರೂಪವನ್ನು ನೆನಪಿನಲ್ಲಿಟ್ಟರೆ ೮, ೯ ಮತ್ತು ೧೦ ಈ ಇಯತ್ತೆಗಳ ಪುಸ್ತಕಗಳಲ್ಲಿ ಬರುವ ಇತಿಹಾಸದ ವಿಷಯಗಳು ಅಪರಿಚಿತವೆನಿಸುವುದಿಲ್ಲ. ಮತ್ತು ಸಮಕಾಲೀನ ಜಾಗತಿಕ ಘಟನೆಗಳು ವರ್ಣನೆಯ ಮೂಲಕ ಅವುಗಳ ಮರ್ಮವು ಸಾಪೇಕ್ಷವಾಗಿಯೂ ಹೆಚ್ಚು ಸ್ಪಷ್ಟವಾಗಿಯೂ ತಿಳಿದುಬರುವದು. ಈ ಮಾತು ನಿಜವಿದ್ದರೂ, ಗೊತ್ತುಪಡಿಸಿದ ಅಭ್ಯಾಸಕ್ರಮದಲ್ಲಿ ಒಂದರ ಹಿಂದೊಂದು ಬರುವ ವಿಷಯಗಳ ಸುಸಂಗತ ವಿವೇಚನೆ ಮಾಡುವದು ಸಾಧ್ಯವಿಲ್ಲವೆಂಬುದಾಗಿ ನಮಗೆ ಬಂದ ಅನುಭವವನ್ನು ಇಲ್ಲಿ ಹೇಳಲಿಚ್ಛಿಸುವೆವು. ಹರ್ಷನ ದಾತೃತ್ವ, ರಾಜಪುತರ ಉದಯ ಮತ್ತು ಶಂಕರಾಚಾರ್ಯರ ಕಾರ್ಯ ಈ ವಿಷಯಗಳು ೮ನೇ ಇಯತ್ತೆಯ ಅಭ್ಯಾಸಕ್ರಮದಲ್ಲಿ ಸಮಾವೇಶವಾಗಿಲ್ಲ; ಆದರೆ ವಿಷಯಪೂರ್ತಿಗೆಂದು ನಾವು ಅವನ್ನು ಈ ಪುಸ್ತಕದಲ್ಲಿ ಸೇರಿಸಿದ್ದೇವೆ. ಇತಿಹಾಸವನ್ನು ಇನ್ನು ಮುಂದೆ ವರ್ಗಗಳಲ್ಲಿ ಕಲಿಸುವಾಗ ಅನುಭವಕ್ಕೆ ಬರುವ ಅಡೆತಡೆಗಳನ್ನು ಶಿಕ್ಷಕರು ನಿರ್ಭಯವಾಗಿ ನಮಗೆ ವಿಶದಪಡಿಸಿದರೆ ನಮಗೆ ಮಾರ್ಗದರ್ಶನವಾಗಿ ಮುಂದೆ ಹೆಚ್ಚಿನ ಸುಧಾರಣೆ ಮಾಡಲು ಸಾಧ್ಯವಾಗುವದು. ಅಭ್ಯಾಸಕ್ರಮವನ್ನು ಪರಿಷ್ಕರಿಸುವಾಗ ವಿದ್ಯಾಖಾತೆಯವರಿಗೂ ಇಂಥ ಅನುಭವಪೂರ್ಣ ಸೂಚನೆಗಳ ಉಪಯೋಗವಾಗಬಹುದು.

೩. ಭಾರತದ ಇತಿಹಾಸದಲ್ಲಿ ಪ್ರಾಚೀನ ಭಾರತದ (ಕಿ. ಪೂ. ೩೦೦೦ ದಿಂದ ಕ್ರಿ. ವ. ೧೦೦೦ ವರೆಗೆ) ಮಧ್ಯಯುಗೀನ ಭಾರತ (ಕ್ರಿ. ವ. ೧೦೦೦ ದಿಂದ ೧೮೦೦) ಮತ್ತು ಅರ್ವಾಚೀನ ಭಾರತ (ಕ್ರಿ. ವ. ೧೮೦೦ ರಿಂದ ಇಂದಿನ ವರೆಗೆ) ಹೀಗೆ

ಮೂರು ಕಾಲಖಂಡಗಳನ್ನು ಮಾಡಿದೆ. ಇದು ಮೊದಲಿಗಿಂತಲೂ ಹೆಚ್ಚು ಶಾಸ್ತ್ರೀಯ ವಾಗಿದೆ. ಅರ್ವಾಚೀನ ಭಾರತದ ಇತಿಹಾಸವು ಬಾಬರನಿಂದ ಪ್ರಾರಂಭವಾಗುವ ದೆಂಬ ತಿಳಿವಳಿಕೆಯು ಶಾಸ್ತ್ರಯುಕ್ತವಲ್ಲ. ಹೊಸದಾಗಿ ಗೊತ್ತುಪಡಿಸಿದ ಅಭ್ಯಾಸ ಕ್ರಮದಿಂದ ಭಾರತದ ಐಕ್ಯದ ಜ್ಞಾನವು ಹೆಚ್ಚು ಸ್ಥಿರವಾಗುತ್ತ ಅರ್ವಾಚೀನ ಭಾರತ ದೊಳಗಿನ ಘಟನೆಗಳ ಕೂಲಂಕಷ ಪರಿಚಯವು ಉಂಟಾದೀತೆಂದು ಆಶಿಸಲಾಗಿದೆ.

೪. ಪುಸ್ತಕವನ್ನು ರಚಿಸುವಾಗ ಬೇರೆ ಬೇರೆ ಇಯತ್ತೆಗಳ ವಿದ್ಯಾರ್ಥಿಗಳ ಭಾಷಾಜ್ಞಾನವನ್ನೂ ಮನೋವಿಕಾಸವನ್ನೂ ಮನದಂದು ಎಲ್ಲ ವಿಷಯಗಳನ್ನು ಸುಲಭ ಭಾಷೆಯಲ್ಲಿ ಮಂಡಿಸಲು ಯತ್ನಿಸಲಾಗಿದೆ. ಅಭ್ಯಾಸಕ್ರಮದಲ್ಲಿ ತೋರಿಸ ಲಾದ ಪದ್ಧತಿಯಂತೆಯೇ ಪುಸ್ತಕವನ್ನು ವಿಭಾಗಿಸಲಾಗಿದೆ. ಪುಸ್ತಕದಲ್ಲಿಯ ಒಂದೊಂದು ಖಂಡವು ಬಹಳ ದೊಡ್ಡದಾಗಿದ್ದರೆ ಅದನ್ನು ಪುನರ್ವಿಭಾಗಿಸಿ ಹೊಸ ಶೀರ್ಷಿಕೆಗಳನ್ನು ಕೊಡಲಾಗಿದೆ. ಇದರಿಂದ ವಿಷಯ ಪರಿಚಯಕ್ಕೆ ಸಹಾಯ ವಾಗುವದು.

೫. ಈ ಉಪಭಾಗಗಳ ಕೊನೆಗೆ ಪ್ರಶ್ನೆಗಳನ್ನು ಪೂರೈಸಲಾಗಿದೆ. ಇದಲ್ಲದೆ ಮೂರು ನಾಲ್ಕು ಪಾಠಗಳಾದ ಮೇಲೆ ಅಭ್ಯಾಸಕ್ಕೆಂದು ವಿಚಾರಪ್ರಚೋದಕವಾದ ಮತ್ತು ಶೋಧಕಬುದ್ಧಿಯನ್ನು ಜಾಗೃತಗೊಳಿಸುವ ಪ್ರಶ್ನೆಗಳನ್ನು ಕೊಡಲಾಗಿದೆ.

೬. ಇದರ ಜೊತೆಗೆ 'ಅಭ್ಯಾಸ–ಮನನ' ಗಳಿಗಾಗಿ ಕೆಲವೊಂದು ಐತಿಹಾ ಸಿಕ ಅವತರಣಿಕೆ, ಮಹತ್ವದ ಟಿಪ್ಪಣಿ, ( ಉತ್ ಖನನವೆಂದರೇನು ? ಇ. ) ಮೊದ ಲಾದವುಗಳನ್ನೂ ಪೂರೈಸಿದೆ. ಈ ಮೂಲಕ ಜ್ಞಾನಲಾಲಸೆಗೆ ಯೋಗ್ಯ ಮಾರ್ಗ ದರ್ಶನವಾದೀತೆಂದು ಆಶಿಸಲಾಗಿದೆ. ಈ ಅಭ್ಯಾಸ–ಮನನಗಳು ಮುಗಿದಲ್ಲಿ ಒಂದು ಸ್ವಾಭಾವಿಕ ವಿಭಾಗವು ಮುಗಿದಂತಾಗಿದೆ.

೭. ಮಧ್ಯಂತರದಲ್ಲಿ ಜಗತ್ತು ಮತ್ತು ಭಾರತ ಇವುಗಳಲ್ಲಿಯ ಸಮಕಾಲೀನ ಘಟನೆಗಳ ಪರಿಚಯವಾಗಬೇಕೆಂದು ತುಲನಾತ್ಮಕ ಕಾಲಪಟಗಳನ್ನು ಕೊಟ್ಟಿದೆ. ಪರಿಶಿಷ್ಟಗಳಲ್ಲಿ ವಂಶಾವಳಿಗಳನ್ನು ಒದಗಿಸಲಾಗಿದೆ.

೮. ವಿಷಯ ಪರಿಚಯವಾಗಲು ಸಹಾಯಕವೆಂದು ಅನೇಕ ಸಾಮಾನ್ಯ ಚಿತ್ರ, ನಕಾಶಗಳನ್ನೂ ಐತಿಹಾಸಿಕ ಪ್ರಸಂಗಗಳ ಸಂಕಲನ ಮಾಡಿದ ಕೆಲವು ವಿಶಿಷ್ಟ ಚಿತ್ರಗಳನ್ನೂ ಪುಸ್ತಕದಲ್ಲಿ ಸೇರಿಸಲಾಗಿದೆ.

೯. ಈ ರೀತಿಯಾಗಿ ಇತಿಹಾಸದ ಈ ಪುಸ್ತಕವನ್ನು ಶೈಕ್ಷಣಿಕ ದೃಷ್ಟಿಯಿಂದ ಉಪಯುಕ್ತಗೊಳಿಸಲು ಸಾಧ್ಯವಿದ್ದ ಎಲ್ಲ ಪ್ರಯತ್ನವನ್ನು ಮಾಡಲಾಗಿದೆ.

೧೦. ಈ ಪುಸ್ತಕದ ಅಭ್ಯಾಸಮಾಡಿಸುವಾಗ ಶಿಕ್ಷಕರಿಗೆ ಜಾಗತಿಕ ಇತಿಹಾ ಸದ ಜ್ಞಾನವಿರುವದು ಅಗತ್ಯವಿದೆ. ಮತ್ತು ಭಾರತೀಯ ಜೀವನದ ಸಮಗ್ರ ವಿಕಾ ಸದ ಅರಿವು ಅವರಿಗಿರಬೇಕು. ಈ ಎರಡು ವಿಷಯಗಳನ್ನು ಸಾಧ್ಯಗೊಳಿಸಲು

(೧) ಶ್ರೀ ಎಚ್. ಜಿ. ವೆಲ್ಸ್ಸರ 'ಅವುಟ ಲಾಯಿನ ಹಿಸ್ಟರಿ' ಇಲ್ಲವೆ 'ಶಾರ್ಟ ಹಿಸ್ಟರಿ ಆಫ್ ದಿ ವರ್ಲ್ಡ' (೨) ಶ್ರೀ. ಪಣಿಕ್ಕರರ 'ಎ ಸರ್ವೆ ಆಫ ಇಂಡಿಯನ್ ಹಿಸ್ಟರಿ' (೩) ಪಂಡಿತ ಜವಾಹರಲಾಲ ನೆಹರು ಇವರ 'ಡಿಸ್ಕವರಿ ಆಫ್ ಇಂಡಿಯಾ' ಈ ಮೂರು ಪುಸ್ತಕಗಳನ್ನು ಶಿಕ್ಷಕರು ಮೊದಲಿಗೆ ಅವಶ್ಯವಾಗಿ ಓದಬೇಕು; ಅನಂತರ ಮಾನವೀಯ ಇತಿಹಾಸದ ವಿಕಾಸದಲ್ಲಿ ಭಾರತದ ಕಾಣಿಕೆಯೇನೆಂಬುದನ್ನು ವಿಶೇಷ ವಾಗಿ ಪರಿಶೀಲಿಸಿದ ಶ್ರೀ. ಅರವಿಂದರ 'ದಿ ಫೌಂಡೇಶನ್ಸ್ ಆಫ್ ಇಂಡಿಯನ್ ಕಲ್ಚರ್' ಮತ್ತು ಶ್ರೀ. ಶಶಿರಕುಮಾರ ಮಿತ್ರರ 'ವ್ಹಿಜನ್ ಆಫ್ ಇಂಡಿಯಾ' ಎಂಬೆರಡು ಗ್ರಂಥಗಳನ್ನೂ ಓದಿ ಐತಿಹಾಸಿಕ ಜ್ಞಾನಭಾಂಡಾರವನ್ನು ಪೂರ್ಣ ಗೊಳಿಸಬೇಕು, ಎಂದು ಬಿನ್ನಹ.

೧೧. ಈ ಪುಸ್ತಕವನ್ನು ಬರೆಯುವಾಗ ಅನೇಕ ಪುಸ್ತಕಗಳ ಉಪಯೋಗ ಮಾಡಿಕೊಳ್ಳಲಾಗಿದೆ. ಆಯಾ ಗ್ರಂಥಕಾರರಿಗೆ ನಾವು ಋಣಿಯಾಗಿರುವೆವು. ಪುಸ್ತಕವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಮುದ್ರಣಾಲಯಗಳ ಒಡೆಯರಿಗೂ ಕಾರ್ಯಕರ್ತರಿಗೂ ನಮ್ಮ ವಿಶ್ವಾಸದ ವಂದನೆಗಳು.

೧೨. ಹೊಸ ಅಭ್ಯಾಸಕ್ರಮದಂತೆ ಈ ಇತಿಹಾಸವನ್ನು ಕಲಿಸುವಾಗ ಅನು ಭವಕ್ಕೆ ಬರುವ ಅಡೆ–ತಡೆಗಳನ್ನು ನಮಗೆ ತಿಳಿಸಬೇಕೆಂದು ಕೊನೆಗೆ ಮತ್ತೊಮ್ಮೆ ಅತಿ ಆಗ್ರಹದಿಂದ ಬಿನ್ನವಿಸಿ ಈ ಪ್ರಸ್ತಾವನೆಯನ್ನು ಪೂರ್ಣಗೊಳಿಸುವೆವು.

ಗಣರಾಜ್ಯದಿನ, ೨೬ ಜನೇವರಿ ೧೯೫೫.

ಲೇಖಕರು.

# ಪರಿವಿಡಿ

# ಜಗತ್ತು ಮತ್ತು ಭಾರತ

ಎಂದರೆ

**ಜಾಗತಿಕ ಹಿನ್ನೆಲೆಯಲ್ಲಿ ಭಾರತದ ವಿಹಂಗಮ ಇತಿಹಾಸ**

# ಮೊದಲನೆಯ ಪುಸ್ತಕ

## ಮೊದಲ ಮಾತು

**ಜಗತ್ತು, ಪೃಥ್ವಿ ಮತ್ತು ವಿಶ್ವ:—** ನಾವಿರುವ ದೇಶ ಭಾರತ. ಭಾರತವು ಮಾನವೀಯ ಜಗತ್ತಿನ ಒಂದು ಭಾಗ; ಮಾನವೀಯ ಜಗತ್ತು ಪೃಥ್ವಿಯ ಒಂದು ಭಾಗ; ಪೃಥ್ವಿ ವಿಶ್ವದ ಒಂದು ಭಾಗ. [ಹೀಗೆಯೇ ವಿಚಾರವು ಮುಂಬರಿದರೆ ವಿಶ್ವವೂ ಯಾವುದೋ ಒಂದು ಅನಂತ ಶಕ್ತಿಯ ಭಾಗವೋ ಏನೋ ಎಂಬುದು ಕಲ್ಪನೆಗೆ ಮೀರಿದ ಮಾತು.] ಇಂದು ಯಾವದೊಂದು ದೇಶದ ಬಗ್ಗೆ ನಾವು ವಿಚಾರಮಾಡು ವಾಗ, ದೇಶಕ್ಕಿಂತ ದೊಡ್ಡದಾದ ಜಗತ್ತು, ಜಗತ್ತಿಗಿಂತ ಹಿರಿದಾದ ಪೃಥ್ವಿ, ಪೃಥ್ವಿಗೂ ಮಿಗಿಲಾದ ವಿಶ್ವ ಇವುಗಳ ವಿಷಯವನ್ನು ಗಮನಿಸುವುದು ಅವಶ್ಯ. ಏಕೆಂದರೆ ಭಾರತವು ವಿಶ್ವದ ಒಂದು ಚಿಕ್ಕ ಭಾಗವಾಗಿದೆ. ಭಾರತ ಮತ್ತು ವಿಶ್ವಗಳ ಸಂಬಂಧ ವನ್ನು, ಉಗಿಬಂಡಿ–ಪ್ರಯಾಣಿಕರ ಉಪಮೆಯಿಂದ ಹೀಗೆ ಮನಗಾಣಬಹುದು. ಉಗಿ ಬಂಡಿಯಲ್ಲಿ ನಾವು ಅಲ್ಲಿಂದಿಲ್ಲಿಗೆ ಅಡ್ಡಾಡುತ್ತೇವೆ, ಅವರಿವರೊಡನೆ ಮಾತಾಡುತ್ತೇವೆ, ಒಮ್ಮೊಮ್ಮೆ ಮುಂಭಾಗಕ್ಕೂ ಬರುತ್ತೇವೆ; ರಾತ್ರಿಯಲ್ಲಿ ಮಲಗಿರುತ್ತೇವೆ; ಆದರೆ ಉಗಿಬಂಡಿಯ ಪ್ರವಾಸ ಸತತವಾಗಿ ಸಾಗಿರುತ್ತದೆ; ಪ್ರಯಾಣಿಕನು ಅಲ್ಲಿ ಕುಳಿತು ಮುಂದುವರಿಯುತ್ತಲೇ ಇರುತ್ತಾನೆ. ಈ ಉಪಮೆಯನ್ನು ಹೀಗೆಯೆ ಮುಂದುವರಿಸಿ, ಎಂಜಿನ್ ನಡಿಸುವವನು ಗಾಡಿಯ ಗತಿಯನ್ನು ಹೆಚ್ಚು ಕಡಿಮೆ ಮಾಡಲೂ, ನಿಲ್ಲಿ ಸಲೂ ಸಮರ್ಥನಾಗಿರುವಂತೆ, ಜಗತ್ತಿನ ಇತಿಹಾಸದ ಚಕ್ರಗಳು ಕರ್ತೃತ್ವಶಾಲಿ ಪುರುಷರ ಪರಾಕ್ರಮದಿಂದ ತಿರುಗುತ್ತಿರುತ್ತವೆ, ಮತ್ತು ಅವುಗಳ ಗತಿ ಹೆಚ್ಚು ಕಡಿಮೆಯಾಗುತ್ತದೆ.

**ವಿವಿಧ ದೇಶಗಳ ಪರಸ್ಪರ ಪರಿಣಾಮ:—** ಪೃಥ್ವಿಯ ಮೇಲ್ಮೈಯ ಮೇಲೆ ಅನಂತಕಾಲದ ವರೆಗೆ ನೈಸರ್ಗಿಕ ಆಂದೋಲನಗಳಾಗುತ್ತಾಗುತ್ತ ಹಿಂದುಸ್ತಾ ನವು ಅಥವಾ ಭಾರತವು ಹುಟ್ಟಿಕೊಂಡಿತು. ಈಜಿಪ್ತ, ಬಾಬಿಲೋನಿಯ, ಗ್ರೀಸ್,

ಇರಾಣ, ಚೀನ ಮೊದಲಾದ ಹಲವು ದೇಶಗಳು ಭೂತಳದಲ್ಲಿ ತಲೆದೋರಿದ್ದೂ ಹೀಗೆಯೇ. ಈ ಎಲ್ಲ ಕಡೆಗಳಲ್ಲಿಯೂ ಮನುಷ್ಯರು ನೆಲೆಗೊಂಡು ತಮ್ಮ ಜೀವನವನ್ನು ಸಮೃದ್ಧಪಡಿಸಿಕೊಳ್ಳಲು ಹೆಣಗಿದರು. ಅತಿ ಪ್ರಾಚೀನಕಾಲದಲ್ಲಿ ದೇಶದಿಂದ ದೇಶಕ್ಕೆ ಅಡ್ಡಾಡುವುದು ಈಗಿನ ಹಾಗೆ ಸಾಧ್ಯವಿರಲಿಲ್ಲ. ಮಾರ್ಗಗಳು ತೀರ ಕಡಿಮೆ ಯಿದ್ದವು; ಸಾಧನಗಳ ಅಭಾವವಿತ್ತು; ಪ್ರವಾಸವು ಸಂಕಟಕಾರಕವೂ ಆಗಿತ್ತು. ಆದರೂ ಸಾಹಸಿಗಳು ದೂರದವರೆಗೂ ಪ್ರವಾಸಮಾಡುತ್ತಿದ್ದರು. ಇದರಿಂದ ಪರಸ್ಪರ ರಲ್ಲಿ ವಿಚಾರಗಳ ಮತ್ತು ವಸ್ತುಗಳ ವಿನಿಮಯ ನಡೆಯುತ್ತಿತ್ತು ಮತ್ತು ಭೌಗೋಲಿಕ ಪರಿಸ್ಥಿತಿಗನುಸಾರವಾಗಿ ಒಂದು ಕಡೆ ಹೆಚ್ಚಾಗಿ, ಒಂದು ಕಡೆ ಕಡಿಮೆ ಸಂಬಂಧ ಬರುತ್ತಿತ್ತು ಅಷ್ಟೆ. ಈಚೀಚೆಗೆ ಉಗಿಹಡಗು, ವಿಮಾನ, ತಂತಿಯಂತ್ರ ಮೊದಲಾದವು ಗಳ ಮೂಲಕ ದೇಶಗಳೆಲ್ಲ ಒಂದಕ್ಕೊಂದು ಸಮೀಪವೆನಿಸುತ್ತಿವೆ. ಒಂದು ದೇಶದಲ್ಲಿಯ ಘಟನೆಯ ಪರಿಣಾಮವು ಇನ್ನೊಂದು ದೇಶದ ಮೇಲೆ ಕೂಡಲೆ ಆಗುತ್ತದೆ. ಮೊದಲ ನೆಯ ಮತ್ತು ಎರಡನೆಯ ಮಹಾಯುದ್ಧಗಳಿಂದ ಈ ಮಾತು ಎಲ್ಲರ ಅನುಭವಕ್ಕೂ ಬಂದಿದೆ.

**ಜಾಗತಿಕ ಹಿನ್ನೆಲೆ:**—ಜಾಗತಿಕ ಸಂಬಂಧವು ಪ್ರಾಚೀನಕಾಲದಲ್ಲಿ ಇಂದಿನಷ್ಟು ನಿಕಟವಾಗಿದ್ದಿಲ್ಲ ನಿಜ. ಆದರೆ ಈ ವಿಷಯವನ್ನು ದುರ್ಲಕ್ಷಿಸಿದರೆ ಯಾವ ದೇಶದ ಇತಿಹಾಸವೂ ಸರಿಯಾಗಿ ತಿಳಿಯಲಾರದು. ಭಾರತದ ಮಟ್ಟಿಗೆ ಹೇಳುವದಾದರೆ, ಪ್ರಾಚೀನಕಾಲದಿಂದ ನಾಲ್ಕೈದು ಸಾವಿರ ವರ್ಷಗಳ ಅವಧಿಯಲ್ಲಿ ಅನೇಕ, ವಿವಿಧ ಜನಸಮೂಹಗಳು ಈ ದೇಶಕ್ಕೆ ಬಂದಿವೆ; ಅವರೆಲ್ಲರ ಆಗಮನವನ್ನು ಲೆಕ್ಕಕ್ಕೆ ತೆಗೆದು-ಕೊಳ್ಳದೆ ಭಾರತೀಯ ಜೀವನದ ಸಮಗ್ರ ಚಿತ್ರವು ಕಣ್ಮುಂದೆ ಬರಲಾರದು. ಭಾರತೀಯ ಸಂಸ್ಕೃತಿ ಸಂಮಿಶ್ರವಾದದ್ದು. ಭಿನ್ನ ಭಿನ್ನ ವರ್ಗಗಳ ಸಹಕಾರ್ಯ—ಸಾಹಚರ್ಯ-ಸಂಮಿಲನಗಳು ಈ ದೇಶದಲ್ಲಾಗಿವೆ. ಅದೇಕೆ, ಜಗತ್ತಿನ ಬೇರೆ ಯಾವುದೇ ಭಾಗಕ್ಕಿಂತ ಭಾರತದಲ್ಲಿ ಈ ಸಹಕಾರ್ಯದ ಪ್ರಯೋಗವು ಹೆಚ್ಚು ಯಶಸ್ವಿಯಾಗಿದೆ. ಇದು ಚೆನ್ನಾಗಿ ಮನವರಿಕೆಯಾಗುವುದಕ್ಕಾಗಿ ಜಗತ್ತಿನಲ್ಲಿಯ ಯಾವ ಯಾವ ಭಿನ್ನ ಸಂಸ್ಕೃತಿ ಗಳ ಛಾಯೆ ಭಾರತದ ಮೇಲೆ ಬಿದ್ದಿದೆಯೋ ಅವುಗಳ ಹಿನ್ನೆಲೆಯಲ್ಲಿ ಭಾರತದ ಜೀವನ ಚಿತ್ರವನ್ನು ಇಲ್ಲಿ ರೇಖಿಸಲಾಗಿದೆ. 'ಜಾಗತಿಕ ಹಿನ್ನೆಲೆಯಲ್ಲಿ ಭಾರತದ ವಿಹಂಗಮ ಇತಿಹಾಸ' ಎಂದು ಈ ಪುಸ್ತಕಕ್ಕಿಟ್ಟ ಉಪನಾಮದ ಮರ್ಮವು ಇದೇ.

**ಸ್ವತಂತ್ರ ಭಾರತದ ಕಾರ್ಯ**—ಹೀಗೆ ಅಭ್ಯಾಸ ಮಾಡುವುದಕ್ಕೆ ಭಾರತದ ದೃಷ್ಟಿಯಿಂದ ಇನ್ನೂ ಒಂದು ಕಾರಣವಿದೆ. ಭಾರತವು ಇಂದು ಸ್ವತಂತ್ರವಾಗಿದೆ,ಪ್ರಜಾ ಸತ್ತಾತ್ಮಕ ರಾಜ್ಯವು ಇಲ್ಲಿ ಸ್ಥಾಪಿತವಾಗಿದೆ. ಅನ್ಯರಾಷ್ಟ್ರಗಳಮೇಲೆ ತನ್ನ ಧೋರಣದ ಪರಿಣಾಮವನ್ನು ಬೀರುವ ಸಾಮರ್ಥ್ಯವು ಭಾರತಕ್ಕೆ ಸ್ವಾತಂತ್ರ್ಯದಿಂದ ಬಂದಿದೆ. ಇಂತಹ ಸಮಯದಲ್ಲಿ, ಭಾರತದ ಇತಿಹಾಸದೊಂದಿಗೆ ಇತರ ದೇಶಗಳಲ್ಲಿಯ ಸಮ ಕಾಲೀನ ದೊಡ್ಡ ಚಳವಳಿಗಳನ್ನು ಅಭ್ಯಾಸಿಸುವುದರಿಂದ ಜಾಗತಿಕ ಪುನರ್ಘಟನೆಯಲ್ಲಿ ಭಾರತವು ಜೋಕೆಯಿಂದಲೂ ಬುದ್ಧಿವಂತಿಕೆಯಿಂದಲೂ ಭಾಗವಹಿಸಲು ಸಾಧ್ಯವಾಗು

ವುದು. ಈಗ ಏಕಾಕಿಯಾಗಿ ಇದ್ದೇನೆಂಬುದು ಯಾವ ದೇಶಕ್ಕೂ ಶಕ್ಯವಿಲ್ಲ. ನಾವು ಯುದ್ಧಮಾಡುವುದಿಲ್ಲ ಎಂದು ಒರಿ ಹೇಳಿದರೆ ನಡೆಯದು; ಯುದ್ಧ ಮಾಡಬಾರದು ಎಂದು ಇತರರಿಗೂ ಮನವಟ್ಟಿ ಎನಿಸಬೇಕು; ಯಾರಾದರೂ ತಪ್ಪಿ ಕೈಮಾಡಲೆಳಸಿದರೆ ಅವರಿಗೆ ಯುದ್ಧವೆಂಬುದು ಅಶಕ್ಯವಾಗುವ ದೃಷ್ಟಿಯಿಂದ ಪ್ರಯತ್ನಿಸುವುದು ಅವಶ್ಯಕವಾಗಿದೆ.

**ಅಂತರರಾಷ್ಟ್ರೀಯ ದೃಷ್ಟಿ :—** ಜಗತ್ತಿನಲ್ಲಿಯ ರಾಷ್ಟ್ರರಾಷ್ಟ್ರಗಳಲ್ಲಿ ಜಗಳಗಳಾಗಬಾರದು; ಜಗಳ ಹುಟ್ಟಿದರೂ ಶಾಂತತೆಯಿಂದ ಬಗೆಹರಿಯುವಂತೆ ಮಾಡಬೇಕು ಎಂಬ ಉದ್ದೇಶದಿಂದ ‘ ಯುನೋ ’ ಎಂಬ ಸಂಸ್ಥೆ ಅಸ್ತಿತ್ವದಲ್ಲಿ ಬಂದಿದೆ. ಅದರಲ್ಲಿ ಇನ್ನೂ ಕೆಲ ದೋಷಗಳಿವೆ ಎಂಬುದು ಎಲ್ಲರಿಗೂ ತಿಳಿದ ಮಾತು. ನಾವು ಅದನ್ನು ಸರಿಪಡಿಸಬೇಕಾಗಿದೆ ರಾಷ್ಟ್ರೀಯತ್ವದ ಅಭಿಮಾನವನ್ನು ಬಿಡದೆ, ಅಂತರರಾಷ್ಟ್ರೀಯ ಕರ್ತವ್ಯಗಳನ್ನು ನೆರವೇರಿಸುವ ಹೊಣೆ ನಾಗರಿಕರ ಮೇಲೆ ಬೀಳುತ್ತಿದೆ. ‘ ನಾವೂ ಬಾಳುತ್ತೇವೆ, ನೀವೂ ಬಾಳಿರಿ ’ ಎಂಬ ಸಹಜೀವನ ವೃತ್ತಿ ಎಲ್ಲ ದೇಶಗಳಲ್ಲಿಯೂ ಉಂಟಾಗಬೇಕು. ಇಂತಹ ಸಹಜೀವನವು ತಾಳಿ ನಿಲ್ಲಬೇಕಾದರೆ ಭಿನ್ನ ಭಿನ್ನ ದೇಶಗಳಿಗೆ ಅನ್ಯದೇಶಗಳ ಪರಿಚಯವಿರುವುದು ಅಗತ್ಯವಲ್ಲವೇ? ನಮ್ಮ ರಾಷ್ಟ್ರದ ಮಟ್ಟಿಗೆ ನೋಡುವ ದೃಷ್ಟಿಯನ್ನು ವಿಶಾಲಗೊಳಿಸಿ, ಎಲ್ಲೆಲ್ಲಿ ಏನು ನಡೆದಿದೆ ಎಂದು ಅರಿತುಕೊಳ್ಳುವುದು ಇಂದಿನ ಸುಶಿಕ್ಷಿತ ನಾಗರಿಕರ ಕರ್ತವ್ಯವಾಗಿದೆ. ಆದುದರಿಂದ ಭಾರತದ ಇತಿಹಾಸದ ಅಧ್ಯಯನದೊಂದಿಗೆ ಜಗತ್ತಿನ ಇತಿಹಾಸದ, ಕನಿಷ್ಠಪಕ್ಷ, ಅದರಲ್ಲಿಯ ಸಮಕಾಲೀನ ಚಳವಳಿಗಳ ಸ್ಥೂಲಜ್ಞಾನವಾಗುವುದು ಇಷ್ಟವಾಗಿದೆ. ಈ ಪುಸ್ತಕದಲ್ಲಿ ಆ ದೃಷ್ಟಿಯಿಂದ ಪ್ರಯತ್ನಿಸಲಾಗುವುದು.

**ಅಭ್ಯಾಸಕ್ಕಾಗಿ ವರ್ಗೀಕರಣ :—** ಮೊದಲನೆಯ ಖಂಡದಲ್ಲಿ, ಮಾನವನು ಸೃಜಿಸಿದ ನಿನ್ನೇವಾ, ಈಜಿಪ್ತ, ಇರಾಣೀ ಇತ್ಯಾದಿ ಸಂಸ್ಕೃತಿಗಳ ಅಭ್ಯಾಸ ಮಾಡು ಮಾಡುತ್ತ, ಆರ್ಯಸಂಸ್ಕೃತಿಯ ಗುರುತು ಮಾಡಿಕೊಳ್ಳಬೇಕಾಗಿದೆ. ಕ್ರಿಸ್ತ ಪೂರ್ವ ಸಾವಿರಾರು ವರುಷಗಳಿಂದ ಐತಿಹಾಸಿಕ ಕಾಲದ ವರೆಗೆ ಮಾನವನ, ಅದರಲ್ಲಿಯೂ ಭಾರತದ ಪ್ರಗತಿ ಹೇಗಾಯಿತೆಂಬುದರ ವರ್ಣನೆ ಈ ಖಂಡದಲ್ಲಿ ಬರುವುದು. ಸುಮಾರಾಗಿ ಕ್ರಿ. ಪೂ. ಸಾವಿರಾರು ವರುಷಗಳಿಂದ ಕ್ರಿ. ಶ. ೧೦೦೦ದ ವರೆಗಿನದು ಈ ಕಾಲ.

ಎರಡನೆಯ ಖಂಡದಲ್ಲಿ ಸಾಧಾರಣವಾಗಿ ಕ್ರಿ. ಶ. ೧೦೦೦ ದಿಂದ ಕ್ರಿ. ಶ. ೧೮೦೦ರ ವರೆಗಿನ ಭಾರತದಲ್ಲಿಯ ರಾಜ್ಯಗಳ ಮತ್ತು ಅದೇ ಕಾಲದಲ್ಲಿ ಘಟಿಸಿದ ಯುರೋಪಿಯ ಜಾಗೃತಿಯ ಮತ್ತು ಪ್ರಯತ್ನಗಳ ಸಮಾಲೋಚನೆ ಮಾಡಬೇಕಾಗಿದೆ.

ಮೂರನೆಯ ಖಂಡದಲ್ಲಿ, ಭಾರತದಲ್ಲಿ ಆಂಗ್ಲರಾಜ್ಯ ಸ್ಥಿರವಾದಂದಿನಿಂದ ಮುಂದಿನ ಇತಿಹಾಸವನ್ನು ಅರಿತುಕೊಳ್ಳುವುದಿದೆ. ಇಂಗ್ಲಂಡಿನಲ್ಲಿ ನಡೆದುಬಂದಿದ್ದ, ಈಗಲೂ ನಡೆದಿರುವ ಪ್ರಜಾಪ್ರಭುತ್ವವು ಈ ಕಾಲದಲ್ಲಿ ಹೇಗೆ ವಿಕಾಸಗೊಂಡಿತು ಅಮೇರಿಕೆಯಂತಹ ಹೊಸ ರಾಷ್ಟ್ರವು ಹೇಗೆ ಸ್ವತಂತ್ರವಾಯಿತು ಎಂಬುದನ್ನು

**ಜೀವದ ಉತ್ಪತ್ತಿ:** ವಿಶ್ವದ ಉತ್ಪತ್ತಿಯಿಂದ ಭಾರತದ ಇತಿಹಾಸಕಾಲದ ಆರಂಭದ ವರೆಗಿನ ಇತಿಹಾಸಪೂರ್ವಕಾಲದ ಅದ್ಭುತರಮ್ಯ ಸಂಗತಿಗಳನ್ನು, ತಜ್ಞರೂ ಅಸ್ಪಷ್ಟವಾಗಿಯೇ ಜೋಡಿಸಿದ್ದಾರೆ. ಅದರ ಸಾರಾಂಶವಿಷ್ಟು: ಸುಮಾರು ೨೦೦ ಕೋಟಿ ವರುಷಗಳ ಹಿಂದೆ ಭರದಿಂದ ತಿರುಗುತ್ತಿದ್ದ ಸೂರ್ಯನಿಂದ ಒಂದು ಸಣ್ಣ ತುಣುಕು ದೂರ ಸಿಡಿದು ಪೃಥ್ವಿಯಾಯಿತು. ಈ ಪೃಥ್ವಿಯ ವ್ಯಾಸವು ಸುಮಾರು ೮೦೦೦ ಮೈಲು; ಸೂರ್ಯನ ವ್ಯಾಸವು ಸು. ೮೬೬ ಸಾವಿರ ಮೈಲು; ಸೂರ್ಯನಿಂದ ಪೃಥ್ವಿಯು ಅಂತರವು ೯೩೦ ಲಕ್ಷ ಮೈಲು. ಸೂರ್ಯ-ಪೃಥ್ವಿಗಳ ಈ ಆಕಾರ ಅಂತರಗಳನ್ನು ಸಣ್ಣ ಪ್ರಮಾಣದಲ್ಲಿ ತಿಳಿಸುವುದಾದರೆ ಪೃಥ್ವಿಯ ವ್ಯಾಸವು ೧ ಇಂಚೆಂದು ತಿಳಿದರೆ ಸೂರ್ಯನ ವ್ಯಾಸವು ೧೦೮ ಇಂಚು, ಅವೆರಡರ ನಡುವಿನ ಅಂತರ ೧೧೬೨೮ ಇಂಚು ಇರುವುದೆಂದು ಹೇಳಬಹುದು. ಸೂರ್ಯನಿಂದ ಸಿಡಿದು ಬಂದ ಬಳಿಕ ಪೃಥ್ವಿಯಲ್ಲಿ ೧೬೦–೧೭೦ ಕೋಟಿ ವರುಷಗಳ ವರೆಗೆ ಅತ್ಯುಷ್ಣತೆಯ ಮೂಲಕ ಜೀವದ ಉತ್ಪತ್ತಿಯಾಗಲಿಲ್ಲ. ಈ ಅಚೇತನ ಕಾಲದಲ್ಲಿ ಪೃಥ್ವಿ ಮೆಲ್ಲಮೆಲ್ಲನೆ ತಣ್ಣಗಾಗುತ್ತ ಬಂದ ಮೇಲೆ ಬಿಸಿಲಿನಿಂದ ಬೆಚ್ಚಗಾದ ನೆರಳಲ್ಲಿದ್ದ ನೀರಿನಲ್ಲಿ ಜೀವವು ಹುಟ್ಟಿತು. ಈ ಸಚೇತನ ಯುಗದ ಆರಂಭದಲ್ಲಿ ಸೂಕ್ಷ್ಮ ಆಕಾರದ ಈ 'ಆದಿ ಜೀವ' ವು ನುಣುಪಾಗಿಯೂ ಜಿಗುಟಾಗಿಯೂ ಇರುವ ತಳತಳಿಸುವ ತೆಳುವಾದ ಪರೆಯ ರೂಪದಲ್ಲಿ ಇದ್ದಿರಬೇಕು. ಅಂದಿನಿಂದ ಇಂದಿನ ವರೆಗಿನ ೩೦ ಕೋಟಿ ವರುಷಗಳಲ್ಲಿ ವಿವಿಧ ಪರಿಸ್ಥಿತಿಯಲ್ಲಿ ಅನೇಕ ಅವಸ್ಥಾಂತರಗಳಾಗುತ್ತ ಭೂಮಿಯ ಮೇಲೆ ಲಕ್ಷಾವಧಿ ಪ್ರಾಣಿಗಳು ಉತ್ಕ್ರಾಂತವಾದವು.

**ಉತ್ಕ್ರಾಂತಿ:** ಈ ಸಚೇತನ ಯುಗದಲ್ಲಿ ಶಾಸ್ತ್ರಜ್ಞರು ಮೂರು ಖಂಡಗಳನ್ನು ಕಲ್ಪಿಸಿದ್ದಾರೆ. ಮೊದಲ ಕಾಲಖಂಡದಲ್ಲಿ, ಮೇಲೆ ಬಣ್ಣಿಸಿದ 'ಆದಿ ಜೀವ' ವು ಅವಸ್ಥಾಂತರವನ್ನು ಹೊಂದುತ್ತ, ನೀರು-ನೆಲಗಳ ಸೀಮಾಪ್ರದೇಶದಲ್ಲಿ ಜೀವಿಸಲರ್ಹವಾದ ಭೂ-ಜಲ-ಜೀವಿಯು ಉತ್ಕ್ರಾಂತವಾಯಿತು. ಎಂದರೆ ಆದಿ ಜೀವವು ಇಲ್ಲದಂತಾಯಿತೆಂದು ಅರ್ಥವಲ್ಲ; ಉತ್ಕ್ರಾಂತಿಗೆ ನಿಸರ್ಗದ ಸಾಹಾಯ್ಯವು ದೊರೆತಂತಹವು ಮಾತ್ರ ಅವಸ್ಥಾಂತರ ಹೊಂದಿದವೆಂದೂ ಉಳಿದವು ಮೊದಲಿನ ಅವಸ್ಥೆಯಲ್ಲಿಯೇ ಉಳಿದವೆಂದೂ ತಿಳಿಯಬೇಕು. ಇದರ ಮುಂದಿನ ಕಾಲದಲ್ಲಿ ಹೊಟ್ಟೆಹೊಸೆಯುವ ಹಾಗೂ ಮೊಟ್ಟೆಯಿಡುವ ಪ್ರಾಣಿಗಳ ಬೆಳವಣಿಗೆಯಾಯಿತು. ನೀರಲ್ಲಿಯ ಹಾವಸೆಯಿಂದ ವನಸ್ಪತಿಗಳೂ ವೃಕ್ಷಗಳೂ ಉಂಟಾದವು. ನೀರು ಅಟ್ಟಿಸಿ ಅಖಂಡವಾದ ಪೃಷ್ಠಭಾಗವು ಇಲ್ಲದಂತಾದಲ್ಲಿ ಟುಣಕ್ಕನೆ ಜಿಗಿದು ಬೇರೆ ಕಡೆ ಹೋಗುವ ಹಾಗೂ ಹಾರುವ ಪಕ್ಷಿಗಳ ಉದಯವು ಆಯಿತು. ಇಂತಹ ಸ್ಥಿತಿಯಲ್ಲಿಯೂ ಲಕ್ಷಗಟ್ಟಲೆ ವರುಷಗಳು ಕಳೆದವು. ಆ ಮೇಲೆ ಮೂಳೆಗಳೂ ಬೆನ್ನುಹುರಿಯೂ ಉಳ್ಳ ಸಸ್ತನ ಪ್ರಾಣಿಗಳು ಮೈದೋರಿದವು; ಮತ್ತು ಪೃಥ್ವಿಗೆ ಅದರ ವಿದ್ಯಮಾನ ಸ್ವರೂಪವು ಪ್ರಾಪ್ತವಾಯಿತು. ಇದೇ ಸಚೇತನ ಯುಗದ ಇತ್ತೀಚೆಯ ಕಾಲಖಂಡವು. ಭೂಗರ್ಭದಲ್ಲಿ ದೊರೆಯುವ ಅಸ್ಥಿಪಂಜರಗಳೂ ಈ ಅಸ್ಥಿಮಯ ಜೀವಿಯ ಇತಿಹಾಸವನ್ನು

ಸ್ವಲ್ಪಮಟ್ಟಿಗೆ ತಿಳಿಸಬಲ್ಲವು. ಇದಕ್ಕೂ ಹಿಂದಿನ ಮೇಲೆ ಹೇಳಿದ ಜೀವವಿಕಾಸವು ಶಾಸ್ತ್ರಜ್ಞರು ಅನುಮಾನದಿಂದ ತರ್ಕಿಸಿದ್ದಾಗಿದೆ.*

# ೧. ಮೊಟ್ಟ ಮೊದಲಿನ ಮನುಷ್ಯ

**ಮಾನವನ ಆದ್ಯಪೂರ್ವಜ :—** ಪ್ರಾರಂಭದ ಸಸ್ತನ ಪ್ರಾಣಿಯೇ ಮಾನವನ ಆದ್ಯಪೂರ್ವಜನು. ತೀರ ಮೊದಲು ಅವನು ಹೇಗಿದ್ದನೆಂದು ಯಾರು ಹೇಳಬೇಕು? ಸಂತಾನಕ್ಕೆ ಮೊಲೆಯುಣಿಸುವುದು, ಅಪತ್ಯಪ್ರೇಮಕ್ಕಾಗಿ ತ್ಯಾಗಮಾಡುವುದು, ಸ್ವರಕ್ಷಣೆಗಾಗಿ ಗುಂಪುಗಟ್ಟಿಕೊಂಡಿರುವುದು, ಕಲಿಸಿದುದನ್ನು ಗ್ರಹಿಸಿಕೊಳ್ಳುವ ಪಾತ್ರತೆ, ಅನುಕರಣಪ್ರವೃತ್ತಿ, ಏನಾದರೂ ಸಂಕಟವೊದಗಿದಾಗ ತನ್ನ ಸಹಕಾರಿಗಳಿಗೆ ಕೂಗಿಯೂ ಕಿವಿ ನಿಮಿರಿಸಿಯೂ ತಿಳಿಸುವ ಇಚ್ಛೆ ಇವು ಸಸ್ತನ ಪ್ರಾಣಿಗಳ ಮುಖ್ಯ ಲಕ್ಷಣಗಳು. ಈ ಪ್ರಾಣಿವರ್ಗದಲ್ಲಿ ಮಂಗ ಹುಟ್ಟಿತು. ನರನು ವಾನರನ ಉತ್ಕ್ರಾಂತಸ್ವರೂಪವೆಂದು ಡಾರ್ವಿನ್ ಹೇಳಿದ್ದಾನೆ. ಸಂಸ್ಕೃತದಲ್ಲಿ ವಾ-ನರ ಶಬ್ದವನ್ನು ರಚಿಸಿದ ಪೂರ್ವಜರಿಗೆ ಮನುಷ್ಯ ಮತ್ತು ಮಂಗಗಳಲ್ಲಿಯ ಸಾಮ್ಯದ ಕಲ್ಪನೆಯಿತ್ತೆಂಬುದು ಸ್ಪಷ್ಟವಿದೆ. ಆದರೆ ಇಷ್ಟರಿಂದಲೇ ಮಂಗ ಮತ್ತು ಮಾನವರಲ್ಲಿಯ ಉತ್ಕ್ರಾಂತಿಯ ಸಂಬಂಧವನ್ನು

* ಅಚೇತನ ಯುಗದಿಂದ ಸಚೇತನ ಯುಗದ ಕೊನೆಯ ಭಾಗದ ಆರಂಭವಾಗುವ ವರೆಗೆ ಪೃಥ್ವಿಯ ಮೇಲೆ ಮೂರು ಸಲ ಪ್ರಳಯವಾಯಿತು. ಕೊನೆಯ ನಾಲ್ಕನೆಯ ಪ್ರಳಯವು ೫೦೦೦೦ ವರುಷಗಳ ಹಿಂದೆ ಬಂದಿತ್ತು. ಆಗ ಮಾನವನ ಹೋಲಿಕೆಯ ಪ್ರಾಣಿ ಅಸ್ತಿತ್ವದಲ್ಲಿತ್ತು. ಎರಡು ಪ್ರಳಯಗಳ ನಡುವಿನ ಕಾಲಕ್ಕೆ 'ಹಿಮಯುಗ' ಎಂಬ ಸಂಜ್ಞೆ. ಪ್ರತಿಯೊಂದು ಹಿಮಯುಗದ ಅಂತ್ಯದಲ್ಲಿ ಧ್ರುವಬಿಂದುವಿನಲ್ಲಿದ್ದ ಹಿಮರಾಶಿ ಕರಗಿ ಪರ್ವತಪ್ರಾಯವಾಗಿ ಹರಿದು ಬಂದು ಎಲ್ಲವೂ ಸ್ವಚ್ಛವಾಗಿ ತೊಳೆದುಹೋಯಿತು. ಆಗ ಅವೆಷ್ಟೋ ಜೀವಜೀವಾಣುಗಳು ನಾಶವಾದವು. ಕೆಲವು ಮಾತ್ರ ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಬದುಕಿ ಬಾಳಿದವು. ಪೃಥ್ವಿಯಲ್ಲಿಯ ಐದು ಭೂಖಂಡಗಳು ಅನೇಕ ರೂಪಾಂತರಗಳನ್ನು ಹೊಂದುತ್ತ ಇಂದಿನ ಸ್ವರೂಪವನ್ನು ತಳೆದಿವೆ. ಒಂದಾನೊಂದು ಕಾಲದಲ್ಲಿ ಹಿಮಾಲಯದಂತಹ ಹೆಬ್ಬೆಟ್ಟವು ಕಡಲಿನಲ್ಲಿ ಮುಳುಗಿತ್ತೆಂದೂ ಹಿಂದುಸ್ತಾನದ ದಕ್ಷಿಣ ತುದಿಯಿಂದ ಆಸ್ಟ್ರೇಲಿಯದ ವರೆಗೆ ಅಖಂಡ ಭೂ-ಪ್ರದೇಶವಿತ್ತೆಂದೂ ದಕ್ಷಿಣ ಅಮೇರಿಕೆಯ ಪೂರ್ವ ಬದಿಯ ಅರ್ಧ ವರ್ತುಲಾಕಾರದ ಮುಂದೆ ಹಾಯ್ದ ಭಾಗವು ಆಫ್ರಿಕೆಯ ಪಶ್ಚಿಮದ ಕಡೆಯ ಮಧ್ಯದ ಒಳಸೇರಿದ ಭಾಗಕ್ಕೆ ಹೊಂದಿಕೊಂಡಿತ್ತೆಂದೂ ಹೇಳುತ್ತಾರೆ. ಗ್ರೇಟಬ್ರಿಟನ್ ಸಮೇತವಾಗಿ ಸುಮಾರು ಪೂರ್ಣ ಉತ್ತರ ಯುರೋಪವು ಹಿಮಾಚ್ಛಾದಿತವಾಗಿತ್ತು. ಈ ಎಲ್ಲ ಅದ್ಭುತ ಉತ್ಕ್ರಾಂತಿಯಲ್ಲಿ ಇಂದಿನ ಸ್ವರೂಪವು ಪೃಥ್ವಿಗೆ ಪ್ರಾಪ್ತವಾಗಿ ೫೦೦೦೦ ವರ್ಷಗಳು ಸಂದವು.

ಅವರು ಅರಿತಿದ್ದರೆಂದು ಹೇಳಿದರೆ ಮಾತ್ರ ದುಡುಕಿದಂತಾದೀತು. ಪಶು ಮತ್ತು ಮನುಷ್ಯರಲ್ಲಿಯ ಮುಖ್ಯ ಭೇದಗಳೇನೆಂದರೆ, ಮನುಷ್ಯನು ಮಾತನಾಡುತ್ತಾನೆ, ಬೆಂಕಿ ಹೊತ್ತಿಸುತ್ತಾನೆ, ಎರಡು ಕಾಲುಗಳಿಂದ ನಿಲ್ಲುತ್ತಾನೆ ಎಂದು ಯಾರಾದರೂ ಹೇಳಬಲ್ಲರು. ಆದರೆ ಡಾರ್ವಿನನ ಮತದಂತೆ ಈ ಭೇದವು ಮೂಲಗ್ರಾಹಿಯಲ್ಲ. ಕಾರಣವೇನೇ ಇರಲಿ, ಮನುಷ್ಯನು ಹಸ್ತವನ್ನು ಹೇಗೆ ಮುಷ್ಟಿಮಾಡಬಲ್ಲನೋ ಅಥವಾ ಹೆಬ್ಬೆರಳನ್ನು ಬೇಕಾದ ಬೆರಳಿನ ಎದುರಿಗೆ ಹೇಗೆ ತರಬಲ್ಲನೋ ಹಾಗೆ ಇತರ ಪ್ರಾಣಿಗಳಿಗೆ ಸಾಧ್ಯವಿಲ್ಲ. ಪಶುವಿನಿಂದ ಮಾನವನಲ್ಲಿ ಪರಿವರ್ತನೆ ಎಂಥ ಭರದಿಂದ ಆಗುತ್ತ ಬಂದಿತೆಂಬುದರ ನಿದರ್ಶನವು ಈ ಹಸ್ತವಿಕಾಸದಲ್ಲಿದೆ ಎಂದು ಹೇಳುತ್ತಾರೆ.

ಹತ್ತೊಂಬತ್ತನೆಯ ಶತಮಾನದ ಮಧ್ಯದಲ್ಲಿ ಯುರೋಪದ ಶಾಸ್ತ್ರಜ್ಞರ ಲಕ್ಷ್ಯವು ಭೂಗರ್ಭಶಾಸ್ತ್ರದ ಕಡೆಗೆ ತಿರುಗಿತು. ಅಲ್ಲಲ್ಲಿ ಅಗಿಯುವುದು ಆರಂಭವಾಯಿತು. ಆಗ ಮೊದಲನೆಯ ಪದರಿನಲ್ಲಿ ಇತ್ತೀಚಿಯ ಭೂತಕಾಲದಲ್ಲಿದ್ದ ಪ್ರಾಣಿಗಳ ಅಸ್ಥಿಪಂಜರಗಳು ಸಿಕ್ಕವು. ಅದಕ್ಕಿಂತ ಕೆಳಗಿನ ಪದರಿನಲ್ಲಿ ದೂರದ ಭೂತಕಾಲದಲ್ಲಿಯ ಪ್ರಾಣಿಗಳ ಶೋಧವಾಯಿತು. ಈ ಅಸ್ಥಿಪಂಜರಗಳ ಸಹಾಯದಿಂದ ಮಂಗ ಮನುಷ್ಯರ ನಡುವಿನ ಪ್ರಾಣಿಗಳ ಕ್ರಮವನ್ನು ಹೊಂದಿಸುವ ಅತ್ಯಂತ ಯಶಸ್ವಿ ಪ್ರಯತ್ನವನ್ನು ಶಾಸ್ತ್ರಜ್ಞರು ಮಾಡಿದ್ದಾರೆ.

**ವಾನರನಿಂದ ನರನ ವರೆಗೆ** : ಜರ್ಮನಿಯ ಹೈಡೆಲ್ಬರ್ಗ್ ಎಂಬಲ್ಲಿಯ ಉತ್ಖನನದಲ್ಲಿ ಹೊರಟ ಅಸ್ಥಿಪಂಜರವು ಸುಮಾರು ೫ ಲಕ್ಷ ವರ್ಷಗಳ ಹಿಂದೆ ಜೀವಿಸಿದ್ದ ಮಾನವಸದೃಶವಾದ ಮಂಗನದಿರಬೇಕು. ಹಾಗೆಯೇ ಇಂಗ್ಲಂಡಿನ ಸಸೆಕ್ಸ್ ಪರಗಣೆಯಲ್ಲಿಯೂ ಜಾವಾ ದ್ವೀಪದಲ್ಲಿಯೂ ಅಸ್ಥಿಪಂಜರಗಳು ಸಿಕ್ಕವು. ಅವುಗಳ ದವಡೆ ದುಂಡು ಮಾಟದ್ದಿತ್ತು. ಅದಕ್ಕೆ ಮನುಷ್ಯನಂತಹ ಗದ್ದವೂ ಇರಲಿಲ್ಲ; ಅದು ಮಂಗನಂತೆ ನಾಲ್ಕು ಕಾಲುಗಳಿಂದ ನಡೆಯುತ್ತಿತ್ತು. ಆದರೂ ಅದನ್ನು ಮಾನವಸದೃಶ ಎಂದು ಕರೆಯುವುದಕ್ಕೆ ಕಾರಣವೆಂದರೆ, ಇತರ ಮಂಗಗಳ ದವಡೆಗಿಂತ ಅದರ ದವಡೆ ಬಹಳ ಸಣ್ಣದು. ಕಲ್ಲು ಅದರ ಶಸ್ತ್ರವಾಗಿತ್ತು. ಜರ್ಮನಿಯ ನಿಯಂಡರ್ಥಲ್ ಎಂಬಲ್ಲಿಯೂ ಆಸ್ಟ್ರೇಲಿಯದ ದಕ್ಷಿಣಕ್ಕೆ ಟ್ರಸ್ಮೇನಿಯಾ ಎಂಬಲ್ಲಿಯೂ ಸಿಕ್ಕಅಸ್ಥಿಪಂಜರಗಳು, ೬೦,೦೦೦ ವರುಷಗಳ ಹಿಂದೆ ಜೀವಿಸಿದ್ದ ಹೆಚ್ಚು ಉತ್ಕ್ರಾಂತಿ ಹೊಂದಿದ ಮಾನವಸದೃಶ ಪ್ರಾಣಿಗಳದಿರಬೇಕೆಂದು ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ನಿಯಂಡರ್ಥಲ್ ಪ್ರಾಣಿಯ ತಲೆ ದೊಡ್ಡದಿತ್ತು; ಎತ್ತರ ಸರಾಸರಿ ೫ ಫೂಟು ೩ ಇಂಚಿತ್ತು; ದವಡೆ ಮನುಷ್ಯನಂತೆ ಸಣ್ಣದಲ್ಲ, ಹೈಡೆಲ್ಬರ್ಗ್ ಪ್ರಾಣಿಯಂತೆ ದೊಡ್ಡದೂ ಅಲ್ಲ; ಮಧ್ಯಮ. ಅದಕ್ಕೆ ಎದ್ದು ನಿಲ್ಲುವುದಕ್ಕೆ ಬರುತ್ತಿರಲಿಕ್ಕಿಲ್ಲ; ಅದು ಹೊರಡಿಸುವ ಸ್ವರಕ್ಕೆ ಶಬ್ದಸ್ವರೂಪವೂ ಉಂಟಾಗುತ್ತಿರಲಿಕ್ಕಿಲ್ಲ; ಅದಕ್ಕೆ ಬೆಂಕಿಯ ಉಪಯೋಗ ಗೊತ್ತಿದ್ದರೂ ಬೆಂಕಿ ಹೊತ್ತಿಸುವುದು ಗೊತ್ತಿರಲಿಲ್ಲ ಬಿಸಿಲು, ಗಾಳಿ, ಚಳಿಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಮನೆ ಕಟ್ಟಿಕೊಳ್ಳುವುದನ್ನು ಆ ಪ್ರಾಣಿ ಅರಿಯದು; ಆದರೆ ಗುಡ್ಡಗಳಲ್ಲಿಯ ಗವಿಗಳನ್ನು ಮನೆಯಂತೆ ಉಪಯೋಗಿಸಿಕೊಳ್ಳುತ್ತಿತ್ತು. ಉತ್ತು ಬಿತ್ತಿ

ಬೆಳೆಯುವುದು ಗೊತ್ತಿರಲಿಲ್ಲ; ತಾನಾಗಿ ಬೆಳೆದ ವನಸ್ಪತಿಗಳನ್ನು ಯಥೇಚ್ಛವಾಗಿ ತಿಂದು ಹಸಿವೆ ನೀಗಿಸಿಕೊಳ್ಳಲಾಗುತ್ತಿತ್ತು. ಸ್ವಲ್ಪ ಉದ್ದುದ್ದವಾದ ಕಲ್ಲುಗಳನ್ನು ನೋಡಿ ಅವನ್ನು ಆತ್ಮಸಂರಕ್ಷಣೆಗಾಗಿ ಅಸ್ತ್ರದಂತೆ ಬಳಸುತ್ತಿತ್ತು. ಏಕೆಂದರೆ ಈ ಅವಸ್ಥೆಯಲ್ಲಿ



ಹಾಯಡೆಲಬರ್ಗ ಪ್ರಾಣಿ ನಿಆಂಡರ್ಥಲ್ ಪ್ರಾಣಿ ಕ್ರೊಮಗ್ನಾನ್ ಪ್ರಾಣಿ

ಆ ಪ್ರಾಣಿಗೆ ತನ್ನ ಹೆಬ್ಬೆರಳನ್ನು ಹೇಗೋ ಮಾಡಿ ಉಳಿದ ಬೆರಳುಗಳ ಎದುರಿಗೆ ತರುವುದಕ್ಕೂ ಕೆಲವುಟ್ಟಿಗೆ ಮುಷ್ಟಿಯನ್ನು ಹೊರಳಿಸುವುದಕ್ಕೂ ಕೈಯಲ್ಲಿ ಏನಾದರೂ ಹಿಡಿಯುವುದಕ್ಕೂ ಬರುತ್ತಿತ್ತು. ಆ ಕಾಲದಲ್ಲಿ ಆ ಪ್ರಾಣಿಗಳ ಎಲವುಗಳ ಮೇಲೂ ಬೇರೆ ಕಡೆಯಲ್ಲೂ ಕೊರೆದ ಕೆಲವು ಚಿತ್ರಗಳೂ ಆಕೃತಿಗಳೂ ದೊರೆತಿವೆ. ಅವುಗಳಿಂದ ಆ ಪ್ರಾಣಿಗಳು ಚಿತ್ರಕಲೆಯಲ್ಲಿ ಎಷ್ಟೋ ಪ್ರಗತಿ ಹೊಂದಿದ್ದವೆಂದು ಹೇಳಬಹುದು. ನಿಆಂಡರ್ಥಲ್ ಅವಸ್ಥೆಯಲ್ಲಿದ್ದಾಗ ಎಷ್ಟೋ ಸಲ ಅದು ಶೂನ್ಯದೃಷ್ಟಿಯಿಂದ ನಿಲ್ಲುತ್ತಿತ್ತು. ಅದರಿಂದ ಅದು ವಿಚಾರ ಮಾಡುತ್ತಿರಬೇಕು ಎಂದೆನಿಸುತ್ತದೆ; ಆದರೆ ಮೆದುಳು ಸಣ್ಣದಿದ್ದುದರಿಂದ ಅದರ ವಿಚಾರಶಕ್ತಿಯು ಅಲ್ಲಿಯೇ ತಡೆದು, ಸ್ವಲ್ಪ ನಿರಾಶೆ ಹೊಂದಿ ಸುಮ್ಮನೆ ನೋಡುತ್ತ ಕುಳಿತುಕೊಳ್ಳುತ್ತಿತ್ತು. ಈ ಪ್ರಾಣಿಗಳ



ನಿಆಂಡರ್ಥಲ್ ಕುಟುಂಬ

ಅಸ್ಥಿಪಂಜರಗಳು ಎಷ್ಟೋ ಜೋಡುಜೋಡಾಗಿ ಸಿಕ್ಕಿವೆ. ಹತ್ತಿರವೇ ಸಣ್ಣ ಅಸ್ಥಿಪಂಜರವೂ ಇತ್ತು. ಇದರಿಂದ ಗಂಡು, ಹೆಣ್ಣು, ಮಗು ಇವುಗಳಲ್ಲಿಯ ಪರಸ್ಪರ ಪ್ರೇಮವೂ ಸಹಜೀವನದ ಸವಿಯೂ ಅವುಗಳಿಗೆ ತಿಳಿದಿತ್ತು ಎಂದು ತೋರುತ್ತದೆ.

**ಕ್ರೊಮುಗ್ನಾನ್ ಪ್ರಾಣಿ— ಮೊದಲ ಮನುಷ್ಯ :—** ನಿಆಂಡರ್ಥಲ್ಲಿನ ತರುವಾಯ ಮಾನವನನ್ನು ಹೆಚ್ಚಾಗಿ ಹೋಲುವ ಪ್ರಾಣಿಯ ಅವಶೇಷಗಳು ಫ್ರಾನ್ಸ್ ದೇಶದ ಕ್ರೊಮುಗ್ನಾನಿನಲ್ಲಿ ದೊರೆತಿವೆ. ಇವುಗಳ ಕಾಲವು ೩೦೦೦೦ ವರುಷಗಳಿಂದೀಚೆಯದಿರಬಹುದು.* ಎದ್ದು ನಿಲ್ಲುವುದು, ಹಿಂದೆ ಹೊರಳಿ ನೋಡುವುದು, ಬೆರಳು ಮಡಿಚಿ ಮುಷ್ಟಿ ಮಾಡುವುದು, ಚಿತ್ರ ತೆಗೆಯುವುದು, ಬೆಂಕಿ ಹೊತ್ತಿಸುವುದು, ಪ್ರಾಣಿಗಳನ್ನು ಕೊಂದು ಮಾಂಸವನ್ನು ಬೇಯಿಸಿ ತಿನ್ನುವುದು, ಉದ್ದಾದ ಕಲ್ಲು ಸಿಕ್ಕದಿದ್ದರೆ ಹಾಗೆ ಕಟೆದು ಮಾಡಿಕೊಳ್ಳುವುದು, ಇಷ್ಟೇ ಅಲ್ಲ, ಎಸೆಯಬಹುದಾದಂಥ ಅಸ್ತ್ರವನ್ನು–ಭಲ್ಲೆಯನ್ನು–ಮಾಡಿಕೊಳ್ಳುವುದು ಮತ್ತು ಅದನ್ನು ಉಪಯೋಗಿಸಿಕೊಳ್ಳುವುದು ಇಷ್ಟರವರೆಗೂ ಆ ಪ್ರಾಣಿಗಳ ಪ್ರಗತಿಯಾಗಿತ್ತು. ಮನೆ ಕಟ್ಟುವುದನ್ನು ಈ ಪ್ರಾಣಿಗಳು ಅರಿತಿದ್ದವು. ಬಿತ್ತಿದ ಬೀಜ, ಹುಟ್ಟಿದ ಧಾನ್ಯಗಳಲ್ಲಿಯ ಸಂಬಂಧವು ಕಾಲಾಂತರದಲ್ಲಿ ಗೊತ್ತಾಯಿತು. ಆಗ ಧಾನ್ಯದ ಕಾಳುಗಳನ್ನು ಬೆಳೆ ಬರುವುದಕ್ಕಾಗಿ ನೆಲದ ಮೇಲೆ ಹಾಕತೊಡಗಿದವು. ಕಾಳು ಮಳೆನೀರಿಗೆ ಕೊಚ್ಚಿ ಹೋಗದಂತೆ ನೆಲ ಕೆದರಿ ಮುಚ್ಚುವ ಪ್ರಯತ್ನ ನಡೆಯಿತು. ಈ ನೆಲ ಕೆದರುವಿಕೆಯೇ ಉಳುವ ಕ್ರಿಯೆಯ ಆರಂಭವೆಂದು ಹೇಳಬಹುದು. ಈ ಅವಸ್ಥೆಯಲ್ಲಿ ಮಾನವಸದೃಶ ಪ್ರಾಣಿಗಳ ಶಾರೀರಿಕ ಮಾನಸಿಕ ವಿಕಾಸವು ಬಹಳಷ್ಟು ಆಗಿತ್ತು. ಅವುಗಳ ಒಸಡೆಗಳ ಉಬ್ಬು ಕಡಿಮೆಯಾಗುತ್ತ ಹಣೆಪಟ್ಟಿ ಮತ್ತು ಮೂಗುಗಳ ಸಮಕ್ಕೆ ಬರುತ್ತಲಿತ್ತು. ಕೈಯ ಹೆಬ್ಬೆರಳನ್ನು ಮಿಕ್ಕ ಬೆರಳುಗಳ ಎದುರಿಗೆ ಸಹಜವಾಗಿ ತರಲಾಗುತ್ತಿತ್ತು. ಕೈಯಿಂದ ಅನೇಕ ಕಾರ್ಯಗಳನ್ನು ಮಾಡುವುದು ಸಾಧ್ಯವಾಗತೊಡಗಿತು. ಮೆದುಳೂ ಬೆಳೆಯಿತು. ಆದ್ದರಿಂದ ವಿಚಾರಮಾಡುವ ಶಕ್ತಿಯೂ ಹಿಂದಿನ ಅವಸ್ಥೆಗಿಂತ ಹೆಚ್ಚುತ್ತ ಬಂತು. ಒಮ್ಮೆ ಬೀಜದ ಬಿತ್ತಿಗೆ, ಧಾನ್ಯದ ಹುಟ್ಟುವಳಿಗಳಲ್ಲಿಯ ಸಂಬಂಧದ ಅರಿವಾದ ಮೇಲೆ, ಮತ್ತು ಅದಕ್ಕೆ ಕಾಲ ತಗಲುವುದೆಂಬುದು ತಿಳಿದ ಮೇಲೆ, ಈ ಅಲೆಯುವ ಪ್ರಾಣಿ ಭೂಮಿಯ ಮೇಲೆ ನೆಲೆ ನಿಂತಿತು; ಮತ್ತು ಮಾನವೀಯ ಜೀವನವಿಕಾಸದಲ್ಲಿ ಸ್ಥಿರ ಅವಸ್ಥೆ ಉಂಟಾಯಿತು. ಕ್ರೊಮುಗ್ನಾನ್ ಅವಸ್ಥೆಯಲ್ಲಿಯ ಎಲ್ಲ ಪ್ರಾಣಿಗಳೂ ಮೊದಲು ಈ ಅವಸ್ಥೆಯ ವರೆಗೆ ತಲುಪಿದ್ದವೆಂಬುದು ನಿಜವಲ್ಲ. ಆದರೆ, ಒಟ್ಟಾರೆ

* ಇಂತಹದೇ ಅವಶೇಷವು ಗ್ರಿಮಾಲ್ಡೆಂಬಲ್ಲಿಯೂ ಸಿಕ್ಕಿದೆ. ಇವೆರಡನ್ನು ತುಲನೆಮಾಡಿ ನೋಡಿ. ಎರಡೂ ಒಂದೇ ಕಾಲದವೆಂದೂ ವಂಶ ಮಾತ್ರ ಭಿನ್ನವೆಂದೂ ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಈ ಕ್ರೊಮಗ್ನಾನ್ ಪ್ರಾಣಿಯನ್ನು ಆದ್ಯಮಾನವ ಎಂದು ತಿಳಿಯುವುದು ಯೋಗ್ಯವಾದೀತು.*

**ಸಮಾಲೋಚನೆ:**—ಪೃಥ್ವಿಯ ಉತ್ಪತ್ತಿಮೊದಲುಗೊಂಡು ಆದ್ಯಮಾನವನ ಅವತಾರದ ವರೆಗೂ ಮಾಡಿದ ಈ ವಿವೇಚನೆಯ ಸ್ಥೂಲ ಟಿಪ್ಪಣಿಯನ್ನು ಹೀಗೆ ಮಾಡಬಹುದು.

**ವಿಶ್ವ :**— ಇದರಲ್ಲಿ ಪೃಥ್ವಿ, ಸೂರ್ಯ, ಚಂದ್ರ ತಾರೆ ಎಲ್ಲ ಬರುವವು.

**ಪೃಥ್ವಿ :**— ಕಾಲ ೨೦೦ ಕೋಟಿ ವರ್ಷಗಳು. **ಅಚೇತನ ಕಾಲ** ೧೭೦ ಕೋಟಿ ವರ್ಷಗಳು + **ಸಚೇತನ ಕಾಲ** ೩೦ ಕೋಟಿ ವರ್ಷಗಳು.

**ಸಚೇತನಕಾಲ:**—

**ಮೊದಲನೆಯ ಹಿಮಯುಗ :**— ಮೃದುವಾದ ಆದಿಜೀವ. / ಭೂ-ಜಲ ಜೀವಿ ಪ್ರಾಣಿ

**ಎರಡನೆಯ ಹಿಮಯುಗ :**— ಹೊಟ್ಟೆ ಹೊಸೆಯುವ ಪ್ರಾಣಿ, ಪಕ್ಷಿ, ವನಸ್ಪತಿ.

**ಮೂರನೆಯ ಹಿಮಯುಗ :**— ಸಸ್ತನ ಅಸ್ಥಿಮಯ ಪ್ರಾಣಿ = ವಾನರ-ಹೈಡೆಲ್ಬರ್ಗ್ ಪ್ರಾಣಿ (ಕಾಲ ೫ ಲಕ್ಷ ವರ್ಷ.)

**ನಾಲ್ಕನೆಯ ಹಿಮಯುಗ :**— ನಿಆಂಡರ್ಥಲ್ ಪ್ರಾಣಿ. / ಕ್ರೋಮಗ್ನಾನ್ ಪ್ರಾಣಿ
(ಕಾಲ ೬೦ ಸಾವಿರ ವರ್ಷ.) / (ಕಾಲ ೩೦ ಸಾವಿರ ವರ್ಷ.)

( ಇಲ್ಲಿ ಹೇಳಿದ ಕಾಲದ ಬಗ್ಗೆ ಬಹಳ ಮತಭೇದಗಳಿವೆ. ಲೇಖಕನು ಮುಖ್ಯವಾಗಿ ಎಚ್. ಜಿ. ವೇಲ್ಸರ 'ಶಾರ್ಟ್ ಹಿಸ್ಟರಿ ಆಫ್ ದ ವರ್ಲ್ಡ' ಎಂಬ ಗ್ರಂಥವನ್ನು ಪ್ರಮಾಣವೆಂದು ಇಟ್ಟುಕೊಂಡಿದ್ದಾನೆ. )

## ೨. ಅಶ್ಮಯುಗದಿಂದ ಲೋಹಯುಗದವರೆಗೆ

**ಅಶ್ಮಯುಗ (ಕಲ್ಲಿನ ಯುಗ :** ಹೈಡೆಲ್ಬರ್ಗ್, ನಿಆಂಡರ್ಥಲ್ ಕ್ರೊಮಗ್ನಾನ್ ಪ್ರಾಣಿಗಳು ಮುಖ್ಯವಾಗಿ ಕಲ್ಲಿನ ಆಯುಧಗಳನ್ನೇ ಉಪಯೋಗಿಸುತ್ತಿದ್ದುದರಿಂದ, ಅವುಗಳ ಕಾಲವನ್ನು ಶಿಲಾಯುಗವೆಂದು ಶಾಸ್ತ್ರಜ್ಞರು ಕರೆದಿದ್ದಾರೆ. ಈ ಶಿಲಾ

* ನಿಆಂಡರ್ಥಲ್ ಮತ್ತು ಕ್ರೋಮಗ್ನಾನ್ ಪ್ರಾಣಿಗಳು ಬಳಸುತ್ತಿದ್ದ ಮಾದರಿಯ ಕಲ್ಲಿನ ಆಯುಧಗಳು ಹಿಂದುಸ್ತಾನದಲ್ಲಿ ಮದರಾಸು ರಾಜ್ಯದ ಬಳ್ಳಾರಿ-ಕಡಪಾ ಭಾಗದಲ್ಲಿಯೂ ಮುಂಬಯಿಯ ಕಾಂಡಿವಿಲಿ ಭಾಗದಲ್ಲಿಯೂ ಪುರಾಣವಸ್ತು ಸಂಶೋಧನ ಶಾಖೆಯವರು ನಡೆಸಿದ ಉತ್ಖನನದಲ್ಲಿ ದೊರೆತಿವೆ. ಅವುಗಳನ್ನು ಮುಂಬಯಿಯ ಪ್ರಿನ್ಸ್ ಆಫ್ ವೇಲ್ಸ್ ಪ್ರದರ್ಶನಾಲಯದಲ್ಲಿ ನೋಡಬಹುದು.

ಯುಗದಲ್ಲಿಯೂ ಅತಿಪ್ರಾಚೀನ, ಪ್ರಾಚೀನ ಮತ್ತು ನವೀನ ಎಂದು ಉಪಭಾಗಗಳನ್ನು ಕಲ್ಪಿಸಿದ್ದಾರೆ. ಆಂಗ್ಲ ಭಾಷೆಯಲ್ಲಿ ಈ ಭಾಗಗಳನ್ನು ಕ್ರಮವಾಗಿ ಎಒಲಿಥಿಕ್, ಪೆಲಿಒಲಿಥಿಕ್ ಮತ್ತು ನಿಒಲಿಥಿಕ್ ಎಂದಿದ್ದಾರೆ ಇವುಗಳಲ್ಲಿ ಹೈಡೆಲ್‌ಬರ್ಗ್ ಪ್ರಾಣಿ ಎಒಲಿಥಿಕ್ ಯುಗಕ್ಕೆ ಸೇರಿದುದಾಗಿದ್ದು, ಮುಂದಿನ ನಿಯಾಂಡರ್ಥಲ್ ಹಾಗೂ ಕ್ರೋಮೆಗ್ನಾನ್ ಇವು ಪೆಲಿಒಲಿಥಿಕ್ ಯುಗಕ್ಕೆ ಸೇರಿವೆ. ನಿಒಲಿಥಿಕ್ ಎಂದರೆ ನೂತನ ಶಿಲಾಯುಗದಲ್ಲಿ ಮನುಷ್ಯನಿಗೆ ಮೊದಲು ದನಕರುಗಳನ್ನು ಸಾಕುವುದು, ಅನಂತರ ಭೂಮಿ ಸಾಗುವಳಿ ಮಾಡುವುದು ಗೊತ್ತಾದವು. ಶಾಸ್ತ್ರಜ್ಞರ ಅಭಿಪ್ರಾಯದ ಮೇರೆಗೆ ಈ ಕಾಲವು ೧೫ ರಿಂದ ೨೦ ಸಾವಿರ ವರುಷಗಳ ಹಿಂದಿನದು. ಕೇವಲ ನೂರು ವರುಷಗಳ ಹಿಂದೆ ಓಷ್ಯೇನಿಯಾ ನಡುಗಡ್ಡೆಯಲ್ಲಿ ಇಂತಹ ನೂತನ ಶಿಲಾ ಯುಗದ ಮಾನವನಿದ್ದುದು ಕಂಡುಬಂದಿದೆ.



ಕ್ರಮಾಂಕ ೧. ಪ್ರಾಚೀನ ಶಿಲಾಯುಗದೊಳಗಿನ ಆಯುಧ
ಕ್ರಮಾಂಕ ೨. ನೂತನ ಶಿಲಾಯುಗದೊಳಗಿನ ಆಯುಧ
ಕ್ರಮಾಂಕ ೩, ೪. ಧಾತುಯುಗದೊಳಗಿನ ಆಯುಧಗಳು

**ಮನುಷ್ಯನ ಮೂರು ಅವಸ್ಥೆಗಳು :** ಕ್ರೋಮೆಗ್ನಾನ್ ಪ್ರಾಣಿಯನ್ನು ಆದ್ಯ ಮಾನವನೆಂದು ನಾವು ಕರೆದಿದ್ದೇವೆ. ಇವನು ತೀರ ಮೊದಲು ಅತಿಶಯ ಕಾಡು ಸ್ಥಿತಿಯಲ್ಲಿ ಅಲೆಯುತ್ತಿದ್ದನು. ಅಡವಿ–ಅಡವಿ ತಿರುಗುವುದು, ಗಡ್ಡೆ ಗೆಣಸುಗಳನ್ನು ತಿನ್ನುವುದು ಕಲ್ಲು ಕಟ್ಟಿಗೆಗಳಿಂದ ಹೊಡೆಯಬಹುದಾದ ಪ್ರಾಣಿಗಳನ್ನು ಕೊಂದು ತಿನ್ನುವುದು ಇದೇ ಇವನ ಬಾಳು. ಇದರ ಮುಂದಿನ ಮೆಟ್ಟಿಲೆಂದರೆ ' ಪಶುಪಾಲನಾವಸ್ಥೆ. ' ಈಗ ಆಕಳು ಎಮ್ಮೆ ಎತ್ತು ಮೊದಲಾದ ಸಾಕುಪ್ರಾಣಿಗಳ ಉಪಯೋಗವು ಅವನಿಗೆ ತಿಳಿಯಿತು. ಆದರೂ ಅವನು ಮನೆಮಾಡಿಕೊಂಡು ಒತ್ತಟ್ಟಿಗೆ ಇರುತ್ತಿರಲಿಲ್ಲ. ದನಕರಗಳ ಹಿಂಡಿನೊಂದಿಗೆ ಮೇಲಿಂದಮೇಲೆ ಸ್ಥಳಾಂತರ ಮಾಡುತ್ತಿದ್ದನು. ತರುವಾಯದ ಅವಸ್ಥೆಯಲ್ಲಿ ಮನುಷ್ಯನು ಒಂದೆಡೆ ಇರತೊಡಗಿದನು. ಬೆಳೆಯುಳ್ಳ ಭೂಮಿಯನ್ನು ನೋಡಿ, ಹಳ್ಳಹೊಳೆಗಳ ದಡದಲ್ಲಿ ಮನೆಕಟ್ಟಿಕೊಳ್ಳತೊಡಗಿದನು; ಭೂಮಿಯು ಸಾಗುವಳಿ ಮಾಡತೊಡಗಿದನು. ಇದು ' ಸ್ಥಾಯಿಕ ' ಅವಸ್ಥೆ. ಇದೀ

ಮಾನವವಂಶವು ಈ ಅವಸ್ಥೆಗಳಲ್ಲಿ ಒಮ್ಮೆಲೆ ಪರಿವರ್ತನಗೊಳ್ಳಲಿಲ್ಲ. ಸಾಧನಗಳ ಅನುಕೂಲತೆಗನುಗುಣವಾಗಿ ಬೇರೆ ಬೇರೆ ಜನಾಂಗಗಳು ಹೆಚ್ಚುಕಡಿಮೆಯಾಗಿ ಪ್ರಗತಿ ಹೊಂದಿದವು.

**ಧರ್ಮ ಕಲ್ಪನೆಯ ಉದಯ** : ಆದ್ಯಮಾನವನು ಕಾಡುಸ್ಥಿತಿಯಿಂದ ಸ್ಥಾಯಿಕ ಅವಸ್ಥೆಯವರೆಗೆ ಹೇಗೆ ಮುಂದುವರಿದನೆಂಬುದನ್ನು ಮೇಲೆ ತ್ರೋಟಕವಾಗಿ ಹೇಳಿದೆ. ಭಾಷೆಯ ಉದಯ, ಸಾವಿನ ಅರಿವು, ಧರ್ಮದ ಕಲ್ಪನೆ, ಕಾರ್ಯಕಾರಣ ಭಾವಗಳ ಸಂಬಂಧ ಮೊದಲಾದವು ಮಾನವೀಯ ವ್ಯವಹಾರದಲ್ಲಿ ಬಂದುದು ಹೇಗೆಂಬುದನ್ನು ಶಾಸ್ತ್ರಜ್ಞರು ಒಳ್ಳೇ ಮನೋರಂಜಕವಾಗಿ ದಿಗ್ದರ್ಶನ ಮಾಡಿದ್ದಾರೆ. ಇಂದಿನ ಮಾನವನು ಕನಸು ಕಾಣುವಂತೆ ಆದ್ಯಮಾನವನು ಕೂಡ ಕಾಣುತ್ತಿರಲೇ ಬೇಕು. ಸಾವು ನಿದ್ದೆಗಳಲ್ಲಿಯ ವ್ಯತ್ಯಾಸವು ಆದ್ಯಮಾನವನಿಗೆ ಬೇಗನೆ ತಿಳಿದಿರಲಿಕ್ಕಿಲ್ಲ. ಎಚ್ಚತ್ತಾಗ ಕಣ್ಣಿಗೆ ಕಾಣದ ಪ್ರಾಣಿಗಳು, ಅವನ ಅಜ್ಜ ಮುತ್ತಜ್ಜರು ಸ್ವಪ್ನದಲ್ಲಿ ಮಾತ್ರ ಕಾಣುತಾರೆ, ಏನೋ ತಿಳಿಯದ ಹಾಗೆ ಒಟಿಗುಡುತ್ತಾರೆ ಎಂಬ ಅನುಭವವಾಗಲು, ಆದ್ಯ ಮಾನವನ ಮನಸ್ಸಿನಲ್ಲಿ ತನ್ನ ಆ ಪೂರ್ವಜರ ವಿಷಯದಲ್ಲಿ ನಾದರ ಭೀತಿ ಉತ್ಪನ್ನವಾಯಿತು. ಗುಡುಗುಡಿಸುವ ಮೇಘ, ಮಿಂಚುವ ಮಿಂಚು, ಹೊಳೆಯುವ ಸೂರ್ಯ, ಮುಸಲಧಾರೆಯ ವೃಷ್ಟಿ, ಕತ್ತಲೆಯ ರಾತ್ರಿ, ಎಣೆಯಿಲ್ಲದ ತಾರೆಗಳು ಇವೆಲ್ಲವುಗಳ ಕಡೆ ನೋಡುವ ಅವನ ದೃಷ್ಟಿ ಭಾವನಾಪೂರ್ಣವೂ ಭಯಚಕಿತವೂ ಆಗಿರಲು ಸಾಕು. ಮಾನವೀಯ ಕರ್ತೃತ್ವದ ಪ್ರಾರಂಭದ ಕಾಲದಲ್ಲಿ ನಿಸರ್ಗ ಪೂಜೆ ಮತ್ತು ಪಿತೃಪೂಜೆಗಳ ಸ್ವರೂಪದಲ್ಲಿ ಧರ್ಮವು ಪ್ರಕಟವಾದುದು ಹೀಗೆ. ತನಗೆ ಯಾರ ಭೀತಿಯಿರುತ್ತದೋ ಅವರನ್ನು ತ್ಯಾಗಪೂರ್ವಕವಾಗಿ ಪ್ರಸನ್ನಗೊಳಿಸಬೇಕೆಂಬ ಬುದ್ಧಿ ಸಹಜವಾದದ್ದೇ. ರೋಗರುಜಿನುಗಳಂತಹ ಸಂಕಟಗಳು ಅದೃಷ್ಟದ ಕೋಪದಿಂದ ಒದಗುವವೆಂದು ಎನಿಸಿದ್ದರಿಂದ ಕೆಲವೊಂದು ತ್ಯಾಗದಿಂದ, ಸಮರ್ಪಣೆಯಿಂದ ಅದೃಷ್ಟವನ್ನು ಒಲಿಸಿಕೊಳ್ಳಬೇಕೆಂದು ಮನುಷ್ಯನಿಗೆ ಎನಿಸಲಾರಂಭಿಸಿತು. ತ್ಯಾಗದಿಂದ ಯಾಗ ಹುಟ್ಟಿತು; ಯಾಗದ ಮಂತ್ರಗಳ ರಚನೆಯಾಯಿತು; ಈ ತಂತ್ರಗಳನ್ನು ಬಲ್ಲವರು ಪುರೋಹಿತರೂ ಉಪಾಧ್ಯಾಯರೂ ಆದರು. ಬ್ರಾಹ್ಮಣರಿಂದ ಅನಿಷ್ಟ ಗ್ರಹಗಳ ಶಾಂತಿ ಮಾಡಿಸುವ ಪರಿಪಾಠದ ಉಗಮವು ಹೀಗೆ ಆಗಿರಬೇಕೆಂದು ತೋರುತ್ತದೆ. ಪುರೋಹಿತನೇ ಆ ಕಾಲದಲ್ಲಿ ಬೇನೆ ಕಳೆಯುವ ವೈದ್ಯನೂ ನಿಸರ್ಗದ ಪ್ರಕೋಪವನ್ನು ತನ್ನ ಬುದ್ಧಿಯಿಂದ ಶೋಧಿಸಿ ಹೇಳುವ ಶಾಸ್ತ್ರಜ್ಞನೂ ಆಗಿದ್ದನು.

**ಪ್ರಗತಿಯ ಮೊದಲ ಹೆಜ್ಜೆ** : ಮೊದಲು ಮನುಷ್ಯನು ಲೇಖನದ ಪ್ರಯತ್ನ ಮಾಡಿದ್ದು ಚಿತ್ರಗಳಲ್ಲಿ ಈ ಚಿತ್ರಲಿಪಿಯಿಂದ ಸಂಕೇತಲಿಪಿ, ಸಂಕೇತಲಿಪಿಯಿಂದ ಧ್ವನಿ ಲೇಖನ ಮತ್ತು ಅದರಿಂದಲೇ ಮುಂದೆ ಬಿಡಿ ವರ್ಣಗಳು ಅಥವಾ ಅಕ್ಷರಗಳು — ಈ ಕ್ರಮದಲ್ಲಿ ಪ್ರಗತಿಯಾಯಿತು. ಅಂತರವನ್ನು ಅಳೆಯುವದಕ್ಕಾಗಿ ಮೊದಲು ಮಾನವನು ತನ್ನ ಕೈಯನ್ನೇ ಉಪಯೋಗಿಸಿಕೊಂಡನು. ಒಡವೆಗಳನ್ನು ಎಣಿಸುವುದಕ್ಕೆ ಬೆರಳುಗಳ ಅಥವಾ ಹರಳುಗಳ ಉಪಯೋಗವಾಯಿತು. ದೂರದ ಅಂತರ

ವನ್ನು ಅಳೆಯುವದಕ್ಕಾಗಿ ಕೂಗು ಎಷ್ಟು ದೂರ ಕೇಳುವುದೆಂದು ನೋಡಿ ಆ ಅಂತರಕ್ಕೆ ಕ್ರೋಶ (ಕ್ರುಶ್=ಕೂಗು) ಎಂದನು; ಬಳಿಕ ಕ್ರೋಶಕ್ಕೆ ಎಷ್ಟು ಮೊಳ ಎಂಬ ಕೋಷ್ಟಕ ತೆಗೆದನು. ಚಂದ್ರನ ನಿಯಮಿತವಾದ ವೃದ್ಧಿ ಕ್ಷಯಗಳಿಂದ ಚಾಂದ್ರ ಮಾಸದ ಕಲ್ಪನೆಯೂ ನಿಯಮಿತವಾಗಿ ಬರುತ್ತಿದ್ದ ಬೆಸಿಗೆ-ಮಳೆಗಾಲಗಳಿಂದ ಋತುಗಳ ಜ್ಞಾನವೂ ಅವನಿಗಾಯಿತು. ಗುಡ್ಡಗಳಲ್ಲಿಯ ಗುಹೆಗಳನ್ನು ಕಂಡು, ಕಲ್ಲು-ಕಟ್ಟಿಗೆಗಳಿಂದ ಆ ಮಾದರಿಯ ಮನೆ ಮಾಡಿಕೊಂಡನು. ಮರದ ದುಂಡು ದುಂಡು ಬೊಡ್ಡೆಗಳನ್ನು ಸಣ್ಣದಾಗಿ ಕೊರೆದನು; ಅದಾಯಿತು ಬೀಸುಕಲ್ಲು. ಮಳೆಗಾಲದ ತರುವಾಯ ಅಲ್ಲಲ್ಲಿ ಹುಟ್ಟಿದ ನಾನಾವಿಧದ ಸಸ್ಯಗಳನ್ನು ಕೊಯ್ದು ಹಸಿಯದನ್ನಾಗಲಿ ಬೇಯಿಸಿಕೊಂಡಾಗಲಿ ತಿನ್ನಲಾರಂಭಿಸಿದನು. ಕಾಲಾಂತರದಲ್ಲಿ, ಬಿದ್ದ ಕಾಳಿಗೂ ಹುಟ್ಟಿದ ಸಸ್ಯಕ್ಕೂ ಇರುವ ಸಂಬಂಧವು ಅವನ ಲಕ್ಷ್ಯಕ್ಕೆ ಬಂದಿತು. ಮಳೆಯಿಂದ ಅದು ಹರಿದುಹೋಗಬಾರದೆಂದು ಅದನ್ನು ಹುಗಿದಿಟ್ಟನು. ಹುಗಿಯುವುದಕ್ಕಾಗಿ ನೆಲವನ್ನು ಕೆದರಬೇಕಾಯಿತು. ಕೆದರುವದಕ್ಕೆ ಕುರ್ಚಿಗೆಯಂತೆ ಮಣಿದ ಕಟ್ಟಿಗೆಯನ್ನು ಮೊದಲು ಉಪಯೋಗಿಸಿದನು. ಅದರಿಂದ ಕಾಲಕ್ರಮದಲ್ಲಿ ನೇಗಿಲಿನ ಕಲ್ಪನೆ ಉಂಟಾಯಿತು.

ಆದ್ಯ ಮಾನವನು ಮೊದಮೊದಲು ನಿಸರ್ಗದ ಮೇಲೆ ವಿಜಯವನ್ನು ಸಂಪಾದಿಸಿದ ಸಂಗತಿಯ ಜ್ಞಾನಮಾಡಿಕೊಳ್ಳುವುದಕ್ಕಾಗಿ ಶಾಸ್ತ್ರಜ್ಞರು ಹೀಗೆ ಹೂಡಿದ ಅನೇಕ ತರ್ಕಗಳನ್ನು ಎಷ್ಟೆಂದು ಹೇಳಬೇಕು? ಪೃಥ್ವಿಯ ಸಂದಿಮೂಲೆಗಳಲ್ಲಿ ಅಡಗಿಕೊಂಡು ಉಳಿದಿರುವ ಕಾಡುಜನರ ನಡೆನುಡಿಗಳ ನಿರೀಕ್ಷಣೆ ಸಂಶೋಧನೆ ಮಾಡಿಮಾಡಿದಂತೆ ಇವುಗಳಲ್ಲಿಯ ಕೆಲವು ತರ್ಕಗಳು ಸುಳ್ಳಾಗಬಹುದು. ಕೆಲವು ನಿಜವಾಗಬಹುದು. ಜಗತ್ತಿನ ಇತಿಹಾಸದ ಮೊದಲ ಪುಟಗಳನ್ನು ತಿದ್ದಿ ಮತ್ತೆ ಬರೆಯಬೇಕಾದೀತು. ಆದದ್ದಂತೂ ಆಗಿಯೇ ಬಿಟ್ಟಿದೆ. ಆದರೆ ಅದು ಹೇಗೆ ಆಯಿತೆಂಬ ಬಗ್ಗೆ ಉಪಲಬ್ಧ ಪ್ರಮಾಣಗಳನ್ನು ಹಿಡಿದು ತರ್ಕಮಾಡುತ್ತಿರುವಾಗ ಮತಭೇದ ಇದ್ದೇ ಇರುವುದೇ. ಅಲ್ಲದೆ ಹಳೆಯ ಪ್ರಮಾಣಗಳ ಆಧಾರದಿಂದ ನಿಂತ ವಿಧಾನಗಳು ಹೊಸ ಪ್ರಮಾಣಗಳಿಂದ ಉರುಳಿಬೀಳುವವು. ಇತಿಹಾಸವು ಬದಲಾಗುತ್ತದೆ ಎಂದು ಹೇಳುವುದು ಈ ಅರ್ಥದಿಂದ ಎಂಬುದನ್ನು ಲಕ್ಷ್ಯದಲ್ಲಿಡಬೇಕು.

**ಧಾತುಗಳ ಉಪಯೋಗ**: ನೂತನ ಶಿಲಾಯುಗದಲ್ಲಿ, ಮನುಷ್ಯನು ಸ್ಥಾಯಿ ಅವಸ್ಥೆಯನ್ನು ತಲುಪಿದ ಬಳಿಕ, ಅವನ ಪ್ರಗತಿ ಭರದಿಂದ ಸಾಗಿತು. ಭಾಷೆ ಹುಟ್ಟಿ ಒಬ್ಬನ-ವಿಚಾರ ಒಬ್ಬನಿಗೆ ತಿಳಿಯುವಂತಾಯಿತು; ಬರೆಹದ ಮೂಲಕ ಆ ವಿಚಾರ ಅನುಭವಗಳ ಲಾಭವು ಮುಂದಿನವರಿಗೂ ದೊರೆಯುವಂತಾಯಿತು; ಮನುಷ್ಯನು ಪರಸ್ಪರ ಅನುಭವಗಳಿಂದಲೂ ಹಿಂದಿನ ಅನುಭವಗಳ ಜ್ಞಾನದಿಂದಲೂ ಹೆಚ್ಚುಹೆಚ್ಚು ಆಕ್ರಮಣಶೀಲನೂ ಪ್ರಯತ್ನವಾದಿಯೂ ಆಗತೊಡಗಿದನು. ತಿಳಿತಿಳಿದಂತೆ ಇನ್ನೂ ತಿಳಿದುಕೊಳ್ಳಬೇಕೆಂಬ ಹಂಬಲ ಹೆಚ್ಚಿತು; ವಸ್ತುಸಾಧನಗಳು ಗೊತ್ತಾದಂತೆ ಅವನ್ನು ಸೃಷ್ಟಿಸಿಕೊಳ್ಳುವ ಆಕಾಂಕ್ಷೆ ಬಲಿಯಿತು. ನೂತನ ಶಿಲಾಯುಗದ ಹತ್ತುಸಾವಿರ

ವರ್ಷಗಳು ಕಳೆದ ಮೇಲೆ ಧಾತುಗಳ ಉಪಯೋಗ ಮನುಷ್ಯನಿಗೆ ಗೊತ್ತಾಯಿತು. ಮೊದಮೊದಲು ತಿಳಿದ ಧಾತುಗಳೆಂದರೆ ಒಂದನೆಯದು ತಾಮ್ರ, ಎರಡನೆಯದು ಕಂಚು, ಮೂರನೆಯದು ಕಬ್ಬಿಣ. ತಾಮ್ರ-ತವರಗಳ ಮಿಶ್ರಣದಿಂದ ಅವನು ಬ್ರಾಂಜನ್ನು ತಯಾರಿಸಿಕೊಂಡನು. ಧಾತು ಮಣಿಯುವುದರಿಂದ ಅದಕ್ಕೆ ಕಲ್ಲಿಗಿಂತ ಬೇಗನೆ ಬೇಕಾದ ಆಕಾರ ಉಂಟುಮಾಡಬಹುದು. ಕಬ್ಬಿಣಕ್ಕಿಂತ ತಾಮ್ರವು ಭೂಮಿಯಲ್ಲಿ ಹೆಚ್ಚು ಶುದ್ಧ ಸ್ಥಿತಿಯಲ್ಲಿ, ಹೆಚ್ಚು ಶ್ರಮವಿಲ್ಲದೆ, ಉಪಯೋಗಿಸಲು ಯೋಗ್ಯವಾದ ಸ್ಥಿತಿಯಲ್ಲಿಯೇ ದೊರೆಯುತ್ತಿದ್ದುದರಿಂದ, ಮನುಷ್ಯನು ಅದನ್ನೇ ಮೊದಲು ಬಳಸಿಕೊಂಡಿರಬೇಕು. ಆದರೆ ತಾಮ್ರ ಮಿದುವು, ಅದರ ಬಾಳಿಕೆ ಕಡಿಮೆ. ಬ್ರಾಂಝು ಹೆಚ್ಚು ಬಿರುಸಾದವೆಂದೂ ಕಬ್ಬಿಣವು ಎಲ್ಲಕ್ಕಿಂತ ಬಿರುಸಾಗಿ ಹೆಚ್ಚು ತಾಳಿಕೆಯುಳ್ಳದ್ದೆಂದೂ ಕಂಡುಬಂದಾಗ ಮನಷ್ಯನು ಅವುಗಳನ್ನೇ ಶುದ್ಧಗೊಳಿಸಿ ಹೆಚ್ಚಾಗಿ ಬಳಸತೊಡಗಿದನು. ಮನುಷ್ಯನಿಗೆ ಬ್ರಾಂಝಿನ ಉಪಯೋಗ ಐದುಸಾವಿರ ವರ್ಷಗಳ ಹಿಂದೆಯೂ, ಕಬ್ಬಿಣದ ಉಪಯೋಗ ಮೂರುಸಾವಿರ ವರ್ಷಗಳ ಹಿಂದೆಯೂ ಗೊತ್ತಾಯಿತೆಂದು ಅಭ್ಯಾಸಕರು ಅಭಿಪ್ರಾಯಪಟ್ಟಿದ್ದಾರೆ. ಕ್ರಿಸ್ತಶಕ ಪೂರ್ವದ ೬೦೦ ವರ್ಷಗಳಲ್ಲಿ, ಪ್ರಾಚೀನ ಗ್ರೀಸದ ವೈಭವಕಾಲದಲ್ಲಿ ಅಲ್ಲಿ ಈ ಮಿಶ್ರ ಧಾತು ಹೆಚ್ಚು ಬಳಕೆಯಲ್ಲಿತ್ತೆಂದು ಕಂಡುಬಂದಿದೆ. ಕ್ರಿಸ್ತಶಕದ ಪ್ರಾರಂಭದಲ್ಲಿ ರಚಿತವಾದ ಬಾಯಬಲಿನ ಆದಿಭಾಗದಲ್ಲಿ ತಾಮ್ರ-ಬ್ರಾಂಝುಗಳ ಉಲ್ಲೇಖ ೪೪ ಕಡೆ ಬಂದಿದೆ, ಕಬ್ಬಿಣದ ಉಲ್ಲೇಖ ೧೩ ಕಡೆ ಮಾತ್ರ ಇದೆ. ಇದರಿಂದ ಆ ಕಾಲದಲ್ಲಿ ಕಬ್ಬಿಣವು ಮಿಕ್ಕೆರಡು ಧಾತುಗಳಿಗಿಂತ ಹೆಚ್ಚು ದುರ್ಮಿಳವಾಗಿತ್ತೆಂದು ಊಹಿಸಬಹುದು. ಬೇರೆ ಬೇರೆ ಧಾತುಗಳ ಉಪಯೋಗದಿಂದ, ಅಶ್ಮಯುಗದ ತರುವಾಯದ ಕಾಲವನ್ನು ತಾಮ್ರಯುಗ, ಬ್ರಾಂಝುಯುಗ ಮತ್ತು ಲೋಹಯುಗವೆಂದು ವಿಭಾಗಿಸಲಾಗಿದೆ. *

## ೩. ಮನುಷ್ಯರ ಭಿನ್ನ ಭಿನ್ನ ವಂಶಗಳು

**ಮಾನವ ವಂಶಭೇದ** :—ಆದ್ಯಮಾನವನ ಶೋಧದೊಂದಿಗೇ ವಂಶಭೇದದ ಉಗಮವೂ ಅಭ್ಯಾಸಕರಿಗೆ ಕಂಡುಬಂದಿತೆಂದು. ಮೇಲೆ ಹೇಳಿಯೇ ಇದೆ ಮನುಷ್ಯರೊಳಗಿನ ವಂಶಭೇದದಷ್ಟು ವಾದಗ್ರಸ್ತವೂ, ವಾದಸಂಗ್ರಾಮವನ್ನು ಎಬ್ಬಿಸುವಂತಹವೂ ಆದ ವಿಷಯಗಳು ತೀರ ವಿರಳವೆಂದೇ ಹೇಳಬೇಕು. ವಂಶಭೇದವು ಜನ್ಮ

* ಲೋಹಯುಗವು ೩೦೦೦ ವರ್ಷಗಳ ಹಿಂದೆ, ಎಂದರೆ ಕ್ರಿ. ಶ. ಪೂ. ೧೦೦೦ದಲ್ಲಿ ಆರಂಭವಾಗಿರಬಹುದೆಂದು ಮೇಲೆ ಹೇಳಿದೆ. ಆದರೆ ಹಿಂದುಸ್ತಾನದಲ್ಲಿ ಆರ್ಯರ ಆಗಮನಕ್ಕಿಂತ ಮೊದಲೇ, ಎಂದರೆ ಕನಿಷ್ಠ ಕ್ರಿ. ಶ. ಕ್ಕಿಂತ ೨೦೦೦ ವರ್ಷ ಪೂರ್ವದಲ್ಲಿಯೇ ದ್ರಾವಿಡರಿಗೆ ಕಬ್ಬಿಣದ ಉಪಯೋಗ ತಿಳಿದಂತೆ ಕಾಣುತ್ತದೆ. ಹಾಗೆಯೇ ಋಗ್ವೇದದಲ್ಲಿ ಕಬ್ಬಿಣ ('ಆಯಸ')ದ ಉಲ್ಲೇಖವಿದೆ. ಆದುದರಿಂದ, ಮೇಲೆ ಹೇಳಿದ ಕಾಲಮಾನಗಳನ್ನು ತೀರ ಸ್ಥೂಲವಾಗಿ ಗ್ರಹಿಸಬೇಕೆಂದು ಹೇಳಬೇಕಾಗುತ್ತದೆ.

ಜಾತವೋ ಪರಿಸ್ಥಿತ್ಯನುಸಾರವಾಗಿ ಉಂಟಾದವೋ ? ಮಾನವನ ಶಕ್ತಿ ಜನ್ಮಜಾತ ಗುಣಗಳನ್ನ ವಲಂಬಿಸಿದೆಯೋ, ಅಥವಾ ಪರಿಸ್ಥಿತಿಗನುರೂಪವಾಗಿ ಕುಗ್ಗುತ್ತ ಇಲ್ಲವೆ ಬೆಳೆಯುತ್ತ ಹೋಯಿತೋ ? ಈ ಕುರಿತು ಮನುಷ್ಯನು ಬರೆಯಲು, ಮಾತನಾಡಲು ತೊಡಗಿದನೆಂದರೆ, ಶಾಸ್ತ್ರಜ್ಞನು ಕೂಡ–ಪೂರ್ವಗ್ರಹ, ಸಂಸ್ಕಾರ ವೈಯುಂಡ ವೃತ್ತಿ ಇವುಗಳ ತಿರುಗಣಿಗೆ ಸಿಕ್ಕದೆ ಇರುವುದಿಲ್ಲ. ನುಣುಪಾದ ಮೀನ ಮೊದಲ್ಗೊಂಡು ಮೂಳೆಯುಳ್ಳ ಮಂಗನ ವರೆಗಿನ ಮತ್ತು ನಾಲ್ಕು ಕಾಲುಗಳ ಹೈಡೆಲ್ಬರ್ಗದಿಂದ ಎರಡು



ನಿಗ್ರೋ ಮೊಂಗೋಲಿಯನ್ ಆರ್ಯ

ಕಾಲಿನ ಕ್ರೊಮುಗ್ನಾನ್ ವರೆಗಿನ ಬೆಳವಣಿಗೆ ಉತ್ಕ್ರಾಂತಿ ಕ್ರಮದಿಂದಾಯಿತೆಂದು ನಂಬುವ ಶಾಸ್ತ್ರಜ್ಞನು ಕಪ್ಪುಬಣ್ಣದ, ದಪ್ಪತುಟಿಯ, ಬಿರುಸು ಕೂದಲಿನ, ಉಕ್ಕಿ ನಂತಹ ಮೈಕಟ್ಟಿನ ಆಫ್ರಿಕೆಯಲ್ಲಿಯ ನಿಗ್ರೋನನ್ನು ನೋಡಿದ ಮೇಲೆ, ಅವನೊಂದಿಗೆ ತನ್ನ ಬಿಳಿಯ ಚರ್ಮ, ಸಣ್ಣತುಟಿ, ನಯವಾದ ಕೂದಲು, ಪ್ರಮಾಣಬದ್ಧ ಶರೀರ ರಚನೆ, ತಾನು ಗಳಿಸಿದ ಜಾಣತನ ಇವುಗಳ ತುಲನೆಮಾಡಿ, 'ಛೇ' ಈ ನಿಗ್ರೋ ಜನ್ಮ ಜಾತವಾಗಿಯೇ ನನಗಿಂತ ಭಿನ್ನನು, ಮತ್ತು ನನಗಿಂತ ಕೀಳುತರದ ಮನುಷ್ಯನಿರ ಬೇಕು' ಎನ್ನುತ್ತಾನೆ. ಅವನ ಅಭಿಪ್ರಾಯದಲ್ಲಿ, ಪೂರ್ವಆಸಿಯದಲ್ಲಿ ಕಂಡುಬರುವ ತುಂಬಿದ ಗಲ್ಲದ, ಕಿರುಗಣ್ಣಿನ, ಚಪ್ಪಟೆಮೂಗಿನ, ಹಳದಿ ಬಣ್ಣದ, ಕುಳ್ಳ ಮಂಗೋಲಿ ಯನ್ನನು ನಿಗ್ರೋನಿಗಿಂತ ಶ್ರೇಷ್ಠನು. ಆ ಮಂಗೋಲಿಯನ್ನನಿಗಿಂತಲೂ ಸಾದು ಗಪ್ಪಿನ, ಧೃಷ್ಟಪುಷ್ಟನಾದ, ಸುಂದರ ಮತ್ತು ಅಚ್ಚುಕಟ್ಟಾದ ಅವಯವಗಳುಳ್ಳ ಸುಮೇರಿಯನ್ ಹಾಗೂ ದ್ರವಿಡವಂಶೀಯ ಮನುಷ್ಯನು ಹೆಚ್ಚು ಗುಣವಂತನು. ಆದರೆ ನಾಲ್ಕುಸಾವಿರ ವರುಷಗಳ ಮೊದಲು ಕಾಕೇಸಸ್ ಬೆಟ್ಟದಡಿಯಿಂದ ಪಶ್ಚಿಮಕ್ಕೆ ಯುರೋಪದಲ್ಲಿ ಮತ್ತು ಪೂರ್ವಕ್ಕೆ ಋಗ್ವೇದ ಕಾಲದಲ್ಲಿ ಹಿಂದುಸ್ಥಾನದಲ್ಲಿ ಬಂದು ನೆಲಸಿದ ಶ್ವೇತವರ್ಣೀಯ ಆರ್ಯರಿಗೆ ಇವರು ಯಾರೂ ಸರಿಗಟ್ಟಲಾರರು ! ಈ ತಕ್ಕಡಿ ಯಲ್ಲಿ ಕೆಂದು ಇಂಡಿಯನ್ನರಿಗೆ ಮೊನ್ನೆ ಮೊನ್ನಿನ ತನಕ ಸ್ಥಾನವೇ ಇರಲಿಲ್ಲ. ಇತ್ತೀಚೆಗೆ ಮಾಹಿತಿ ದೊರೆತ ಬಳಿಕ ವಂಶಶಾಸ್ತ್ರಜ್ಞರು ಕೃಷ್ಣವರ್ಣೀಯ ನಿಗ್ರೋಗಳಿ ಗಿಂತ ಮೇಲಿನ ಅಥವಾ ಅವರಿಗೆ ಸಮಾನವಾದ ಸ್ಥಾನವನ್ನು ಇವರಿಗೆ ಕೊಡುತ್ತಿದ್ದಾರೆ.

**ಐದು ವರ್ಗಗಳು :—** ಮಾನವ ವಂಶಶಾಸ್ತ್ರಜ್ಞರು ವಂಶಭೇದವನ್ನನುಸರಿಸಿ ಮಾನವ ಜಾತಿಯನ್ನು ಐದು ಬಗೆಯಾಗಿ ವಿಂಗಡಿಸುತ್ತಾರೆ: ಉತ್ತರ ಕಾಕೇಶಿಯನ್ ದಕ್ಷಿಣ ಕಾಕೇಶಿಯನ್, ಮಂಗೋಲಿಯನ್, ನಿಗ್ರಾಯಿಡ್, ಮತ್ತು ಆಸ್ಟ್ರೆಲಾಯಿಡ್ ಎಂದು. ಇವುಗಳಲ್ಲಿ ಉತ್ತರ ಕಾಕೇಶಿಯನ್ ವಂಶವು ದೊಡ್ಡದು. ಅವರಲ್ಲಿ ನಾರ್ವೇಜಿಯನ್, ಟ್ಯೂಟನ್, ಕೆಲ್ಟ್, ಸ್ಲಾವ್ಹ ಮತ್ತು ಆರ್ಯನ್ ಎಂಬ ಅನೇಕ ಉಪಭೇದಗಳುಂಟು. ದಕ್ಷಿಣ ಕಾಕೇಶಿಯನ್ ವಂಶದಲ್ಲಿ ಸುಮೇರಿಯನ್ ಮತ್ತು ಸೆಮಿಟಿಕ್ ಎಂದು ಒಳಭೇದಗಳಿವೆ. ಈ ಒಳಭೇದಗಳಲ್ಲಿ ಮತ್ತೂ ಒಳಭೇದಗಳಿವೆ. ಸುಮೇರಿಯನ್ ವರ್ಗದಲ್ಲಿ ಖಾಲ್ಡಿಯನ್, ಹೆಮಿಟಿಕ್ ಅಥವಾ ಇಜಿಪ್ಸಿಯನ್, ದ್ರಾವಿಡ ಮತ್ತು ಗ್ರೀಸಿನ ದಕ್ಷಿಣ ಕಡೆಯ ಮಾಯನೋಅನ್ ಎಂದೂ ಸೆಮಿಟಿಕ್ ವರ್ಗದಲ್ಲಿ ಅಕೆಡಿಯನ್, ಅಸೀರಿಯನ್, ಫಿನಿಸಿಯನ್ ಮತ್ತು ಜೂ ಎಂದೂ ನಾಲ್ಕು ನಾಲ್ಕು ಉಪವರ್ಗಗಳಿರುವವು. ಮಂಗೋಲಿಯನ್ ವಂಶದಲ್ಲಿ ಹೂಣ, ತುರಾಣಿ ಅಥವಾ ತುರ್ಕ, ಮೋಂಗಲ್ ಜನಾಂಗಗಳ ಸಮಾವೇಶವಾಗುತ್ತದೆ. ಈ ಮೊಂಗಲರೂ ಹದಿನಾರನೆಯ ಶತಕದಲ್ಲಿ ಹಿಂದುಸ್ತಾನಕ್ಕೆ ಬಂದ ಮೊಗಲರು ಅಥವಾ ಮುಘಲರು ಒಂದೇ ಅಲ್ಲ. ಈ ಬಗ್ಗೆ ಮುಂದೆ ವಿವೇಚಿಸಲಾಗುವುದು. ನಾಲ್ಕನೆಯ ವರ್ಗವೆಂದರೆ ನಿಗ್ರಾಯಿಡ್ ಜನರದು. ಮುಖ್ಯವಾಗಿ ಆಫ್ರಿಕೆಯ ಮೂಲನಿವಾಸಿಗಳಾದ ನಿಗ್ರೋಗಳು ಈ ವರ್ಗಕ್ಕೆ ಸೇರಿದವರು. ಅಮೇರಿಕೆಯಲ್ಲಿಯ ರೆಡ್ ಇಂಡಿಯನ್ನರನ್ನು ಆಸ್ಟ್ರೆಲಾಯಿಡ್ ವರ್ಗದಲ್ಲಿ ಎಣಿಸಲಾಗುವುದು. ವಾಸ್ತವವಾಗಿ ಹೇಳುವುದಾದರೆ, ಈ ನಾಲ್ಕನೆಯ ಹಾಗೂ ಐದನೆಯ ವರ್ಗದವರನ್ನು ಕುರಿತು ಮಾನವ ವಂಶಶಾಸ್ತ್ರಜ್ಞರು ಇನ್ನೂ ಸೂಕ್ಷ್ಮವಾಗಿ ಅಭ್ಯಾಸಮಾಡಿಲ್ಲ. ಮನುಷ್ಯನ ಗುಣಗಳು ವಂಶವನ್ನು ಅವಲಂಬಿಸಿರುವವು ಎಂಬ ತಿಳಿವಳಿಕೆಗೇ ಕೆಲ ಶಾಸ್ತ್ರಜ್ಞರು ಗಟ್ಟಿಯಾಗಿ ಅಂಟಿಕೊಂಡಿದ್ದಾರೆ; ಮತ್ತು ಅದಕ್ಕೆ ಶಾಸ್ತ್ರೀಯ ಆಧಾರಗಳನ್ನು ಹುಡುಕಲೂ ಅವರು ಪ್ರಯತ್ನಿಸಿದ್ದಾರೆ.

**ಮಾನವೀಯ ಸಮತೆ :—** ಮನುಷ್ಯನ ಗುಣ ಜನ್ಮಜಾತವಾಗಿರಲಿ ಬಿಡಲಿ; ವಂಶಭೇದದ ಮೇಲೆ ನಿಲ್ಲಿಸಲಾದ ಮತ್ತು ಹಾಗೆ ಹೇಳುವ ಶಾಸ್ತ್ರೀಯ ಸಿದ್ಧಾಂತಗಳಿಂದ ದೃಢಪಟ್ಟ ಮಾನವೀಯ ಉಚ್ಚನೀಚಭಾವದ ಸಿದ್ಧಾಂತವು ಎರಡು ಕಾರಣಗಳಿಂದ ಹೊಯ್ದಾಡುತ್ತಲಿದೆ. ಒಂದು ಕಾರಣ—ಜನಾಂಗಗಳ ಭ್ರಮಣದಲ್ಲಿ ವಂಶವಂಶಗಳು ತಿಳಿಯಲಾರದಷ್ಟು ಮಿಶ್ರವಾಗಿ, ಇವನು ಶುದ್ಧ ಆರ್ಯ ಇವನು ದ್ರಾವಿಡ ಎಂದು ಶೋಧಿಸಿ ಗುರುತಿಸುವುದೇ ಕಠಿಣವಾಗಿದೆ. ಎರಡನೆಯ ಕಾರಣ— ಪ್ರತಿಯೊಂದು ಜನಾಂಗದಲ್ಲಿಯೂ ತನ್ನ ಸ್ವತಂತ್ರ ವ್ಯಕ್ತಿಮತ್ತ್ವದ ಅರಿವು ಬೆಳೆದಿದ್ದು, ಯಾವ ಜನಾಂಗವೂ ಎರಡನೆಯವರ ಜನ್ಮಜಾತ ಗುಣಶ್ರೇಷ್ಠತೆಯನ್ನು ಒಪ್ಪಿಕೊಂಡು ತಲೆತಗ್ಗಿಸಿಕೊಂಡಿರುವುದು ಇನ್ನು ಮುಂದೆ ಅಸಂಭವ. ಇನ್ನೊಬ್ಬನಿಗೆ ಸಾಧ್ಯವಾದದ್ದು ತನಗೂ ಸಾಧ್ಯ ಎಂಬ ನಂಬುಗೆ ಎಲ್ಲೆಡೆಗೂ ಉಂಟಾಗಿರುವುದನ್ನು ಗಮನಿಸಬೇಕು. ಎಂದರೆ, ಭವಿಷ್ಯಕಾಲದಲ್ಲಿಯ ವಿಶ್ವಶಾಂತತಾವಾದಿ ಪುನರ್ಘಟನೆಯನ್ನು

ವಂಶದ ಶ್ರೇಷ್ಠ ಕನಿಷ್ಠಭಾವಕ್ಕಿಂತ ಮಾನವೀಯ ಮೂಲಭೂತ ಐಕ್ಯದ ತಿಳಿವಳಿಕೆಯ ತಳಹದಿಯ ಮೇಲೆ ಹೆಚ್ಚು ಯಶಸ್ವಿಯಾಗಿ ಕಟ್ಟಬಹುದು.

**ಜನಾಂಗಗಳ ಅಲೆದಾಟ** :— ನಾಳೆ ಏನೇ ಆಗಲಿ; ಹಿಂದೆ ಮನುಷ್ಯಜನಾಂಗ ತನ್ನ ಹುಟ್ಟುನಾಡಿನಲ್ಲೇ ಕಾಲೂರಿ ನಿಂತಿತ್ತೆಂದು ಇತಿಹಾಸವು ಹೇಳುತ್ತಿಲ್ಲ. ಅಲೆಯುವ ಒಂದು-ಗುಂಪು ಊಟ ಹುಡುಕುತ್ತ ಗಿರಿಕಂದರಗಳಿಂದ ಬಯಲು ಸೀಮೆಗೆ ಹೋಗುವುದು, ನದಿ ಸಮುದ್ರಗಳ ದಡದಲ್ಲಿ ಊರು ಕಟ್ಟಿಕೊಂಡು ಸುಖವಾಗಿದ್ದ ಜನಾಂಗವನ್ನು ಹೊಡೆದಟ್ಟುವುದು:— ಇತಿಹಾಸದಲ್ಲಿ ಎಷ್ಟೋಸಲ ಹೀಗಾಗಿದೆ. ಇಂಗ್ಲಂಡಿನ ಇತಿಹಾಸದಲ್ಲಿ, ರೋಮನರು ಮೂಲವಾಸಿ ಕೆಲ್ಟರನ್ನು ಹಿಂದೂಡಿದರು, ಆ ಮೇಲೆ ರೋಮನ್-ಕೆಲ್ಟರಿಬ್ಬರೂ ಡ್ಯಾನಿಶ್ ಮತ್ತು ಆಂಗ್ಲೋಸಕ್ಸನರ ಮುಂದೆ ಬಾಗಬೇಕಾಯಿತು. ಹಿಂದುಸ್ತಾನದ ಇತಿಹಾಸದಲ್ಲಿ, ಮೂಲ ಕಾಡು ಜನರು ದ್ರಾವಿಡರಿಂದ ಪರಾಜಿತರಾದರು, ಮತ್ತು ಮುಂದೆ ದ್ರಾವಿಡರು ಆರ್ಯರಿಗೆ ಇಂಬು ಮಾಡಿಕೊಡಬೇಕಾಯಿತು. ಈ ಸುಖಾಸೀನರಾದ ಆರ್ಯರ ಮೇಲೂ, ಸಂಮಿಶ್ರ ವರ್ಣೀಯರ ಮೇಲೂ ಶಕರು, ಹೂಣರು, ಮಂಗೋಲಿಯನರು, ಮುಸಲ್ಮಾನರು ಹಲವು ದಾಳಿಗಳನ್ನು ಮಾಡಿದರು. ಕಳೆದ ಸಾವಿರ ವರ್ಷಗಳಲ್ಲಿ ಮಾತ್ರ, ಸುಧಾರಿಸಿದ ಸುಖಾಸೀನ ಸ್ಥಾನಿಕ ಜನರ ಮೇಲೆ ಕಾಡುಜನರ ದಾಳಿಗಳಾಗಲಿಲ್ಲ. ಆದರೆ ಇಷ್ಟರಿಂದಲೇ ಯುದ್ಧ ನಿಂತಿತೆಂದು ತಿಳಿಯಲಾಗದು. ಈಗ ಸುಖಾಸೀನ ಸುಧಾರಿಸಿದ ಜನರು ತಮ್ಮ ತಮ್ಮಲ್ಲಿ ಬಡಿದಾಡಿ ನಾಶಹೊಂದುತ್ತಿದ್ದಾರೆ. ಎಂದ ಮಾತ್ರಕ್ಕೆ, ಭವಿಷ್ಯತ್ಕಾಲದಲ್ಲಿ ಸರ್ವನಾಶವೋ ಪ್ರಳಯ ಕಾಲವೋ ಸಮೀಪಿಸಿದೆ ಎಂದು ಗಾಬರಿಗೊಂಡು ಅಂದಾಜುಕಟ್ಟುವ ಅಗತ್ಯವಿಲ್ಲ. ' ಸಕಾಲದಲ್ಲಿಯೆ ಕಣ್ಣುತೆರೆದು ಶಾಂತತೆಯ ತಳಹದಿಯಮೇಲೆ ಜಾಗತಿಕ ಪುನರ್ಘಟನೆ ಮಾಡುವ ಬುದ್ಧಿ ಮನುಷ್ಯನಿಗೆ ಹುಟ್ಟಿದರೂ ಹುಟ್ಟಬಹುದು. ಏಕೆಂದರೆ, ವಿಧಾಯಕ ಮತ್ತು ವಿಧ್ವಂಸಕ ಎರಡೂ ವಿಧದ ಕರ್ತೃತ್ವ ಶಕ್ತಿಯಲ್ಲಿ ಇಂದಿನ ಸುಧಾರಿಸಿದ ಮನುಷ್ಯನು ಕಾಡು ಮನುಷ್ಯನನ್ನು ಹಿಂದೆ ಹಾಕಿದ್ದಾನೆ.

## ಪ್ರಶ್ನೆಗಳು

೧. ಇತಿಹಾಸ ಬದಲಾಗುವದು ಎಂದರೇನು ? ೨. ಚಿಕ್ಕಂದಿನಲ್ಲಿ ದೇವರು, ಮುಗಿಲು ಚಿಕ್ಕೆಗಳು ಇವುಗಳ ಬಗ್ಗೆ ನಿಮಗೇನು ಎನಿಸುತ್ತಿತ್ತೆಂದು ಸ್ಮರಿಸಿರಿ. ೩. ಮಾನವ ವಂಶಗಳನ್ನೂ, ಅವುಗಳ ಪ್ರಮುಖ ಲಕ್ಷಣಗಳನ್ನೂ ಹೇಳಿರಿ. ೪. ಮನುಷ್ಯನಿಗೆ ಮನೆ, ಬೀಸುಕಲ್ಲು, ನೇಗಿಲುಗಳ ಕಲ್ಪನೆ ಹೇಗೆ ಬಂದಿರಬಹುದು ?

## ದ್ವಿತೀಯ ಖಂಡ

## ಪ್ರಾಚೀನ ಸಂಸ್ಕೃತಿ

**ವಿವಿಧ ಸಂಸ್ಕೃತಿಗಳ ಉಗಮ :—** ಸೃಷ್ಟಿಯು ಹುಟ್ಟಿನಿಂದ ಜನಾಂಗದ ಪರಿಭ್ರಮಣದ ವರೆಗಿನ ಆಗುಹೋಗುಗಳನ್ನು ಹಿಂದಿನ ಭಾಗದಲ್ಲಿ ಸಮಾಲೋಚಿಸ ಲಾಯಿತು. ಮನುಷ್ಯನು ಬೇಸಾಯಕ್ಕೆ ತೊಡಗಿದಂದಿನಿಂದ ಒಂದೊಂದು ಕಡೆ ಜನರ ಒಂದೊಂದು ಗುಂಪು ತಳವೂರಿ ನಿಲ್ಲತೊಡಗಿತು. ಮನುಷ್ಯನ ಪ್ರಾದೇಶಿಕ ಇತಿ ಹಾಸವು ಇಲ್ಲಿಂದ ಆರಂಭವಾಗುತ್ತದೆ. ಹೊಳೆ-ಕಡಲುಗಳ ದಂಡೆಯ ಫಲವತ್ಪ್ರದೇಶ ದಲ್ಲಿ ಒಕ್ಕಲುತನ ಸುಲಭವಾಗಿದ್ದುದರಿಂದ ಮೊದಮೊದಲಿನ ಜನವಸತಿ ಅಂಥಪ್ರದೇಶ ಗಳಲ್ಲಿಯೇ ಕಂಡು ಬರುತ್ತದೆ. ಹೆಮಿಟಿಕ್ ವಂಶವು ಇಜಿಪ್ತದಲ್ಲಿ ನೈಲ್ ನದಿ ತೀರ ದಲ್ಲಿ ನೆಲಸಿತು. ಸೆಮಿಟಿಕ್ ಮತ್ತು ಸುಮೇರಿಯನ್ ವಂಶಗಳು ಬಾಬಿಲೋನಿಯಾ ದಲ್ಲಿ ಗ್ರೀಸ್-ಯುಫ್ರೆಟಸ್ ತಳದಲ್ಲಿ ತಳವೂರಿದವು. ಆರ್ಯರು ಪಂಜಾಬದಲ್ಲಿ ಸಿಂಧುವಿನ ಕೊಳ್ಳಪ್ರದೇಶಗಳಲ್ಲಿ ವಾಸಿಸಿದರು. ತುರಾಣಿ ಮತ್ತು ಮಂಗೋಲಿ ವಂಶವು ಚೀನದ ಹೋಆಂಗಹೋ ಹೊಳೆಯ ಪಡದಲ್ಲಿ ಬೀಡು ಬಿಟ್ಟಿತು. ಈ ಮಾತಿಗೆ ಸರಾಸರಿ ಪ್ರಮಾಣದಿಂದ ೪೦೦೦ ವರ್ಷಗಳು ಸಂದವು ಈ ಕಾಲದಲ್ಲಿ ಬೇರೆ ಬೇರೆ ಕಡೆಗಳಲ್ಲಿ ನೆಲಸಿದ ಮನುಷ್ಯ ಸಮೂಹಗಳ ಸಂಸ್ಕೃತಿಗಳ ತ್ರೋಟಕ ಪರಿಚಯವನ್ನು ಈ ಪ್ರಕರಣದಲ್ಲಿ ಕೊಟ್ಟಿದೆ.

**ಸಂಸ್ಕೃತಿ ಎಂದರೇನು ? :** ಸಂಸ್ಕೃತಿ ಶಬ್ದಕ್ಕೆ ಅರ್ಥ ಹಚ್ಚುವುದು ಬಲು ಕಷ್ಟ. ತಲೆ ತಲಾಂತರಗಳ ಜ್ಞಾನ-ಅನುಭವಗಳಿಂದ ಮನದ ಮೇಲಾದ ಸಂಸ್ಕಾರ ಎಂದು ಸ್ಥೂಲಾರ್ಥದಲ್ಲಿ ಹೇಳಬಹುದು. ಒಂದೊಂದು ಪ್ರದೇಶದಲ್ಲಿ ಪ್ರಗತಿಹೊಂದು ತ್ತಿದ್ದ ಮನುಷ್ಯಸಮೂಹದಲ್ಲಿ ಒಂದೊಂದು ವೈಶಿಷ್ಟ್ಯವು ಉಂಟಾಗುತ್ತಿರುತ್ತದೆ. ಮನುಷ್ಯನು ನಿಸರ್ಗವನ್ನು ಗೆಲ್ಲುವದಕ್ಕಾಗಿ ಮಾಡಿದ ಪ್ರಯತ್ನಗಳಿಂದ ಮತ್ತು ಅಲ್ಲಲ್ಲಿ ಅವನು ಮಾಡಿದ ತನ್ನ ಬುದ್ಧಿಶಕ್ತಿಯ ಉಪಯೋಗದಿಂದ ಮನುಷ್ಯನಲ್ಲಿ ಸುಧಾರಣೆ ಯಾಗುತ್ತದೆ; ಆದರೆ ಅಷ್ಟರಿಂದಲೇ ಅವನು ಸುಸಂಸ್ಕೃತನೂ ಸಭ್ಯನೂ ಆಗುತ್ತಾ ನೆಂದು ಹೇಳಲಾಗುವದಿಲ್ಲ. ಸ್ವಾತಂತ್ರ್ಯಪ್ರೀತಿಯೂ ಸಾರಾಸಾರ ವಿಚಾರಮಾಡುವ ಶಕ್ತಿಯೂ ಹೆಚ್ಚಿಗಿದ್ದ ಸಮಾಜವೇ ಸುಸಂಸ್ಕೃತವೆಂದು ಹೇಳಬೇಕು. ಹೀಗೆ ಅತಿ ಪ್ರಾಚೀನ ಕಾಲದಲ್ಲಿ ಬೇರೆ ಬೇರೆ ಕಡೆಗಳಲ್ಲಿದ್ದ ಮಾನವನ ಪ್ರಗತಿಯ ವರ್ಣನೆ ಯನ್ನು ಮುಂದೆ ಕೊಡಲಾಗಿದೆ.

## ೧. ಸಿಂಧು–ಸಂಸ್ಕೃತಿ

**ಕ್ರಾಂತಿಕಾರಕ ಶೋಧ:** ಕ್ರಿ. ಪ. ೧೯೨೨ ರಲ್ಲಿ ಭಾರತದ ಇತಿಹಾಸದಲ್ಲಿ ಕ್ರಾಂತಿಯನ್ನುಂಟುಮಾಡುವಂತಹ ಒಂದು ಸಂಗತಿ ಜರುಗಿತು. ಸಿಂಧ–ಪಂಜಾಬ ಪ್ರಾಂತಗಳಲ್ಲಿ ಸುಮಾರು ಎರಡು-ಎರಡೂವರೆ ಸಾವಿರ ವರುಷಗಳ ಹಿಂದಿನ ಬೌದ್ಧ ಸಂಸ್ಕೃತಿಯ ಅವಶೇಷಗಳು ದೊರೆಯಬಹುದೆಂದು ಸಂಶೋಧನೆ ನಡೆದಿತ್ತು. ಸಿಂಧ ದಲ್ಲಿ ಲಾರಖಾನಾ ನಗರದಿಂದ ೨೫ ಮೈಲುಗಳ ಮೇಲೆ ಸಿಂಧುವಿನ ಕೊಳ್ಳದಲ್ಲಿ ಮೊಹೆಂಜೋದಡೋ ಎಂಬಲ್ಲಿ ಅಗೆಯುತ್ತಿರಲಾಗಿ ಸುಮಾರು ನಾಲ್ಕೂವರೆ ಸಾವಿರ ದಿಂದ ಐದುಸಾವಿರ ವರುಷಗಳಷ್ಟು ಹಿಂದಿನ ಅವಶೇಷಗಳು ಡಾ. ಆರ್. ಡಿ. ಬ್ಯಾನರ್ಜಿಯವರಿಗೆ ದೊರೆತವು ಅವುಗಳಲ್ಲಿ ಚಿತ್ರಲಿಪಿಯುಳ್ಳ ಮುದ್ರೆಗಳೂ ಕೆಲವಿದ್ದವು. ಹೆಚ್ಚಿನ ಸಂಶೋಧನೆಯಲ್ಲಿ ಅವುಗಳು ಸುಮೇರೀ ಸಂಸ್ಕೃತಿಯ ಕುರು ಹುಗಳೆಂದು ಗೊತ್ತಾಗಿದೆ. ಮೊಹೆಂಜೋದಡೋದಂತೆ ಪಂಜಾಬದಲ್ಲಿ ಮೊಂಟಗೋ ಮೆರಿ ಜಿಲ್ಹೆಯ ಹರಪ್ಪ ಎಂಬಲ್ಲಿ ಸಿಂಧೂತೀರದಲ್ಲಿ ನಡೆಸಿದ ಉತ್ಖನನದಲ್ಲಿಯೂ ಇಂತಹ ಅವಶೇಷಗಳು ಉಪಲಬ್ಧವಾದವು.* ಈ ಸಂಶೋಧನೆಯಿಂದ ಭಾರತದ ಇತಿಹಾಸವು ಒಮ್ಮೆಲೆ ಒಂದೊಂದೂವರೆ ಸಾವಿರ ವರುಷಗಳಷ್ಟು ಕಾಲ ಹಿಂದಕ್ಕೆ ಸರಿ ಯಿತು. ಇದಕ್ಕೂ ಮೊದಲು ಭಾರತದ ಇತಿಹಾಸವನ್ನು ವೇದಕಾಲದಿಂದ ಎಂದರೆ ಸುಮಾರು ಕ್ರಿಸ್ತಪೂರ್ವ ೨೦೦೦ ವರುಷಗಳಿಂದ ಆರಂಭಿಸಲಾಗುತ್ತಿತ್ತು. ವೇದಕಾಲ ಕ್ಕಿಂತ ಮುಂಚಿನ ಭಾರತೀಯ ಜೀವನವನ್ನು ರೇಖಿಸುವುದೂ ಸಾಧ್ಯವಾಗಿದೆ. ಭಾರ ತೀಯ ಸಂಸ್ಕೃತಿ, ಪ್ರಾಚೀನತೆಯಲ್ಲಿ, ಇಜಿಪ್ತ ಮತ್ತು ಬಾಬಿಲೋನಿಯನ್ ಸಂಸ್ಕೃತಿ ಗಳ ಸರಿಸಮಾನವೆಂದು ಹೇಳಬಹುದಾಗಿದೆ. ಅರ್ವಾಚೀನ ಯುರೋಪಿಯನ್ ಸಂಸ್ಕೃತಿಯ ಆರಂಭವು ಗ್ರೀಸದ ಉದಯದಿಂದಾಗುತ್ತದೆ. ಗ್ರೀಸದ ಉದಯಕಾಲ ಕ್ರಿ. ಪೂ. ಏಳನೆಯ ಶತಕ. ಅರ್ಥಾತ್ ಭಾರತೀಯ ಸಂಸ್ಕೃತಿ ಯುರೋಪಿಯನ್ ಸಂಸ್ಕೃತಿಗಿಂತ ಏನಿಲ್ಲೆಂದರೂ ಎರಡು ಸಾವಿರ ವರುಷಗಳಷ್ಟು ಹಳೆಯದೆಂದು ಸಿದ್ಧವಾಯಿತು.

**ಮೊಹೆಂಜೋದಡೋದ ರಚನೆ:** 'ಮೊಹೆಂಜೋದಡೋ' ಎಂಬದು ಸಿಂಧೀ ಭಾಷೆಯ ಶಬ್ದ. ಮೃತರ ದಿಬ್ಬ ಎಂದು ಅದರ ಅರ್ಥ. ಆ ಊರಿನ ಹತ್ತಿರ ಅಲ್ಲಲ್ಲಿ ೨೦ರಿಂದ ೭೦ ಅಡಿಗಳ ವರೆಗೆ ಅಗೆದಾಗ ಸಂಪನ್ನ-ಸುಸಂಸ್ಕೃತ ಜನರು ವಾಸಿಸುತ್ತಿದ್ದ ದೊಡ್ಡ ನಗರದ ಅವಶೇಷಗಳು ಹೊರಟವು. ಒಳ್ಳೆಯ ಸ್ಥಿತಿಯಲ್ಲಿದ್ದ ಅವಶೇಷಗಳಿಂದ, ಈ ಪಟ್ಟಣ ಬಹಳ ದೊಡ್ಡದಿರಬೇಕು; ಒಕ್ಕಲತನವೂ ವ್ಯಾಪಾರವೂ ಬಹು ದೊಡ್ಡ ಪ್ರಮಾಣದಲ್ಲಿ ಅಲ್ಲಿ ನಡೆಯುತ್ತಿದ್ದಿರಬೇಕು; ಅಲ್ಲಿಯ ಬೀದಿಗಳು ೩೩ ಅಡಿಗಳಷ್ಟು ಹರವಾಗಿದ್ದವು; ಎಲ್ಲ ಬಗೆಯ ಸುಖಸೌಕರ್ಯಗಳಿಂದ ಸಜ್ಜಿತವಾದ ಮಹಾಗೃಹಗಳು

* ಇವೆರಡೂ ಸ್ಥಳಗಳು ಈಗ ಪಾಕಿಸ್ತಾನದಲ್ಲಿವೆ.

ಕೆಲವಾರು ಇದ್ದಿರಬಹುದು; ಎಂದು ಸ್ಪಷ್ಟವಾಗಿ ಕಂಡುಬರುತ್ತದೆ. ಗಟ್ಟಿಯಾದ ಇಟ್ಟಂಗಿಗಳ ಎತ್ತರವಾದ ಗೋಡೆಗಳು, ಕಟ್ಟೆಗಳು, ಪಕ್ಕಾ ಕಟ್ಟಡದ ಚರಂಡಿಗಳು, ನೀರಿನ ನಲ್ಲಿ ಮೊದಲಾದವುಗಳ ಅವಶೇಷಗಳು ಈಗಲೂ ಕಾಣುತ್ತಿವೆ. ಬಹುಶಃ ನೆರೆ ಹಾವಳಿಯ ಭೀತಿಯಿಂದ ಅಲ್ಲಿ ಒಂದೇ ನೆಲೆಯ ಮನೆಗಳಿದ್ದಂತೆ ಕಂಡುಬರುತ್ತದೆ. ಪ್ರತಿಯೊಂದು ಮನೆ ನೆರೆಮನೆಗೆ ಹೊಂದಿಕೊಂಡಿದ್ದಿಲ್ಲ, ಮನೆಗೆ ಬೀದಿಯ ಕಡೆ ಕಿಡಿಕಿ



ಮೊಹೆಂಜೋದಡೋದಲ್ಲಿಯ ಒಂದು ದೃಶ್ಯ

ಗಳಿದ್ದಿಲ್ಲ. ಕಂಬಗಳು ಚೌಕು, ಅವುಗಳ ಮೇಲೆ ವಿಶೇಷ ನಕ್ಷೆಗಳಿಲ್ಲ. ಮೊಹೆಂಜೋದಡೋ ಕಾಲದಲ್ಲಿ ನಗರಸಭೆಯಂತಹ ಸಂಸ್ಥೆಯೊಂದು ಇದ್ದಿರಬಹುದೆಂದು ಊಹಿಸಲು ಅವಕಾಶವಿದೆ. ಏಕೆಂದರೆ, ಪ್ರತಿಯೊಂದು ಮನೆಯ ಚರಂಡಿ ಸಾರ್ವಜನಿಕ ಚರಂಡಿಗೆ ವ್ಯವಸ್ಥಿತವಾಗಿ ಜೋಡಿಸಲ್ಪಟ್ಟುದನ್ನು ಅಲ್ಲಿ ಕಾಣುತ್ತೇವೆ. ಎಲ್ಲ ಮನೆಗಳೂ ಒಂದೇ ಸಾಲಿನಲ್ಲಿ ಅಚ್ಚುಕಟ್ಟಾಗಿ ನಗರರಚನೆಯ ಪೂರ್ವಯೋಜನೆ ಮಾಡಿಕೊಂಡು ಕಟ್ಟಿದಂತೆ ಕಾಣುತ್ತಿವೆ. ಇಷ್ಟೇ ಅಲ್ಲ, ರಾತ್ರಿಯಲ್ಲಿ ಬೀದಿಯ ಬೆಳಕಿಗಾಗಿ ದೀಪದ ಕಂಬಗಳಿದ್ದುದೂ ಕಂಡುಬರುತ್ತದೆ. ಸಿಂಧದ ಹವಾಮಾನವು ಆಗ ಈಗಿನಷ್ಟು ಉಷ್ಣವೂ ಒಣದೂ ಆಗಿರಲಿಕ್ಕಿಲ್ಲ. ಏಕೆಂದರೆ ದಟ್ಟಡವಿಯಲ್ಲಿ ಕಂಡುಬರುವ ಪ್ರಾಣಿಗಳ ಚಲನವಲನವು ಅಲ್ಲಿ ಇದ್ದಿತೆಂಬುದಕ್ಕೆ ಸ್ಪಷ್ಟ ಪ್ರಮಾಣಗಳುಂಟು. ಆ ಕಾಲದ ಇಟ್ಟಂಗಿಗಳು ಭಟ್ಟಿಯಲ್ಲಿ ಸುಟ್ಟಂತಹವಿವೆ; ಬಿಸಿಲಿನಲ್ಲಿ ಒಣಗಿಸಿದವಲ್ಲ.

**ದೊರೆತ ವಸ್ತುಗಳು :** ಗಡ್ಡವುಳ್ಳ ಎರಡು ಮನುಷ್ಯಮೂರ್ತಿಗಳು, ನೀಲೀ ಕಾಜಿನ ಬಳೆಗಳು, ನಾಣ್ಯಗಳು, ಚಾಕು, ನೇಗಿಲಿನ ಕುಳ, ಜೀರ್ಣ ಗೋದಿ, ಸೆಜ್ಜೆ, ಕಜ್ಜೂರ, ದ್ಯೂತದಾಟದ ದಾಳ, ಉತ್ತಮ ಕಲ್ಲಿನ ಉಂಗುರಗಳು, ಕೆಲವು ಮೊಹರುಗಳು ಮೊಹೆಂಜೋದಡೋ ನಗರದಲ್ಲಿ ಸಿಕ್ಕಿವೆ. ವಸ್ತ್ರ-ಆಭರಣಗಳಿಂದ ತುಂಬಿದ ತಾಮ್ರದ ಪಾತ್ರೆಗಳಿದ್ದವು ಧಾತುಗಳ ಮತ್ತು ಜಿಗಟು ಮಣ್ಣಿನ ಮೊಹರು ಮುದ್ರೆಗಳು ಎಷ್ಟೋ ಸಿಕ್ಕಿವೆ. ಚಿತ್ರವಲ್ಲದೆ ಬೇರೆ ಏನೋ ಚಿಹ್ನಗಳು ಅವುಗಳಲ್ಲಿ ಕಾಣುತ್ತವೆ; ಬಹುಶಃ ಅದು ಚಿತ್ರಲಿಪಿಯಿರಬಹುದು. ಇಂತಹ ನಾಲ್ಕುನೂರು ಭಿನ್ನ ಭಿನ್ನ ಚಿಹ್ನಗಳಿರುವುದು ಶಾಸ್ತ್ರಜ್ಞರಿಗೆ ಕಂಡುಬಂದಿದೆ. ಈ ಲಿಪಿಯನ್ನು ಓದುವುದು ಸಾಧ್ಯವಾದರೆ ಇನ್ನೂ ಎಷ್ಟೋ ಸಂಗತಿಗಳು ಬಯಲಿಗೆ ಬರಬಹುದು.



ಪಾತ್ರೆಗಳ ಮೇಲಿನ ಅಲಂಕಾರಗಳು

**ಸುಸಂಸ್ಕೃತ ಜನರು :** ಇವೆಲ್ಲ ಪ್ರಮಾಣಗಳಿಂದ ತಿಳಿಯುವುದೇನಂದರೆ—ಈ ನಗರ ನಿವಾಸಿಗಳು ಒಕ್ಕಲುತನ ಮಾಡುತ್ತಿದ್ದರು; ಬೆಳ್ಳಿ ಬಂಗಾರದ



ಅಗೆಯುವಾಗ ದೊರೆತ ಒಂದು ಪಾತ್ರೆಯೊಳಗಿನ ಆಭರಣಗಳು

ಒಡವೆ ಧರಿಸುತ್ತಿದ್ದರು; ದ್ಯೂತ, ಬೇಟೆ, ಹುಂಜಗಳ ಕಾದಾಟ ಇವರ ಮನೋರಂಜನೆಯ ಆಟಗಳಾಗಿದ್ದವು; ಅಂದವಾಗಿ ಗಡ್ಡ ಬೆಳೆಸುತ್ತಿದ್ದರು; ಹತ್ತಿಯ ನೂಲು ತೆಗೆಯುವುದು, ಅದರಿಂದ ಬಟ್ಟೆ ನೇಯುವುದು ಇವರಿಗೆ ಗೊತ್ತಿರಬೇಕು; ಮೈಮೇಲೆ ಶಾಲು ಹೊರುತ್ತಿದ್ದಿರಬೇಕು; ದಿನ ಬಳಕೆಯಲ್ಲಿ ಮುಖ್ಯವಾಗಿ ತಾಮ್ರದ ಪಾತ್ರೆಗಳಿದ್ದವು; ಸ್ತ್ರೀಯರು ನೃತ್ಯ ಮಾಡುತ್ತಿದ್ದರು; ತುಂಬಾ ವಸ್ತ್ರ ಒಡವೆ ಧರಿಸುತ್ತಿದ್ದರು; ಮಣ್ಣಿನ ಬಂಡಿಗಳು, ಗೊಂಬೆಗಳು ಮೊದಲಾದ ಹಲವಾರು ಮಕ್ಕಳ ಆಟಿಗೆಗಳಾಗಿದ್ದವು; ಒಟ್ಟಾರೆ, ಇವರ ಇರುವಿಕೆ ಉಚ್ಚವಾಗಿತ್ತೆಂದು ಇವೆಲ್ಲ ಸಂಗತಿಗಳಿಂದ ತೋರುತ್ತವೆ. ಕಬ್ಬಿಣದ ಉಪಯೋಗವು ಮಾತ್ರ ಈ ಜನರಿಗೆ ಗೊತ್ತಿದ್ದಂತೆ ಕಾಣುವುದಿಲ್ಲ. ಇಲ್ಲಿಯ ಉತ್ಖನನದಲ್ಲಿ ಚಾಕು ಚೂರಿಗಳಂತಹ ಸಣ್ಣ ಉಪಕರಣಗಳು ದೊರೆತಿವೆಯೇ ಹೊರತು ಕತ್ತಿ ಢಾಲುಗಳಾಗಲಿ, ಬಿಲ್ಲು ಬಾಣಗಳಾಗಲಿ ಕಂಡುಬಂದಿಲ್ಲ. ಆದುದರಿಂದ ಯುದ್ಧಮಾಡುವ ಪ್ರವೃತ್ತಿ ಇವರಲ್ಲಿರಲಿಲ್ಲವೆಂದು ಎನಿಸುತ್ತದೆ; ಇಷ್ಟೊಂದು ವ್ಯವಸ್ಥಿತವಾಗಿ ಕಟ್ಟಿದ ನಗರದ ಸುತ್ತಲೂ ಕೋಟೆ ಕೊತ್ತಳಗಳಿಲ್ಲ. ಹಾಗೆಯೆ, ಅರಸ, ಆಳುಹೋಳು ದಂಡು, ಮೊದಲಾದ ಯಾವ ರಾಜ್ಯಚಿಹ್ನವೂ ಕಂಡುಬರುವುದಿಲ್ಲ. ಇಷ್ಟರಿಂದ ಆ ಕಾಲದಲ್ಲಿ ರಾಜಸಂಸ್ಥೆ ಅಸ್ತಿತ್ವದಲ್ಲಿದ್ದಿರಲಿಕ್ಕಿಲ್ಲವೆಂದು ಹೇಳುವುದು ತಪ್ಪಾಗುವುದು ಗೋದಿ, ಜೋಳ, ಮೀನುಗಳಿಂದ ಈ ಜನರು ಉಪಜೀವಿಸುತ್ತಿದ್ದರು. ಆಕಳು, ಎತ್ತು, ಕತ್ತೆ, ಹುಲಿ ಅವರಿಗೆ ಗೊತ್ತಿದ್ದ ಪ್ರಾಣಿಗಳು; ಆದರೆ ಕುದುರೆ, ಒಂಟೆ, ಸಿಂಹಗಳ ಪರಿಚಯ ಅವರಿಗೆ ಇದ್ದಂತೆ ಕಾಣುವದಿಲ್ಲ. ಮಣ್ಣಿನ ಪಾತ್ರೆಗಳ ಮೇಲಿನ ಅವರ ಚಿತ್ರಾಕೃತಿಗಳನ್ನು ನೋಡಿದರೆ, ಸಮಕಾಲೀನ ಬಾಬಿಲೋನಿಯದ ಸುಮೇರಿಯನ್ ಜನದೊಡನೆ ಇವರ ಸಂಬಂಧವಿದ್ದಿರಬೇಕೆಂದು ಊಹಿಸಬಹುದಾಗಿದೆ.

**ದೇವ–ದೇವತೆಗಳು :** ತ್ರಿನೇತ್ರ ಪಶುಪತಿ ( ಶಂಕರ ), ದುರ್ಗಾ ( ಶಕ್ತಿ ದೇವತೆ), ಲಿಂಗ, ವೃಕ್ಷ, ಸರ್ಪಗಳನ್ನು ಅವರು ಪೂಜಿಸುತ್ತಿದ್ದರು. ದೇವರು ಒಬ್ಬನೇ ಎಂಬ ಸಿದ್ಧಾಂತಕ್ಕೆ ಅವರಿನ್ನೂ ತಲುಪಿರಲಿಲ್ಲ.

ದೊಡ್ಡ ಸಾರ್ವಜನಿಕ ಸ್ನಾನಗೃಹಗಳು ಈ ಮೊಹೆಂಜೋದಡೋ ಸಂಸ್ಕೃತಿಯ ಮಹತ್ತ್ವದ ವಿಶೇಷಗಳಾಗಿವೆ. ಈ ಇಪ್ಪತ್ತನೆಯ ಶತಕದಲ್ಲಿಯೂ ಇಂತಹ ಸ್ನಾನಗೃಹಗಳು ನಮ್ಮಲ್ಲಿಲ್ಲ. ಮೊಹೆಂಜೋದಡೋ ಕಾಲದಲ್ಲಿ ಸಾಮುದಾಯಿಕ ಸ್ನಾನವು ಶ್ರಾವಣಿಯಂತಹ ಮಹತ್ತ್ವದ ಧಾರ್ಮಿಕ ವಿಧಿಯಾಗಿದ್ದರೂ ಇರಬಹುದು. ಒಟ್ಟಿನಲ್ಲಿ ಮೊಹೆಂಜೋದಡೋ ಕಾಲದ ಜನರು ಶಾಂತವೃತ್ತಿಯವರು. ಕ್ಷಾತ್ರವೃತ್ತಿಯವರು ಆಗಿರಲಿಕ್ಕಿಲ್ಲ. ಅವರದು ಸುಸಂಸ್ಕೃತ ಜೀವನ; ಆದರೆ ಅವರ ಧರ್ಮ-ವಿಷಯಕ ಕಲ್ಪನೆ ಆರ್ಯರ ಮಾನದಿಂದ ಪ್ರಾಥಮಿಕಾವಸ್ಥೆಯಲ್ಲಿದ್ದಿರಬಹುದೆಂದು ತೋರುತ್ತದೆ.

**ಪ್ರಶ್ನೆಗಳು:**

೧. ಮೊಹೆಂಜೋದಡೋ ಕಾಲದ ನಗರವನ್ನು ವರ್ಣಿಸಿರಿ.

೨. ಮೊಹೆಂಜೋದಡೋ ಅಗೆತದಿಂದ ಇತಿಹಾಸದಲ್ಲಿ ಉಂಟಾದ ಕ್ರಾಂತಿಯಾವುದು

೩. ಆ ಕಾಲದ ಧರ್ಮ, ವೇಷ ಭೂಷಣ, ಆಟ ಇವುಗಳ ಬಗ್ಗೆ ಟಿಪ್ಪಣಿ ಬರೆಯಿರಿ.

# ೨. ಮೆಸಾಪೊಟೇಮಿಯಾದಲ್ಲಿಯ ಬಾಬಿಲೋನೀ–ನಿನ್ವೇವಾ ಸಂಸ್ಕೃತಿಗಳು

**ಕೋನಲಿಪಿ:**— ಸಿಂಧೂ ಸಂಸ್ಕೃತಿಯ ಸಮಕಾಲೀನವಾದ, ಸಂಭವತಃ ಅದಕ್ಕಿಂತ ಹಳೆಯದಿರಬಹುದಾದ ಇನ್ನೊಂದು ಸಂಸ್ಕೃತಿ ಪಶ್ಚಿಮ ಆಶಿಯದಲ್ಲಿ ಟೈಗ್ರಿಸ್ ಮತ್ತು ಯುಫ್ರೆಟಿಸ್ ನದಿಗಳ ದಡದಲ್ಲಿ ಉದಯಹೊಂದುತ್ತಲಿತ್ತು. ಈ ಎರಡೂ ನದಿಗಳ ದಂಡೆಯ ಪ್ರದೇಶವು ಫಲವತ್ತಾದದ್ದೂ ಜೇಣ್ಣಿಯಂತೆ ಮೆತ್ತಗಾದದ್ದೂ ಇದೆ. ಮಣ್ಣಿನ ಇಟ್ಟಿಗೆಮಾಡಿ ಅದರ ಮೇಲೆ ಕೋನಲಿಪಿಯಲ್ಲಿ ಅಲ್ಲಿಯ ಜನರು ಬರೆಯುತ್ತಿದ್ದರು. > < ∧ ∨ ಇಂತಹ ಕೋನಗಳನ್ನು ಒಂದುಕಡೆ ಹೊಂದಿಸಿದ ಚಿತ್ರಗಳಿಂದ ಸಿದ್ಧವಾದ ಲಿಪಿಗೆ 'ಕೋನಲಿಪಿ' ಎಂದು ಎನ್ನುತ್ತಾರೆ. ಅಲ್ಲಿಯ ಮೂಲ ಜನರು

ಸುಮೇರಿಯನ್ ಲಿಪಿ

ಸುಮೇರಿಯನ್ ವಂಶಜರು ಇವರು ಮುಂದೆ ಪೂರ್ವದ ಕಡೆಗೆ ಭಾರತದವರೆಗೆ ಹಬ್ಬಿಕೊಂಡರು. ಈ ಸಂಸ್ಕೃತಿಯಲ್ಲಿ ಸ್ಥಾನಪರತ್ವದಿಂದ ಉಂಟಾದ ಭಿನ್ನತೆಯನ್ನು ತೋರಿಸುವುದಕ್ಕಾಗಿ ಇಲ್ಲಿಯ ಸಂಸ್ಕೃತಿಯನ್ನು ಬಾಬಿಲೋನೀ ಸಂಸ್ಕೃತಿ ಎಂದು ಕರೆಯುತ್ತಾರೆ.

ಬಾಬಿಲೋನಿಯಾ* ಎಂದರೆ ಇಂದು ಮೆಸಾಪೊಟೆಮಿಯಾ ಎಂಬ ಹೆಸರಿನಿಂದ ಪರಿಚಿತವಾದ ಪ್ರದೇಶ. ಈ ಪ್ರದೇಶದಲ್ಲಿಯ ಬಗದಾದ ಮತ್ತು ಬಸರಾ ಪಟ್ಟಣಗಳು ಪ್ರಸಿದ್ಧವಾಗಿವೆ. ಟೈಗ್ರೀಸ್ ಮತ್ತು ಯುಫ್ರೆಟಿಸ್ ಎರಡೂ ಇರಾಣೀ ಆಖಾತಕ್ಕೆ ಕೂಡುವ ನದಿಗಳು ಈ ಎರಡೂ ನದಿಗಳಿಂದ ಒಂದೇಸವನೆ ಹರಿದು ಬರುತ್ತಿರುವ ಉಸುಕಿನಿಂದ ಪ್ರತಿ ನೂರು ವರ್ಷಕ್ಕೆ ಸಮುದ್ರದ ಮೂರು ಮೈಲುಗಳಷ್ಟು ಭಾಗವು ಹುಗಿಯುತ್ತದೆಂದು ಭೂಶಾಸ್ತ್ರಜ್ಞರು ಹೇಳುತ್ತಾರೆ. ಈ ದೃಷ್ಟಿಯಿಂದ ಕಳೆದ ನಾಲ್ಕು ಸಾವಿರ ವರ್ಷಗಳಲ್ಲಿ ೧೨೦ ಮೈಲು ಹೊಸ ನೆಲ ಉಂಟಾಗಿದೆ. ಅರ್ಥಾತ್, ಈಗ ಸಮುದ್ರದಿಂದ ದೂರವಿದ್ದ ಬಾಬಿಲೋನಿಯಾ ನಗರವು ಪೂರ್ವಕಾಲದಲ್ಲಿ ಸಮುದ್ರಕ್ಕೆ

* ಸುಮೇರಿ ಎಂಬುದು ವಂಶವಾಚಕ ಶಬ್ದ, ಬಾಬಿಲೋನೀ ಎಂಬುದು ಪ್ರದೇಶವಾಚಕ ಶಬ್ದ. ಬಾಬಿಲೋನೀ ಎಂಬ ಶಬ್ದದಿಂದ ಆ ಪ್ರದೇಶದಲ್ಲಿ ಉದಯ ಹೊಂದಿದ ಸುಮೇರಿ ಮತ್ತು ಸೆಮಿಟಿಕ್ ಎಂಬೆರಡೂ ಸಂಸ್ಕೃತಿಗಳು ಸೂಚಿತವಾಗುತ್ತವೆ. ಅಸೀರಿ ಸಂಸ್ಕೃತಿ ಸೆಮಿಟಿಕ್ ಜನಗಳ ಸಂಸ್ಕೃತಿ. ಅದು ಬಾಬಿಲೋನೀ ಹೌದು. ಆದರೆ ಸುಮೇರಿಯಲ್ಲ. ಒಮ್ಮೊಮ್ಮೆ ಬಾಬಿಲೋನೀ ಮತ್ತು ಸುಮೇರಿ ಈ ಎರಡನ್ನೂ ಒಂದೇ ವ್ಯಾಪ್ತಿಯ ಶಬ್ದಗಳೆಂದು ತಿಳಿಯುತ್ತಾರೆ. ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಹೀಗೆನ್ನುವುದು ಸರಿಯಲ್ಲ

ಬಹಳ ಹತ್ತಿರವಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಬಾಬಿಲೋನಿಯಾ ಪ್ರದೇಶವು ಸಪಾಟಾಗಿದೆ; ಅಲ್ಲಿಯ ಭೂಮಿ ಫಲವತ್ತಾಗಿದೆ. ಆದುದರಿಂದ, ಅತಿ ಪ್ರಾಚೀನ ಕಾಲದಿಂದಲೂ ಉತ್ತರದ ಕಡೆಯ ಬೆಟ್ಟದ ಕಲ್ಲುಭೂಮಿಯ ಪ್ರದೇಶದಿಂದ ಅಕೆಡಿಯನ್, ಅಸೀರಿಯನ್, ಅಮೋರಾಯಿಟ್ ಮೊದಲಾದ ಜನಗಳು ಒಬ್ಬರ ಹಿಂದೊಬ್ಬರಂತೆ ಬಂದು ಈ ಪ್ರದೇಶದ ಮೇಲೆ ದಾಳಿಮಾಡಿದರು; ಬಳಿಕ ಇಲ್ಲಿಯೇ ನೆಲಸಿದರು. ಪೂರ್ವದ ಕಡೆಯ ಇರಾಣದ ರಾಜನು ಈ ಭಾಗದ ಮೇಲೆ ಸಾಗಿ ಬಂದನು; ಪಶ್ಚಿಮದಿಂದ ಗ್ರೀಸದ ಅಲೆಕ್ಝಾಂಡರನು ಒಂದು ಕಾಲದಲ್ಲಿ ಈ ಪ್ರದೇಶವನ್ನು ಆಕ್ರಮಿಸಿದನು. ಹೀಗೆ ಮಾನವ ವಂಶಗಳ ಪರಾಟಿಕೆ ಇಲ್ಲಿ ಸತತವಾಗಿ ನಡೆದುದರಿಂದ ಇಲ್ಲಿಯ ಸಂಸ್ಕೃತಿ ಸಮ್ಮಿಶ್ರ ಸ್ವರೂಪವನ್ನು ತಳೆದಿದೆ.

**ಅತಿ ಪ್ರಾಚೀನ ಸುಮೇರೀ ಜೀವನ :—** ಸುಮೇರಿಯನ್ ಸಂಸ್ಕೃತಿಯ ಅತಿ ಪ್ರಾಚೀನಕಾಲವೆಂದರೆ ಕ್ರಿ. ಪೂ. ೫೦೦೦ದಿಂದ ೨೭೫೦. ಈ ಕಾಲದಲ್ಲಿ ಯುಫ್ರೆಟಿಸ್ ತೀರದ ನಿಪ್ಪೂರ ಅಥವಾ ಊರ ಎಂಬುದು ಅವರ ರಾಜಧಾನಿ ಪಟ್ಟಣವಾಗಿತ್ತು. ಆ ಜನರು ಕತ್ತೆಗಳ ಮೇಲೆ ಸರಕು ಹೇರಿಕೊಂಡು ತಿರುಗಿ ವ್ಯಾಪಾರ ಮಾಡುತ್ತಿದ್ದರು. ಸುಮೇರಿಯನ್ನರು ಚಂದ್ರನನ್ನು ಪೂಜಿಸುತ್ತಿದ್ದರು. ಚಂದ್ರನಿಗೆ ಅವರು ನನ್ನರ ಎನ್ನುತ್ತಿದ್ದರು. ಪ್ರಾರ್ಥನೆಗಾಗಿ ಎತ್ತರದ ದಿನ್ನೆಯಮೇಲೆ ದೇವಾಲಯ ಕಟ್ಟಿರುತ್ತಿದ್ದರು. ಅಲ್ಲಿಗೆ ಹೋಗುವುದಕ್ಕಾಗಿ ಏರಿಕೆಯ ಮುರುವುದಾರಿ ಮಾಡಿರುತ್ತಿದ್ದರು. ಇಂತಹ ದೇವಾಲಯಕ್ಕೆ 'ಝಿಗುರತ್' ಎಂದು ಎನ್ನುತ್ತಾರೆ ಈ ಪ್ರಾಚೀನ ಸುಮೇರಿಯನ್ನರ ಬಗ್ಗೆ ರಾಜಕೀಯ ಸಂಗತಿಗಳು ವಿಶೇಷವಾಗಿ ತಿಳಿದುಬಂದಿಲ್ಲ.

**ಹಮ್ಮುರಬಿ :** ಕ್ರಿ. ಪೂ. ೨೧೦೦ರ ಸುಮಾರಿಗೆ ಹಮ್ಮುರಬಿ ಎಂಬ ಅತ್ಯಂತ ಕರ್ತೃತ್ವಶಾಲಿಯಾದ ರಾಜನು ಈ ಪ್ರದೇಶದಲ್ಲಿ ಆಗಿಹೋದನು. ರಾಜ್ಯವು ರಾಜನ ಇಚ್ಛಾನುಸಾರವಾಗಿ ನಡೆಯದೆ ಶಾಸನವನ್ನು ಆಧರಿಸಿರಬೇಕೆಂದು ಅವನು ಮನಗಂಡಿದ್ದನು. ಈ ಶಾಸನವು ಅವನಿಗೆ ಸೂರ್ಯನಿಂದ ದೊರೆತಿದ್ದಿತೆಂದು ಆ ಕಾಲದ ಜನರ ನಂಬುಗೆ. ಆ ಕಾಯದೆಗನುಸಾರವಾಗಿ ರಾಜನು ಅಧಿಕಾರಿಗಳಿಗೆ ಆಗಾಗ ಕಳಿಸುತ್ತಿದ್ದ ಸೂಚನೆಗಳಲ್ಲಿ ಕೆಲವು ದೊರಕಿವೆ. ಯುಫ್ರೆಟಿಸ್ ಹೊಳೆಗೆ ಸೇತುವೆ ಕಟ್ಟಬೇಕು, ಕಾಲುವೆ ಕಡಿಸಿ ಯಾತದಿಂದ ಹೊಲಗಳಿಗೆ ನೀರು ಹಾಯಿಸಬೇಕು, ವಸ್ತುಗಳ ಬೆಲೆ ನಿಯಂತ್ರಿಸಬೇಕು, ಮದುವೆ ಮತ್ತು ಬಿಡುಗಡೆಗಳ ವಿಧಿಗಳ ಬಗ್ಗೆ ನಿರ್ಬಂಧವಿರಬೇಕು; ಸಾರಾಂಶ, ಹಗಲಿರುಳು ಪ್ರಜೆಗಳ ಹಿತಚಿಂತನೆ ಮಾಡಬೇಕೆಂದೆನಿಸಿ, ಅದರಂತೆ ನಡೆಯುತ್ತಿದ್ದ ಈ ಪ್ರಾಚೀನ ರಾಜನ ವಿಷಯದಲ್ಲಿ ಕೆಲ ಸಂಗತಿಗಳು ಉಪಲಬ್ಧವಾಗಿರುವುದರಿಂದ ಒಳ್ಳೇ ರಂಜಕವೆನಿಸುತ್ತಿದೆ. ವಿಲ್‌ಡ್ಯೂರಂಟ್ ಎನ್ನುತ್ತಾರೆ : "ಹಮ್ಮುರಬಿಯ ಕಾಯದೆ ಸಂಗ್ರಹವನ್ನು ಓದಿ, ಈಗಿನ ಸ್ಥಿತಿಯೊಡನೆ ತುಲನಾತ್ಮಕ ವಿಚಾರ ಮಾಡಿದರೆ, ಮಾನವ ಜಾತಿ ನಿಜವಾಗಿಯೂ ಪ್ರಗತಿ ಹೊಂದುತ್ತಿದೆಯೋ ಅಥವಾ ಕಾಯದೆಯ ಮೇಲೆ ಕಾಯದೆ ಪಾಸುಮಾಡುತ್ತ ಬರೀ ಅವುಗಳ ಸಂಖ್ಯೆಯನ್ನು ಹೆಚ್ಚಿಸುತ್ತಿದೆಯೋ ಎಂಬ ಸಂದೇಹ ನಮಗುಂಟಾಗುತ್ತದೆ."

ಹಮ್ಮುರಬಿ ಮಾಡಿದ ಕಾಯದೆಗಳಲ್ಲಿ ಕೆಲವನ್ನು ಮಾದರಿಗಾಗಿ ಆಯುಷ್ಯದ ಕೊನೆಯಲ್ಲಿ ಕೊಟ್ಟಿದೆ. ಎಲ್ಲ ಜನರೂ ಓದು ಬರೆ ಕಲಿಯಬೇಕೆಂಬುದು ಈತನ ಪ್ರಬಲ ಇಚ್ಛೆ




ಯಾಗಿತ್ತು. "ಓದು—ಬರೆ ಬಲ್ಲವನು ಸೂರ್ಯನಂತೆ ಪ್ರಕಾಶವಂತನಾಗುತ್ತಾನೆ." ಎಂಬುದು ಅವನು ಯಾವಾಗಲೂ ಹೇಳುವ ಪ್ರೀತಿಯ ವಚನವಾಗಿತ್ತು. ಇಂತಹ ಈ ರಾಜನ ಕಾಲಮಾನದಲ್ಲಿ ಬಾಬಿಲೋನಿಯದ ಸಂಸ್ಕೃತಿಯ ಅಸ್ತಿವಾರ ಹಾಕಲ್ಪಟ್ಟಿದೆ. ಬಾಬಿಲೋನಿಯದ ರಾಜಧಾನಿಯನ್ನೂ ಇವನೇ ಸ್ಥಾಪಿಸಿದ್ದು. "ನನ್ನ ಅಂತಃಕರಣದಲ್ಲಿ ಬಾಬಿಲೋನಿಯದ ಜನರಿಗೆ ಸ್ಥಾನ ಯಾವಾಗಲೂ ಇದೆ; ಯಾರ, ಯಾವ ದೂರುಗಳಿದ್ದರೂ ಅವನ್ನು ನಿವಾರಿಸಿಕೊಳ್ಳಲು ನನ್ನ ಕಡೆ ಯಾವಾಗ ಬೇಕಾದಾಗ ಬರಬಹುದು, ಹಿಂಜರಿಯಬಾರದು." ಎಂಬ ಹಮ್ಮುರಬಿಯ ಉದ್ಗಾರವು ಭಾರತದ ಸಮ್ರಾಟ್ ಅಶೋಕನನ್ನು ನೆನಪಿಗೆ ತರುತ್ತವೆ. ಸಮ್ರಾಟ್ ಅಶೋಕನಿಗಿಂತಲೂ ಒಂದೂವರೆ ಸಾವಿರ ವರುಷಗಳ ಹಿಂದೆಯೇ ಹಮ್ಮುರಬಿ ಬಾಬಿಲೋನಿಯದಲ್ಲಿ ಆಗಿಹೋದನೆಂಬುದನ್ನು ಲಕ್ಷ್ಯದಲ್ಲಿಡಬೇಕು.

**ನಿನ್ನೇವಾ ಸಂಸ್ಕೃತಿ :** ಹಮ್ಮುರಬಿಯ ಮೃತ್ಯುವಿನ ತರುವಾಯ ೧೫೦—೨೦೦ ವರ್ಷಗಳ ನಂತರ, ಟೈಗ್ರಿಸ್ ನದಿಯ ಉತ್ತರ ಕಡೆಯ ಪ್ರದೇಶದಿಂದ ಅಸೀರಿಯನ್ ಜನರು ಈ ಪ್ರದೇಶದ ಮೇಲೆ ಸಾಗಿಬಂದರು. ಇಲ್ಲಿ ಅನೇಕ ಶತಮಾನಗಳ ವರೆಗೆ ನೆಲೆಸಿದ್ದರು. ಕ್ರಿ. ಪೂ. ೮ನೆಯ ಶತಕದಲ್ಲಿ ಅವರು ನಿನ್ನೇವಾ ಎಂಬಲ್ಲಿ ತಮ್ಮ ರಾಜಧಾನಿಯನ್ನು ಸ್ಥಾಪಿಸಿದರು. ಈ ನಿನ್ನೆವಾ ಸಂಸ್ಕೃತಿಯನ್ನೇ ಅಸುರೀ ಸಂಸ್ಕೃತಿ ಎನ್ನುತ್ತಾರೆ. ಅಸೀರಿಯನ್ನರು ವಂಶದಿಂದ ಸೆಮಿಟಿಕರು. ಅವರು ಮಹಾಯೋದ್ಧರು.

ಕವಚಯುಕ್ತವಾದ ರಥದಲ್ಲಿ ಕುಳಿತು ಕಾದಾಡುವುದರಲ್ಲಿ ಅವರು ಬಲು ಬಲ್ಲಿದರೆಂದು ತಿಳಿದುಬರುತ್ತದೆ. ಪಶ್ಚಿಮಕ್ಕೆ ಭೂಮಧ್ಯ ಸಮುದ್ರದ ವರೆಗಿನ ನಾಡನ್ನು ಗೆದ್ದು ಇವರು ಸಾಮ್ರಾಜ್ಯವನ್ನು ಸ್ಥಾಪಿಸಿದರು. ಆದರೆ ಅದು ತಾಳಿ ಬಾಳುವುದಕ್ಕೆ ಆವಶ್ಯಕ ಘಟನೆಗಳನ್ನು ನಿರ್ಮಾಣಮಾಡುವುದಾಗಲಿಲ್ಲ. ಇವರಲ್ಲಿ ಕ್ರಿ. ಪೂ. ೬೬೮–೬೨೬ರಲ್ಲಿ ಅಸುರ–ಬನಿಪಾಲನೆಂಬ ದೊಡ್ಡ ಅರಸನಾದನು. (ಕೋನಲಿಪಿಯಲ್ಲಿ ಬರೆದ) ೨೨೦೦೦ ಇಟ್ಟಿಗೆಗಳ ದೊಡ್ಡ ಗ್ರಂಥಸಂಗ್ರಹವನ್ನು ಅವನು ತಯಾರಿಸಿದನು.



ರೆಕ್ಕೆಯ ಮಾನವ ಮುಖದ ಎತ್ತು

**ಅಸೀರೀ ಶಿಲ್ಪ :** ಅಸೀರೀ ಜನರು ತಮ್ಮ ರಾಜ್ಯವನ್ನು ರಕ್ಷಿಸುವುದಕ್ಕಾಗಿ ದೊಡ್ಡ ದಂಡು ಕಟ್ಟಿದರು. ಅವರು ಅಲ್ಲಲ್ಲಿಂದ ಹಿಡಿದು ತಂದಿದ್ದ ಜನಗಳನ್ನು ಅದರಲ್ಲಿ ಸೇರ್ಪಡೆ ಮಾಡಿದರು. ತಾವು ಗೆದ್ದ ಜನರೊಡನೆ ಸಹಾನುಭೂತಿಯಿಂದ ವರ್ತಿಸುತ್ತಿರಲಿಲ್ಲ. ಆದರಿಂದ ಅಸೀರಿಗಳ ಸಾಮ್ರಾಜ್ಯವು ಆ ಕಾಲದ ಮಾನದಿಂದ ದೊಡ್ಡದಿದ್ದರೂ ಅಲ್ಲಿಯ ಜನಗಳಲ್ಲಿ ಸಾಮ್ರಾಜ್ಯ ನಿಷ್ಠೆ ಉಂಟಾಗಲೇ ಇಲ್ಲ. ಅಸೀರೀ ಸಾಮ್ರಾಜ್ಯದ ಸ್ಥಿರತೆ ಕೇವಲ ಸೈನ್ಯಬಲವನ್ನೇ ಅವಲಂಬಿಸಿತ್ತು. ಅನುಕೂಲ ಸಂಧಿ ದೊರೆತೊಡನೆ, ಸಾಮ್ರಾಜ್ಯದೊಳಗಿನ ಅಸಂತುಷ್ಟ ಜನರು ಸಿಡಿದುಹೋಗತೊಡಗಿದರು. ಕ್ರಿ. ಪೂ. ದ ಏಳನೆಯ ಶತಕದಲ್ಲಿ ಅಸೀರೀ ಸಾಮ್ರಾಜ್ಯವು ಮುರಕಳಿಗೆ ಬಂದಿತು. ಇದು ನಿಜವಾದರೂ ಅಸೀರಿಗಳು ಕರ್ತೃತ್ವಶಾಲಿಗಳು; ಯುದ್ಧಕಲೆ ಮತ್ತು ಸಾಮ್ರಾಜ್ಯ ನಿರ್ಮಾಣ ಇವೆರಡು ವಿಷಯಗಳಲ್ಲಿ ಮಾನವೀಯ ಸಂಸ್ಕೃತಿಯಲ್ಲಿ ಅವರು ಮಹತ್ವದ ಕಾರ್ಯ ಸಾಧಿಸಿದ್ದಾರೆ. ಆಸೀರೀ ಜನರು ಸ್ಥಾಪತ್ಯ ಮತ್ತು ಶಿಲ್ಪಕಲೆಗಳಲ್ಲಿ ಸಾಧಿಸಿದ ಕಾರ್ಯವೂ ಮಹತ್ವದ್ದಾಗಿದೆ. ಭವ್ಯ ಅರ್ಧ ವರ್ತುಳಾಕಾರದ ಕಮಾನು ಕಟ್ಟಿ ಕಟ್ಟಡಕ್ಕೆ ಭದ್ರತೆ ತಂದುಕೊಡುವುದು ಅವರಿಗೆ ಗೊತ್ತಿತ್ತು. ನದಿಗಳಿಗೆ ಇಂತಹ ಸೇತುವೆಗಳನ್ನು ಅವರು ಕಟ್ಟಿದರು; ಅಲ್ಲಲ್ಲಿ ಹೊಳೆಗಳಿಗೆ ಒಡ್ಡು ಹಾಕಿ ನೀರು ಕಟ್ಟಿ, ಕಾಲುವೆ ತೋಡಿ ಭೂಮಿಯ ಫಲದ್ರೂಪತೆಯನ್ನು ಹೆಚ್ಚಿಸಿದರು. ಇಜಿಪ್ಶಿಯನ್ನ ಜನರಂತೆ ವಿಚಿತ್ರ ಆಕೃತಿಗಳನ್ನು ರಚಿಸುವ ಹುಚ್ಚು ಇವರಿಗೂ ಇತ್ತು. ಮನುಷ್ಯನ ಮೋರೆಯ ರೆಕ್ಕೆಯುಳ್ಳ ಬಸವ, ತೇಜಸ್ವಿ ಮುದ್ರೆಯ ಅಸುರದೇವ–ಇಂತಹ ದೇವ ದೇವತೆಗಳ ಚಿತ್ರಗಳನ್ನೂ ಕ್ರೂರಮುದ್ರೆಯ ಹುಲಿಗಳನ್ನೂ ಕಲ್ಲಿನಲ್ಲಿ ಕೊರೆಯುವುದರಲ್ಲಿಯೂ ಅವುಗಳ ಮೂಲಕ ತಮ್ಮ ವ್ಯಕ್ತಿಮತ್ವವನ್ನು ಪ್ರಕಟಿಸುವುದರಲ್ಲಿಯೂ ಅವರಿಗೆ ಆನಂದವಾಗುತ್ತಿತ್ತು.

ಕ್ರಿ. ಪೂ. ದ ಏಳನೆಯ ಶತಕದಲ್ಲಿ ಅಸೀರಿಗಳ ಸಾಮ್ರಾಜ್ಯವು ಅಳಿದು ಸುಮೇರಿಯನ್ ಜನರು ಮತ್ತೆ ಅಲ್ಲಿ ತಲೆಯೆತ್ತಿದರು.

**ಖಾಲ್ಡಿಯಾ :** ಬಾಬಿಲೋನಿಯಾದಲ್ಲಿ ಸುಮೇರಿಯನ್ ಜನರು ಪುನಃ ಸ್ಥಾಪಿಸಿದ ವರ್ಚಸ್ಸವು ಹೆಚ್ಚು ದಿನ ನಿಲ್ಲಲಿಲ್ಲ. ಈ ಕಾಲದಲ್ಲಿಯ ರಾಜ್ಯವು ಖಾಲ್ಡಿಯಾ ರಾಜ್ಯವೆಂದು ಹೆಸರಾಗಿದೆ. ಖಾಲ್ಡಿಯನ್ ಜನರು ಖಗೋಲಶಾಸ್ತ್ರವನ್ನು ಹೆಚ್ಚಾಗಿ ಅಭ್ಯಸಿಸಿದರು. ಗುರು, ಶುಕ್ರ, ಶನಿ, ಬೃಹಸ್ಪತಿಗಳ ಬಗ್ಗೆ ಅವರು ಅರಿತಿದ್ದರು. ಅದೇಕೆ, ಪೃಥ್ವಿಯ ಸೂರ್ಯಪ್ರದಕ್ಷಿಣೆಯ ಒಂದು ವರ್ಷವೆಂದರೆ ೩೬೫ ದಿನ ೬ ತಾಸು ೧೫ ಮಿನಿಟು ೧೪ ಸೆಕಂದು ಎಂಬ ಸೂಕ್ಷ್ಮ ಗಣಿತ ಕೂಡ ಅವರಿಗೆ ತಿಳಿದಿತ್ತು. ನಬೂರಿಮನ್ ಆ ಕಾಲದ ಪ್ರಸಿದ್ಧ ಜ್ಯೋತಿಷಿ ಆದರೆ ಆತನ ಹೆಸರಿನ ಹೊರತು ಹೆಚ್ಚಿನ ಸಂಗತಿ ಪರಿಚಿತ ಗ್ರಂಥಗಳಲ್ಲಿ ಸಿಕ್ಕುವುದಿಲ್ಲ.

**ಇಬ್ಬರು ಕರ್ತೃತ್ವಶಾಲಿ ರಾಜರು :** ನೆಬೂಚಾಡ್ನೇಝರ್ ಎಂಬ ಪರಾಕ್ರಮಿಯಾದ ರಾಜನೊಬ್ಬನು ಖಾಲ್ಡಿಯನ್ ಜನರಲ್ಲಿ ಆಗಿಹೋದನು. ಅವನು ಜೆರುಸಲೇಮ್ ಪಟ್ಟಣವನ್ನು ವಶಪಡಿಸಿಕೊಂಡು ಜ್ಯೂಗಳನ್ನು ಸೆರೆಹಿಡಿದು ಒಯ್ದನು. ಜ್ಯೂಜನ ದಾರಿಯಲ್ಲಿ ಆಕ್ರೋಶ ಮಾಡುತ್ತ ಸಾಗಿದ್ದರೂ. ಆ ಕಡೆ ಅವನು ಗಮನ ಕೊಡಲಿಲ್ಲ. ಕಾಳಗದಲ್ಲಿ ಗೆದ್ದುಬಂದ ಬಳಿಕ ತನ್ನ ಗೆಲವಿನ ಕುರುಹೆಂದು ಬಾಬಿಲೋನಿಯದಲ್ಲಿ ಭವ್ಯವಾದ 'ಇಶ್ತರದ್ವಾರ' ವನ್ನು ಕಟ್ಟಿಸಿದನು. ಇಶ್ತರ ಎಂದರೆ ಬಾಬಿಲೋನೀ ಜನರ ದೇವರು. ಇರಲಿ. ಇದಲ್ಲದೆ, ಬಾಬಿಲೋನಿಯದ ಬಳಿ ಒಂದು ದಿನ್ನೆಯ ಮೇಲೆ ದೊಡ್ಡ ಉದ್ಯಾನವನ್ನು ಅವನು ರಚಿಸಿದನು. ಈ ತೋಟದ ಕೆಳಗಿನ ಭಾಗವು ಪೊಳ್ಳಿದ್ದುದರಿಂದ ಅದಕ್ಕೆ 'ತೂಗುವ ತೋಟ' ಎಂದು ಹೆಸರಾಗಿದೆ. ಈ ತೂಗುವ ತೋಟವು ಪ್ರಾಚೀನ ಕಾಲದ 'ಒಂಬತು ಆಶ್ಚರ್ಯಗಳಲ್ಲಿ' ಒಂದಾಗಿದೆ. ನೆಬೂಚಾಡ್ನೇಝರನ ತರುವಾಯ ನೆಬಾನಿಡಸ್ ಎಂಬ ಸುಸಂಸ್ಕೃತ ರಾಜನು ಪಟ್ಟಕ್ಕೆ ಬಂದನು. ಅವನು ಅನೇಕ ಗ್ರಂಥಗಳನ್ನು ಸಂಗ್ರಹಿಸಿದನು. ಪಂಡಿತರೊಡನೆ ಅನೇಕ ವಿಷಯಗಳನ್ನು ಕುರಿತು ಅವನು ಚರ್ಚಿಸುತ್ತಿದ್ದನು. ಅವನ ಮಗ ಬೆಲ್ಸೆಝರನು ವಿಲಾಸಿಯೂ ದುರ್ವೃತ್ತನೂ ಆಗಿದ್ದನು. ಅವನು ಬಾಬಿಲೋನಿಯದ ಪುರೋಹಿತವರ್ಗವನ್ನು ಪೀಡಿಸಿದನು. ಆಗ ಪುರೋಹಿತರು ಇರಾಣದ ಸಾಯರಸ್ ರಾಜನೊಡನೆ ಒಳಸಂಚು ನಡೆಸಿ, ಬಾಬಿಲೋನಿಯದ ಮೇಲೆ ಸಾಗಿಬರಲು ಅವನನ್ನು ಪ್ರೇರಿಸಿದರು. ಇರಾಣದ ಸೈನಿಕರು ನಗರದಮೇಲೇರಿ ಬಂದು, ಅರಮನೆಯ ಸಮೀಪಕ್ಕೆ ಬಂದರು. ಅವರ ದೊಡ್ಡ ದೊಡ್ಡ ಭಲ್ಲೆಗಳ ನೆರಳು ಬೆಲ್ಸೇಝರನ ಮಹಲಿನ ಒಳಗೋಡೆಯ ಮೇಲೆ ಪಸರಿಸಿದವು. ಬೆಲ್ಸೇಝರ್ ವಿಲಾಸದಲ್ಲಿ ಮೈಮರೆತಿದ್ದನು. ಆ ನೆರಳುಗಳನ್ನು ಕಂಡು ಅವನು ಗಾಬರಿಯಾದನು. "ಯಾತರ ನೆರಳುಗಳಿವು ?" ಎಂದು ಅವನು ಪುರೋಹಿತನನ್ನು ಕೇಳಿದನು. ಪುರೋಹಿತನು ನೆರಳುಗಳ ಕಡೆ ನೋಡಿ ಗಂಭೀರ ಮುಖಮುದ್ರೆಯಿಂದ ಉತ್ತರ ಕೊಟ್ಟನು: "ದೊರೆಯೆ, ಈ ನೆರಳುಗಳೆಂದರೆ ಮತ್ತೇನೂ ಅಲ್ಲ; ಪರಮೇಶ್ವರನು ಒಂದು ಕೈಯಲ್ಲಿ ಹಿಡಿದ ತಕ್ಕಡಿ. ಈ ತಕ್ಕಡಿಯಲ್ಲಿ

ಇತರರಂತೆಯೆ ನಿನ್ನ ಒಳ್ಳೆಯ ಮತ್ತು ಕೆಟ್ಟ ಕೆಲಸಗಳನ್ನು ತೂಗಿದ್ದಾನೆ; ಇದರಲ್ಲಿ ನಿನ್ನ ಪರಡಿ ಕೆಳಗಿಳಿದಿದೆ; ಪರಮೇಶ್ವರನ ದೃಷ್ಟಿಯಲ್ಲಿ ನೀನು ನಿನ್ನ ಸ್ಥಾನಕ್ಕೆ ಅಯೋಗ್ಯ ನಾಗಿರುವೆ; ನೀನು ಬೇಗನೆ ಸ್ಥಾನಭ್ರಷ್ಟನಾಗುವೆ ಎಂಬುದರ ಚಿಹ್ನವಿದು."

ಕ್ರಿ. ಪೂ. ೫೩೯ರಲ್ಲಿ ಇರಾಣದ ಸಾಯರಸ್ ರಾಜನು ಖಾಲ್ಡಿಯದ ಮೇಲೆ ಮೇಲೆ ವರ್ಣಿಸಿದಂತೆ ದಾಳಿ ಮಾಡಿ, ಬೆಲ್ಶೆಝರನನ್ನು ಸೋಲಿಸಿ ಬಾಬಿಲೋನಿಯನ್ ಸಾಮ್ರಾಜ್ಯವನ್ನು ಕೊನೆಗೊಳಿಸಿದನು. ಆ ಬಳಿಕ ಇತ್ತೀಚಿಗೆ ಕಳೆದ ಸಾವಿರ ವರುಷ ಗಳ ಅವಧಿಯಲ್ಲಿ ಇಸ್ಲಾಮಿ ಸಂಸ್ಕೃತಿಯನ್ನು ಸ್ವೀಕರಿಸಿದ ಚಿಕ್ಕ ದೊಡ್ಡ ರಾಜ್ಯಗಳು ಅಲ್ಲಿ ಸ್ಥಾಪಿತವಾಗಿವೆ. ಮತ್ತು ಅವು ತಮ್ಮ ಸ್ವಾತಂತ್ರ್ಯವನ್ನು ಹೇಗೆ ಹೇಗೊ ಕಾಯ್ದುಕೊಂಡಿವೆ.

## ಪ್ರಶ್ನೆಗಳು

೧ ಟಿಪ್ಪಣಿ ಬರೆಯಿರಿ: (೧) ನಿನ್ನೇವಾ ಸಂಸ್ಕೃತಿ; (೨) ನೆಬೂಚಾಡ್ನೇಝರ್; (೩) ಖಾಲ್ಡಿಯಾ.

೨ ಬಾಬಿಲೋನೀ ಸಂಸ್ಕೃತಿಯ ಪರಿಚಯ ಮಾಡಿಕೊಡಿರಿ.

# ೩. ಪ್ರಚಂಡ ಸ್ತೂಪಗಳನ್ನು ಕಟ್ಟಿದ ಇಜಿಪ್ತದ ಜನರು

**ಇಜಿಪ್ತದ ಸಂಸ್ಕೃತಿ :*** ಆರ್ಯರು ಹಿಂದುಸ್ತಾನದಲ್ಲಿ ಬಂದು ನೆಲೆಸುವು ದಕ್ಕಿಂತ ಒಂದೂವರೆ ಸಾವಿರ ವರ್ಷಗಳ ಪೂರ್ವದಲ್ಲಿ ಹೆಮಿಟಿಕ್ ವಂಶದ ಜನರು ಇಜಿಪ್ತದ ನೈಲ ನದಿಯ ತೀರದಲ್ಲಿ ನೆಲೆನಿಂತರು. ಮೆಂಫಿಸ ಎಂಬುದು ಅವರ ರಾಜಧಾನಿ. ಅವರ ರಾಜನಿಗೆ 'ಫಾರೋಹ' ಎನ್ನುತ್ತಿದ್ದರು. ಅವರು ಮೃತರ ಶರೀರ ಗಳನ್ನು ಜಾಗ್ರತೆಯಿಂದ ಕಾಯುತ್ತಿದ್ದರು. ಹೆಣದ ಮೇಲೆ ಅರಿವೆಯನ್ನು ಸುತ್ತಿ, ಮೇಲೆ ವಿಶೇಷ ದ್ರವ್ಯಗಳನ್ನು ಪಸರಿಸುತ್ತಿದ್ದರು.§ ಇದರಿಂದ ಹೆಣಗಳು ತಾಳುತ್ತಿದ್ದವು. ಸಾಮಾನ್ಯರು ಶವದ ರಕ್ಷಣೆ ಮಾತ್ರ ಮಾಡುತ್ತಿದ್ದರು, ರಾಜರು ಅಷ್ಟರಿಂದಲೇ ತೃಪ್ತ

* ಪ್ರಾಚೀನ ಇಜಿಪ್ತದ ಈ ಸಂಸ್ಕೃತಿಗೆ ಮಿಸ್ರ ಸಂಸ್ಕೃತಿ ಎಂದೆನ್ನುತ್ತಾರೆ.

§ ಈ ಇಂತಹ ಸಂರಕ್ಷಿತ ಶವಕ್ಕೆ ಇಂಗ್ಲೀಷಿನಲ್ಲಿ 'ಮಮಿ' ಎನ್ನುತ್ತಾರೆ. ಹೈದರಾಬಾದಿನ ಪುರಾಣ ವಸ್ತುಸಂಗ್ರಹಾಲಯದಲ್ಲಿಯೂ ಬೇರೆಡೆಯಲ್ಲಿಯೂ 'ಮಮಿ'ಗಳನ್ನು ನೋಡ ಬಹುದು.

ರಾಗುತ್ತಿರಲಿಲ್ಲ. ಅವರು ತ್ರಿಶಂಕು ಆಕಾರದ ಪ್ರಚಂಡ ಕಟ್ಟಡ ಕಟ್ಟಿ ಅದರೊಳಗೆ ಶವವನ್ನು ಸುರಕ್ಷಿತಗೊಳಿಸುತ್ತಿದ್ದರು. ಅದರ ಹೊರಗೋಡೆಯ ಮೇಲೆ ಅನೇಕ ಚಿತ್ರಗಳನ್ನು ಕೊರೆಸುತ್ತಿದ್ದರು. ಒಂದು ಚಿತ್ರದಲ್ಲಿ ಒಬ್ಬ ದೇವದೂತನು ತಕ್ಕಡಿಹಿಡಿದು ಒಂದು ಪರಡಿಯಲ್ಲಿ ಹಕ್ಕಿಯ ಗರಿ ಇಟ್ಟು ಮಾನವನ ಪಾಪ ಪುಣ್ಯಗಳನ್ನು ತೂಗುತ್ತಿರುವುದನ್ನು ತೋರಿಸಲಾಗಿದೆ. ಗರಿ ಇದ್ದ ಪರಡಿ ಮೇಲಾಗಿ ಪಾಪಪುಣ್ಯ ಸಂಚಯದ ಪರಡಿ ಕೆಳಗಾದರೆ, ಪೂರ್ಣ ಪಾಪಕ್ಷಯವಾಗಿಲ್ಲ ವೆಂದು ತಿಳಿಯಬೇಕು. ಮಾನವನ ಜೀವನ ಸತ್ತಮೇಲೂ ಸಾಗಿರುತ್ತದೆ; ಅವನಿಗೆ ಅನ್ನ, ನೀರು, ಔಷಧ, ಧಾರ್ಮಿಕ ಪುಸ್ತಕಗಳು. ಇಷ್ಟೇ ಏಕೆ ಮನೋರಂಜಕ ಕಥೆಗಳ ಪುಸ್ತಕಗಳು ಕೂಡ ಬೇಕಾಗುತ್ತವೆಂದು ಪ್ರಾಚೀನ ಇಜಿಪ್ಸಿಯನ್ನರ ನಂಬುಗೆಯಿತ್ತು.



ಇಜಿಪ್ತದಲ್ಲಿಯ ಒಂದು ಹಳೆಯ ಗೋರಿಯಲ್ಲಿಯ ಮೃತದೇಹ. ಸುತ್ತಲೂ ಸತ್ತವನಿಗಾಗಿ ಖಾದ್ಯ ಪೇಯಗಳಿಂದ ತುಂಬಿದ ಪಾತ್ರೆಗಳು.

**ಮೂರ್ತಿಮಂತ ಪ್ರಚಂಡತೆ :** ಈ ಪಿರಾಮಿಡ್ಡುಗಳು ಎಷ್ಟು ಪ್ರಚಂಡವಾಗಿದ್ದವೆಂಬುದರ ಕಲ್ಪನೆ ಈಗ ಸಹಸಾ ಬರಲಾರದು. ಇವುಗಳಲ್ಲೊಂದು ೪೮೧ ಅಡಿ ಎತ್ತರವಿದೆ, ತಳದ ಒಂದು ಬದಿ ೭೫೫ ಅಡಿ ಉದ್ದವಾಗಿದೆ. ಇಂದಿನ ಮೂರಂತಸ್ತಿನ ಮನೆಗಳು ಹೆಚ್ಚೆಂದರೆ ೫೦ ಅಡಿ ಎತ್ತರವಿರುತ್ತವೆ. ಈ ಮಾನದಿಂದ ೪೮೧ ಅಡಿಗಳೆಂದರೆ ಎಷ್ಟು ಎತ್ತರವೆಂಬುದನ್ನು ಕೆಲಮಟ್ಟಿಗೆ ಊಹಿಸಿಕೊಳ್ಳಬಹುದು. ಈ ಸ್ತೂಪವು ೧೩ ಎಕರೆ ಭೂಮಿಯನ್ನು ವ್ಯಾಪಿಸಿದೆ. ಕಟ್ಟುವುದಕ್ಕೆ ೨॥ ಟನ್ನು ಭಾರದ ೨೩ ಲಕ್ಷ ಕಲ್ಲುಗಳು ಹಿಡಿದವು. ಒಂದು ಲಕ್ಷ ಜನರು ೨೦ ವರ್ಷ ದುಡಿದರು ಎಂದು ಹೇಳುತ್ತಾರೆ. ಇಂತಹ ಸ್ತೂಪವಿದೊಂದೇ ಅಲ್ಲ. ಇಜಿಪ್ತದ ಸಂಸ್ಕೃತಿಯೆಂದರೆ ಮೂರ್ತಿಮಂತ ಪ್ರಚಂಡತೆಯೇ ಸರಿ. ಮತ್ತು ಅದಕ್ಕೆ ಪ್ರಮಾಣಬದ್ಧತೆಯ ಜೊತೆಯೂ ಇತ್ತು. ಅಲ್ಲಿಯ ಕಟ್ಟಡಗಳ ಚೌರಸವನ್ನಳೆದರೆ ಎದರುಬದುರಿನ ಎರಡು ಬದಿಗಳು ಇಂಚಿಗಿಂಚು ಸರಿಯಾಗಿರುತ್ತವೆ. ಇಷ್ಟು ಶಾಸ್ತ್ರಶುದ್ಧವಾದ ಕೆಲಸವನ್ನು ಆಗ ಹೇಗೆ ಮಾಡುತ್ತಿದ್ದರೋ-ಅದೊಂದು ಗೂಢ ಆಶ್ಚರ್ಯವೇ. ಸ್ತೂಪಗಳ ಹೊರತು ನರಮುಖೀ ಸಿಂಹದ ಶಿಲಾಮೂರ್ತಿಯೊಂದು ಅಲ್ಲಿದೆ. ಅದರ ಉದ್ದ ೧೯೦ ಅಡಿ, ಎತ್ತರ ೭೦ ಅಡಿಯಿದೆ. ತಲೆಯಿಂದ ಮೂಗಿನ ತುದಿಯವರೆಗಿನ ಉದ್ದ ೩೩ ಅಡಿ ಹಾಗೂ ಅಗಲ ೧೩ ಅಡಿ ಇದೆ. ಮೂರ್ತಿ ಇಷ್ಟೊಂದು ವಿಸ್ತಾರವಾಗಿದ್ದರೂ ಮುಖದಲ್ಲಿ ಶೌರ್ಯದ ತೇಜವನ್ನು ತರುವುದು ಆಗಿನ ಕಾಲದ ಕಲಾಕಾರರಿಗೆ ಸಾಧಿಸಿದೆ. ಮೆಂಫಿಸದ ದಕ್ಷಿಣಕ್ಕೆ ಸುಮಾರು ೭೫೦ ಮೈಲಂತರದಲ್ಲಿದ್ದ ಕರ್ಣಕ ಎಂಬ

ಲ್ಲಿಯ ದೇವಾಲಯವೂ ಹೀಗೆಯೇ ಪ್ರಚಂಡವಾಗಿದೆ. ಅದರಲ್ಲಿಯ ಸಭಾಗೃಹವು ೩೩೮ ಅಡಿ ಉದ್ದವಾಗಿಯೂ ೧೭೮ ಅಡಿ ಅಗಲವಾಗಿಯೂ ಇದೆ. ಪ್ರಾಚೀನ ಮಾನವನ ಈ ಪ್ರಚಂಡ ಕಾರ್ಯವು ಎಷ್ಟೋ ಶತಕಗಳ ವರೆಗೆ ಅಜ್ಞಾತವಾಗಿಯೇ ಇತ್ತು. ಕ್ರಿ. ವ. ೧೭೯೮ರಲ್ಲಿ ನೆಪೋಲಿಯನ್ನನು ಇಜಿಪ್ತದ ಮೇಲೆ ದಾಳಿ ಹೊರಟಾಗ



ಇಜಿಪ್ತದಲ್ಲಿಯ ಸ್ತೂಪ ಮತ್ತು ನರಮುಖೀ ಸಿಂಹ.

ಅಲ್ಲಿಯ ಪ್ರಚಂಡ ಸ್ತೂಪವನ್ನು ನೋಡಿ ಬೆರಗಾದನು. ಸೂರ್ಯಾಸ್ತದ ಹಿನ್ನೆಲೆಯ ಮೇಲೆ ಆ ಸ್ತೂಪಗಳನ್ನು ದಿಟ್ಟಿಸುತ್ತ ಅವನು "ಈ ಸ್ತೂಪಗಳಂತೂ ಮನೋಹರವೇ; ಆದರೆ ಅವುಗಳ ಹಿಂದೆ ಕ್ಷಣಕ್ಷಣಕ್ಕೆ ಬಣ್ಣ ಬದಲಿಸುವ ಸೂರ್ಯಾಸ್ತದ ದೃಶ್ಯವು ಅದಕ್ಕಿಂತ ಮನೋಹರ ಮತ್ತು ಚಿಂತನೀಯ!" ಎಂದನಂತೆ. ಈ ನೆಪೋಲಿಯನ್ನನ ಒಬ್ಬ ಸೈನಿಕನಿಗೆ ನೈಲ್ ನದಿಯ ಮುಖದ ಬಳಿ ಶಿಲಾಲೇಖವೊಂದು ಕಂಡಿತು. ಅದಕ್ಕೆ ರಾಸೇಟದ ಕಲ್ಲು ಎನ್ನುತ್ತಾರೆ. ಆ ಲೇಖ ಚಿತ್ರಲಿಪಿಯಲ್ಲಿತ್ತು. ಎಷ್ಟೋ ಕಾಲ ಅದನ್ನು ಯಾರಿಂದಲೂ ಓದಲಾಗಲಿಲ್ಲ. ಕ್ರಿ. ವ. ೧೮೨೨ರಲ್ಲಿ ಒಬ್ಬ ಫ್ರೆಂಚ ಸಂಶೋಧಕನು ಅದರ ಗೂಢವನ್ನು ಒಡೆದು ತೋರಿದನು. ಆಗಿನಿಂದ ಚಿತ್ರಲಿಪಿಯಲ್ಲಿದ್ದ ಪ್ರಾಚೀನ ಮಿಸ್ರದೇಶದ ಒಂದು ಅಜ್ಞಾತರಂಗವು ಬಯಲಿಗೆ ಬಂದಿತು.

**ಇತಿಹಾಸದ ಸಾಧನಗಳು :** ಇಷ್ಟು ಪ್ರಾಚೀನಕಾಲದಲ್ಲಿ ಇಂದಿನಂತೆ ಇತಿಹಾಸದ ಸಾಧನಗಳು ಸಿಕ್ಕುವುದು ಶಕ್ಯವಿರಲಿಲ್ಲ. ಮೇಲೆ ಹೇಳಿದ ಶಿಲಾಲೇಖದ ಹೊರತು, ಆ ಪ್ರಚಂಡ ಸ್ತೂಪಗಳು ಅವುಗಳ ಒಳಗಿರುವ ಗೋರಿಗಳಲ್ಲಿ ದೊರಕಿದ ವಸ್ತುಗಳು, ಅಲ್ಲಿ ತೆಗೆಯಲಾದ ಬಗೆಬಗೆಯ ಆಕೃತಿಗಳು—ಇವುಗಳಿಂದ ಅಲ್ಲಿಯ ಆಗಿನ ಜನರ ಜೀವನದ ಪರಿಚಯ ನಮಗಾಗುತ್ತದೆ. ಮೈಮೇಲೆ ಅಲಂಕಾರಗಳನ್ನಿಟ್ಟುಕೊಂಡು ಒಳ್ಳೇ ಬೆಡಗಿನಿಂದ ಕುಣಿಯುವ ಹೆಣ್ಮಕ್ಕಳು, ಈಲಾದ ಪಶುಗಳ ಕರುಗಳೊಡನೆ ಆನಂದದಿಂದ ಆಡುವ ಮಕ್ಕಳು, ದೋಣಿಯಲ್ಲಿ ಪ್ರವಾಸ ಮಾಡುತ್ತಿರುವ ಜನರು, ಬಟ್ಟೆ ನೇಯುವ ನೇಕಾರ, ಒಡವೆ ಮಾಡುವ ಅಕ್ಕಸಾಲಿ, ಭಟ್ಟಿಯಲ್ಲಿ ಅನೇಕ

ಪದಾರ್ಥಗಳನ್ನು ಕರಗಿಸಿ ಕಾಜಿನ ವಸ್ತುಗಳನ್ನು ತಯಾರಿಸುವ ಕಸಬುಗಾರರು— ಇವರೆಲ್ಲರ ಚಿತ್ರಗಳನ್ನು ನೋಡಿದರೆ ಸುಮಾರು ಮೂರು ಸಾವಿರ ವರುಷಗಳ ಹಿಂದಿನ ಇಜಿಪ್ತದ ಜೀವನದ ಕಲ್ಪನೆ ಉಂಟಾಗುತ್ತದೆ. ಆ ಕಾಲದ ಜನಕ್ಕೆ ಕಾಗದ ಗೊತ್ತಿರಲಿಲ್ಲ. ಎಳೆ ಹುಲ್ಲಿನಿಂದ ನೆಯ್ದ ಉದ್ದೋಉದ್ದ ಪಟ್ಟೆಯಿರುತ್ತಿತ್ತು. ಮೊನೆಯಾದ ಕಡ್ಡಿಯಿಂದ ಅದರಮೇಲೆ ಚಿತ್ರಲಿಪಿಯಲ್ಲಿ ಆ ಕಾಲದವರು ಬರೆಯುತ್ತಿದ್ದರು. ೧೩೫ ಫೂಟು ಉದ್ದವಾದ ಸುಮಾರು ೧೭ ಇಂಚು ಅಗಲಾದ ಇಂತಹ ಎಳೆಹುಲ್ಲ ಚಾಪೆಯೊಂದು ದೊರಕಿದೆ. ಈ ಜಾತಿಯ ಹುಲ್ಲಿಗೆ ಇಂಗ್ಲಿಷಿನಲ್ಲಿ 'ಪಪಿರಸ್' ಎನ್ನುತ್ತಾರೆ. ಇದರಿಂದಲೇ ಇಂಗ್ಲಿಷಿನಲ್ಲಿಯ ಪೇಪರ್ (ಅಂದರೆ ಕಾಗದ) ಎಂಬ ಶಬ್ದವು ಹುಟ್ಟಿದೆ ಜೋಯಿಸರು ಜನ್ಮಪತ್ರಿಕೆಯನ್ನು ಸುರುಳಿ ಸುತ್ತುತ್ತಿರುವಂತೆ ಈ ಪಪಿರಸ್ ಚಾಪೆಯನ್ನು ಅವರು ಸುತ್ತಿಡುತ್ತಿದ್ದರು. ಕಲ್ಬರೆಹ, ಸ್ತೂಪ, ಗೋರಿ ಮತ್ತು ಪಾಪಿರಸ್ ಈ ನಾಲ್ಕು ಐತಿಹಾಸಿಕ ಸಾಧನಗಳ ಹೊರತು, ನರಮುಖದ ಸಿಂಹ, ಪ್ರಚಂಡ ಮಂದಿರಗಳಿಂದಲೂ ಪ್ರಾಚೀನ ಇಜಿಪ್ತದ ವಿಷಯ ತಿಳಿದು ಬರುತ್ತದೆ. ತುತನಖಾಮೆನ್ ರಾಜನು ಕುಳಿತುಕೊಳ್ಳುತ್ತಿದ್ದ ಪ್ರಚಂಡವಾದ ಸುಶೋಭಿತವಾದ ಕುರ್ಚಿಯೊಂದು ಉಪಲಬ್ಧವಾಗಿದೆ. ಉತ್ಖನನ ಮತ್ತು ಸಂಶೋಧನ ಕಾರ್ಯವು ನಡೆನಡೆದಂತೆ ಇಜಿಪ್ತದ ಐತಿಹಾಸಿಕ ಸಾಧನಗಳು ಇನ್ನೂ ಸಿಕ್ಕ ಬಹುದಾಗಿದೆ.*



ತುತನಖಾಮೆನ್ ರಾಜನ ಕುರ್ಚಿ

**ಪ್ರಾಚೀನ ಇಜಿಪ್ತದ ಇತಿಹಾಸ :** ದೊರೆತಿರುವ ಸಾಧನಗಳಿಂದ ಇಜಿಪ್ತದ ಇತಿಹಾಸದ ಸ್ಥೂಲಸ್ವರೂಪವನ್ನು ಕಂಡುಕೊಳ್ಳಬಹುದು. ಕ್ರಿ. ಪೂ. ದ ಮೂರು ಸಾವಿರ ವರುಷಗಳೆಂದರೆ ಇಜಿಪ್ತದ ಫರೋಹರ ಕಾಲವು. ತರುವಾಯದ ಕಾಲದಲ್ಲಿ ಫರೋಹರ ದೌರ್ಬಲ್ಯದಿಂದ ಸರದಾರರ ಕೈಮೇಲಾಯಿತು. ಅವರು ಇಜಿಪ್ತದ ರಾಜಧಾನಿಯನ್ನು ಮೆಂಫಿಸದಿಂದ ಮೇಲಕ್ಕೆ, ಸುಮಾರು ಮುನ್ನೂರು ಮೈಲು ದೂರಕ್ಕೆ ಥೀಬ್ಜ್ ಎಂಬಲ್ಲಿಗೆ ಸ್ಥಳಾಂತರಿಸಿದರು. ಜನಗಣತಿಯ ಪ್ರಯತ್ನ ಮಾಡಿದರು ನೈಲ್ ನದಿಯ ಪೂರ್ವದ ಮಗ್ಗಲಿಗೆ

* ಕ್ರಿ. ಶ. ೧೯೫೪ರ ಜೂನ್ ತಿಂಗಳಲ್ಲಿ ಇಜಿಪ್ತದ ಉತ್ಖನನದಲ್ಲಿ ಒಂದು ದೋಣಿ ಹೊರಟಿದೆ ಎಂದು ಪ್ರಕಟವಾಗಿತ್ತು.

ಕಾಲುವೆಯನ್ನು ತೋಡಿ, ಕೆಂಪು ಸಮುದ್ರಕ್ಕೆ ಅದನ್ನು ಕೂಡಿಸಿದರು. ಇದರಿಂದ, ಸುವೇಜಕಾಲುವೆ ಇಲ್ಲದಿದ್ದರೂ ಭೂಮಧ್ಯ ಸಮುದ್ರದಿಂದ ಕೆಂಪುಸಮುದ್ರಕ್ಕೆ ದೋಣಿಗಳು ಸರಳವಾಗಿ ಹೋಗುವಂತಾಗಿತ್ತು. ನೈಲ್ ನದಿಗೆ ಮಳೆಗಾಲದಲ್ಲಿ ಮೇಲಿಂದ ಮೇಲೆ ನೆರೆ ಬರುತ್ತಿತ್ತು; ನೀರು ಹೊಲಗಳಲ್ಲಿ ಹೊಕ್ಕು ಅವುಗಳ ಬದುವುಗಳು ನಾಶವಾಗುತ್ತಿದ್ದವು; ಅದಕ್ಕಾಗಿ ಹೊಲಗಳ ನಕ್ಷೆಗಳನ್ನು ತೆಗೆಯಬೇಕೆಂದು ಕೆಲವರಿಗೆ ಹೊಳೆಯಿತು; ಮತ್ತು ಈ ಪ್ರಯತ್ನದಲ್ಲಿ ಭೂಮಿತಿಯು ಉದಯವಾಯಿತು.

**ಇಜಿಪ್ತದ ನೆಪೋಲಿಯನ್ :** ಸರದಾರರು ಮೇಲಿಂದ ಮೇಲೆ ಜಗಳಾಡುತ್ತಿದ್ದರು. ಪರರಾಜರು ಇದರ ಲಾಭ ಪಡೆದರು. ಈ ಜನರು ಕುರಿಕಾಯುವ ಕುರುಬರು. ಬಹುಶಃ ಹೊಲ ನಾಗುವಳಿ ಅವರಿಗೆ ಗೊತ್ತಿರಲಿಲ್ಲ. ಆದರೆ ಕುದುರೆಯ ಮೇಲೂ ರಥದಲ್ಲಿಯೂ ಕುಳಿತು ಕಾದುವ ಕಲೆಯನ್ನು ಅರಿತವರಾದುದರಿಂದ ಸರದಾರರನ್ನು ಗೆಲ್ಲಲು ಆ ಜನರು ಸಮರ್ಥರಾದರು. ಕ್ರಿ. ಪೂ. ೧೬ ನೆಯ ಶತಕದಲ್ಲಿ ಈಜಿಪ್ಸಿಯನ್ನರು ಈ ಕುರುಬಜಾತಿಯ ವರ್ಚಸ್ಸನ್ನು ಕಿತ್ತೊಗೆದು ಇಡೀ ಇಜಿಪ್ತದಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಈ ಸಾಮ್ರಾಜ್ಯ ಕಾಲದಲ್ಲಿ ಅನೇಕ ರಾಜರೂ ರಾಣಿಯರೂ ಆಗಿಹೋದರು. ಹಟ್ಸೇಪಸೂಟ್ ಎಂಬ ಈಜಿಪ್ಸಿಯನ್ ರಾಣಿ ತನ್ನ ಅಣ್ಣನ ರಾಜ್ಯವನ್ನು—ಅಹಮದನಗರದ ಚಾಂದಬೀಬಿಯಂತೆ—ಕಾಯುವುದಕ್ಕಾಗಿ ಅತ್ಯಂತ ಧೈರ್ಯದಿಂದ ಮುಂಬರಿದಳು. ಪ್ರಸಿದ್ಧವಾದ ಕರ್ಣಾಕದ ಮಂದಿರವನ್ನು ಕಟ್ಟಿಸಿದವಳು ಇವಳೇ. ಆ ಮಂದಿರದ ಒಂದೊಂದು ಕಂಬವು, ಅದರ ಮೇಲಿನ ಪೃಷ್ಠ ಭಾಗದ ಮೇಲೆ ನೂರು ಜನರು ಸಹಜವಾಗಿ ಕುಳ್ಳಿರಬಹುದಾದಷ್ಟು ಪ್ರಚಂಡವಾಗಿತ್ತು ! ಹಟ್ಸೇಪಸೂಟಳ ಅನಂತರ ಮೂರನೆಯ ಥಥಮೋಸ್ ಅಥವಾ ಥಾಥಮಸ್ ಎಂಬ ರಾಜನಾಗಿಹೋದನು. ಅವನು ಈಜಿಪ್ತ ರಾಜ್ಯವನ್ನು ಸಾಮ್ರಾಜ್ಯವನ್ನಾಗಿ ಮಾಡಿದನು. ಈಜಿಪ್ತದ ಗಡಿಯನ್ನು ಫಿನಿಸಿಯದ ವರೆಗೂ ಮುಂದೊತ್ತಿದ್ದನು. ಈ ಪರಾಕ್ರಮದಿಂದ ಥಥಮೋಸನನ್ನು ‘ ಈಜಿಪ್ತದ ನೆಪೋಲಿಯನ್ ’ ಎಂದು ಸಂಬೋಧಿಸಲಾಗುತ್ತದೆ.

**ರಾಜಾ ಅಮೆನ್ ಹಾಟೆಪ್ :** ಆದರೆ ಈಜಿಪ್ತದ ಎಲ್ಲರಿಗಿಂತ ಮಹತ್ವದ ದೊರೆಯೆಂದರೆ ನಾಲ್ಕನೆಯ ಅಮೆನ್ ಹಾಟೆಪ್ಪನೇ. ಈತನನ್ನು ಈಜಿಪ್ತದ ಅಕಬರನೆಂದು ಕರೆಯಬಹುದು. ಏಕೆಂದರೆ, ಈತನು ಪರಾಕ್ರಮಕ್ಕಿಂತ ಧರ್ಮಚಿಂತನವನ್ನೇ ಮೆಚ್ಚಿದ್ದನು. ಅನೇಕ ದೇವತೆಗಳ ಪೂಜಕರಾದ ಈಜಿಪ್ಸಿಯನ್ ಜನಕ್ಕೆ ಅವನು ಧೈರ್ಯದಿಂದ, “ ಜಗತ್ತಿನಲ್ಲಿದೇವರೊಬ್ಬನೇಇದ್ದಾನೆ;ಅವನನ್ನು ಮೆಚ್ಚಿಸುವುದಿದ್ದರೆ, ಪೂಜೆ-ಪುನಸ್ಕಾರದಸಾಮಗ್ರಿಗಳನ್ನು ಶೇಖರಿಸುತ್ತಕೂಡುವ ಬದಲು ಅವನ ಪ್ರಾರ್ಥನೆ ಮಾಡಿದರೆ ಸಾಕು, ಅವನು ಪ್ರಸನ್ನನಾಗುತ್ತಾನೆ ” ಎಂದು ಬೋಧಿಸಿದನು. ‘ ಬೆಳಗಿನಲ್ಲಿ ಚಿಲಿಪಿಲಿ ಗುಟ್ಟುವ ಹಕ್ಕಿಗಳು ನಿಜವಾಗಿ ಸೂರ್ಯನ ರೂಪದಲ್ಲಿ ಪ್ರಕಟವಾಗುವ ಪರಮೇಶ್ವರನ ಪ್ರಾರ್ಥನೆಯನ್ನೇ ಮಾಡುತ್ತವೆ’ ಎಂದು ಅವನೆನ್ನುತ್ತಿದ್ದನು. ಆಗಿನ ಈಜಿಪ್ಸಿಯನ್ ಜನರಿಂದ ಅಮೆನ್ ಹಾಟೆಪ್ಪನಿಗೆ ತೊಂದರೆಯಾಗತೊಡಗಿತು.

ಆಗ ಅವನು ತನ್ನ ರಾಜಧಾನಿಯನ್ನು ಥೀಬ್ಜದಿಂದ ಉತ್ತರಕ್ಕೆ ಸುಮಾರು ಇನ್ನೂರು ಮೈಲು ದೂರವಿರುವ ಟೆಲ್‌ಅಮರನಾ ಎಂಬಲ್ಲಿಗೆ ಒಯ್ದನು. ಆಮೆನ್ ಹಾಟೆಪ್ ಬೇಗನೆ ಮರಣ ಹೊಂದಿದನು. ಆವನ ಪಟ್ಟಕ್ಕೆ ಅವನ ಅಳಿಯ ತುತನ್‌ಖಾಮೆನ್ ಎಂಬವನು ಬಂದನು. ಅವನು ಮಾವನ ಪರಂಪರೆಯನ್ನು ಕಿತ್ತುಹಾಕಿದನು. ಮತ್ತೆ ಥೀಬ್ಜನ್ನೇ ರಾಜಧಾನಿಯಾಗಿ ಮಾಡಿಕೊಂಡನು. ಇಜಿಪ್ತದ ಜನರು ಮತ್ತೆ ಮೊದಲಿನಂತೆ ಅನೇಕ ದೇವತೆಗಳನ್ನು ಆರಾಧಿಸತೊಡಗಿದರು ತುತನ್‌ಖಾಮೆನ್ನನ ತರುವಾಯ ರಾಮೋಸಿಸ್, ರಾಮೋಸಿಸನ ತರುವಾಯ ಒಬ್ಬರ ಹಿಂದೊಬ್ಬರಂತೆ ಅನೇಕ ರಾಜರು ಆಗಿಹೋದರು. ಆದರೆ ಕ್ರಿ. ಪೂ. ದ ಏಳನೆಯ ಶತಕದಿಂದ ಮಿಸರ ಜನರ ಅವನತಿ ಆರಂಭವಾಯಿತು. ಅಸೀರೀ, ಇರಾಣಿ, ರೋಮನ್, ಅರಬ, ತುರ್ಕ ಮತ್ತು ಕೊನೆಯಲ್ಲಿ ಆಂಗ್ಲರು ಹೀಗೆ ಕ್ರಮವಾಗಿ ಅನೇಕರ ಆಡಳಿತಕ್ಕೆ ಅವರು ಒಳಗಾದರು. ಪ್ರಾಚೀನ ಮಿಸರ ಸಂಸ್ಕೃತಿ ನಷ್ಟವಾಯಿತು. ಇಂದು ಅಲ್ಲಿ ಇಸ್ಲಾಮಿ ಸಂಸ್ಕೃತಿ ಪ್ರಭಾವಶಾಲಿಯಾಗಿದೆ. ಆದರೆ ಬ್ರಿಟಿಶರ ವರ್ಚಸ್ಸು ಮಾತ್ರ ಅಲ್ಲಿ ಉಳಿದಿರುವುದಿಲ್ಲ.

**ಈಜಿಪ್ತದ ಸಂಸ್ಕೃತಿಯ ಸ್ವರೂಪ** : ಈಜಿಪ್ತದ ಉತ್ತರದಲ್ಲಿ, ಪೂರ್ವದಲ್ಲಿ ಸಮುದ್ರ. ಪಶ್ಚಿಮದಲ್ಲಿ ಉಸುಕಿನ ಮರುಭೂಮಿ, ಮತ್ತು ದಕ್ಷಿಣದಲ್ಲಿ ಕಾಡು ಇರುವುದರಿಂದ ಅಲ್ಲಿಯ ಮಾನವೀಯ ಜೀವನದ ಮೇಲೆ ಪ್ರಾಚೀನ ಕಾಲದಲ್ಲಿ ಹೊರಗಿನಿಂದ ಹೆಚ್ಚು ಆಘಾತಗಳಾಗಲಿಲ್ಲ. ಆದುದರಿಂದ ಈಜಿಪ್ತದ ಸಂಸ್ಕೃತಿಯು ಭಾರತೀಯ ಇಲ್ಲವೆ ಬಾಬಿಲೋನೀ ಸಂಸ್ಕೃತಿಯಂತೆ ಬಹುವಿಧವಾದುದಾಗಿಲ್ಲ. ಏತದ್ದೇಶೀಯ ಸಂಸ್ಕೃತಿ ಅಲ್ಲಿ ಒಂದೇ ಸವನೆ ವಿಕಾಸವಾಗುತ್ತ ಹೋಯಿತು. ಈಜಿಪ್ತದಲ್ಲಿ ಏಕತಂತ್ರೀ ರಾಜಪ್ರಭುತ್ವವಿದ್ದಿತು. ನ್ಯಾಯದಾನವು ವಜೀರನ ಕೈಯಲ್ಲಿರುತ್ತಿತ್ತು. ರಾಜನಲ್ಲಿ ದೊಡ್ಡ ಸೈನ್ಯವಿರುತ್ತಿತ್ತು. ದಂಡಾಳಿಗೆ ಸಂಬಳವಲ್ಲಿದೆ ಪ್ರತಿಯೊಬ್ಬನಿಗೆ ಆರು ಎಕರೆ ಭೂಮಿ ಕೊಡಲಾಗುತ್ತಿತ್ತು. ಅದರಿಂದ ಸೈನಿಕರೆಲ್ಲ ಒಕ್ಕಲಿಗರೂ ಆಗಿದ್ದರು ಪ್ರಾಚೀನ ಮಿಸರ ದೇಶದ ಜನರು ಧಾರ್ಮಿಕ ವೃತ್ತಿಯವರಿದ್ದುದರಿಂದ ಅಲ್ಲಿ ಪುರೋಹಿತರ ಪ್ರಭಾವ ಹೆಚ್ಚಾಗಿತ್ತು. ದೇವರನ್ನು ಪ್ರಸನ್ನಗೊಳಿಸುವ ಮತ್ತು ನಿಸರ್ಗ ಪ್ರಕೋಪದಿಂದ ಜನರನ್ನು ಕಾಪಾಡುವ ಅಲೌಕಿಕ ವಿದ್ಯೆ ಪುರೋಹಿತರಲ್ಲಿದೆ ಎಂದು ಜನರ ನಂಬುಗೆಯಿತ್ತು. ಪುರೋಹಿತರಂತೆಯೆ ಸರದಾರರೂ ವರ್ಚಸ್ವಿಗಳಾಗಿದ್ದರು. ಲೇಖಕರ ವ್ಯವಸಾಯವೂ ಚೆನ್ನಾಗಿ ಸಾಗಿತ್ತು. ಕೂಲಿಕಾರರ ಮತ್ತು ಗುಲಾಮರ ಸ್ಥಿತಿ ಮಾತ್ರ ಅತ್ಯಂತ ಕರುಣಾಜನಕವಾಗಿರಬಹುದು. ಈಜಿಪ್ತದ ಸ್ತೂಪದ ಮೇಲೆ, ಮುಕಾದಮನೊಬ್ಬನು ಕೈಯಲ್ಲಿ ಬಾರುಕೋಲು ಹಿಡಿದು ಆಳುಗಳನ್ನು ಹೊಡೆಯುತ್ತಿರುವ ದೃಶ್ಯವಿದೆ. ಇದರಿಂದ ದುಡಿಯುವ ಆಳುಗಳ ಸ್ಥಿತಿಯು ಕಲ್ಪನೆ ಬರುವಂತಿದೆ.

ಪ್ರಾಚೀನ ಇಜಿಪ್ತದ ಪ್ರಚಂಡ ಸ್ತೂಪಗಳನ್ನು ನೋಡಿದರೆ, ಸ್ಥಾಪತ್ಯಶಾಸ್ತ್ರವು (ಕಟ್ಟಡದ ನಿರ್ಮಾಣ ಶಾಸ್ತ್ರವು) ಅಲ್ಲಿ ಉತ್ಕರ್ಷಹೊಂದಿತ್ತೆಂಬಲ್ಲಿ ಸಂದೇಹವೇ ಇಲ್ಲ. ಅಲ್ಲದೆ, ಖಗೋಲಶಾಸ್ತ್ರ ಮತ್ತು ಗಣಿತಶಾಸ್ತ್ರಗಳೂ ಪ್ರಗತಿಹೊಂದಿದ್ದವು.

ವ್ಯಾಸ ಮತ್ತು ಪರಿಘಗಳ ಪ್ರಮಾಣವು ೧ : ೩·೧೬ಳ ಇರುತ್ತದೆಂಬುದು ಅವರಿಗೆ ತಿಳಿದಿತ್ತು. ಈಜಿಪ್ಸಿಯನ್ನರ ಪ್ರಮುಖ ಉದ್ಯೋಗ ಒಕ್ಕಲುತನ; ವ್ಯಾಪಾರವೂ ಕೆಲ ಮಟ್ಟಿಗೆ ನಡೆಯುತ್ತಿತ್ತು.

**ಅವನತಿಯ ಮೀಮಾಂಸೆ :**— ಈಜಿಪ್ಸಿಯನ್ನರು ಧಾರ್ಮಿಕ ವಿಷಯದಲ್ಲಿ ಅತ್ಯಂತ ಅಸಹಿಷ್ಣುಗಳು. ಗುಲಾಮರನ್ನೂ ಕೂಲಿಕಾರರನ್ನೂ ಅವರು ಹಿಂಸಿಸುತ್ತಿದ್ದರು. ಇವೆರಡು ಕಾರಣಗಳಿಂದ ಈಜಿಪ್ತದ ಅವನತಿಯಾಗತೊಡಗಿತು. ಅವರ ಸಾಮ್ರಾಜ್ಯವೇನೋ ಬೆಳೆಯಿತು; ಆದರೆ ಅದನ್ನು ತೂಗಿಸಿಕೊಂಡು ಹೋಗುವ ಶಾಸನ ಪದ್ಧತಿಯನ್ನು ಹಾಕುವುದಕ್ಕಾಗಲಿಲ್ಲ. ತಮ್ಮ ಹಳೆಯ ಶಸ್ತ್ರಾಸ್ತ್ರಗಳಲ್ಲಿ ಅವರು ಎಂದೂ ಸುಧಾರಣೆ ಮಾಡಲಿಲ್ಲ. ಇವೆಲ್ಲ ಕಾರಣಗಳಿಂದ ಶ್ರೇಷ್ಠ ಶಸ್ತ್ರಾಸ್ತ್ರಗಳನ್ನು ಉಪಯೋಗಿಸುವ ಪರಕೀಯರ ಆಕ್ರಮಣಕ್ಕೆ ಅವರು ಒಳಗಾದರು. ಅವರ ಸ್ವಾತಂತ್ರ್ಯವೂ ಸಂಸ್ಕೃತಿಯೂ ಕಾಲಾಂತರದಿಂದ ನಷ್ಟವಾದವು. ಇಷ್ಟೆಲ್ಲ ನಿಜವಾದರೂ ಪ್ರಾಕ್ಕಾಲೀನ ಮಾನವನ ಕರ್ತೃತ್ವದ ಪ್ರಚಂಡತೆಯನ್ನು ಮತ್ತು ಭವ್ಯತೆಯನ್ನು ಕಾಣಬೇಕಿದ್ದರೆ ಈಜಿಪ್ತದಲ್ಲಿಯೇ ಸರಿ. ಈಜಿಪ್ತದ ಸ್ತೂಪಗಳು ಜಗತ್ತಿನ ಒಂಬತ್ತು ಆಶ್ಚರ್ಯಗಳಲ್ಲಿ ಎಣಿಸಲ್ಪಟ್ಟಿವೆ.

**ಸಮಾರೋಪ :**— ಪ್ರಾಚೀನ ಕಾಲದ ಬಾಬಿಲೋನೀ, ಅಸೀರೀ ಮತ್ತು ಮಿಸರ ಸಂಸ್ಕೃತಿಗಳ ಮತ್ತು ಆ ಆ ಪ್ರಮುಖ ರಾಜರ ಸಂಗತಿಗಳನ್ನು ಮೇಲೆ ಕೊಟ್ಟಿದೆ. ಈಜಿಪ್ಸಿಯನ್ನರಿಗಿಂತ ಬಾಬಿಲೋನಿಗಳು ರಾಜ್ಯದಾಡಳಿತದಲ್ಲಿ ಹೆಚ್ಚು ವ್ಯಾಪಕದೃಷ್ಟಿಯುಳ್ಳವರಾಗಿದ್ದರೆಂಬುದನ್ನು ಹಮ್ಮುರಬಿಯ ಉದಾಹರಣೆಯಿಂದ ಅರಿಯಬಹುದು. ಅವರೂ ಧರ್ಮನಿಷ್ಠರೇ ಹೌದು, ಆದರೆ ಈಜಿಪ್ತದವರಂತೆ ಧರ್ಮಗ್ರಸ್ತರಾಗಿರಲಿಲ್ಲ. ಈಜಿಪ್ಸಿಯನ್ನರಷ್ಟು ಆ ಜನಗಳ ಮನಸ್ಸನ್ನು ಧರ್ಮವು ನೂರೆಗೊಂಡಿದ್ದಿಲ್ಲ. ಜಗತ್ತಿನಲ್ಲಿಯ ಆನಂದವನ್ನೂ ವೈಭವವನ್ನೂ ಉಪಭೋಗಿಸುವ ಅಭಿರುಚಿ ಅವರಿಗಿತ್ತು. ಅವರು ನಿರ್ಮಿಸಿದ ಕಟ್ಟಡಗಳು ಈಜಿಪ್ತದಲ್ಲಿಯಂತೆ ಬರೀ ಭವ್ಯವಾಗಿರಲಿಲ್ಲ. ಉಪಯುಕ್ತವೂ ಆಗಿದ್ದವು. ತಮ್ಮ ಕಲೆಗೆ ಅವರು ಉಪಯುಕ್ತತೆಯನ್ನೂ ತಂದುಕೊಟ್ಟರೆಂದು ಇದರಿಂದ ಹೇಳಿರಬಹುದು. ಖಗೋಲ ಶಾಸ್ತ್ರದಲ್ಲಿ ಅವರು ಗೈದ ಕೆಲಸವಂತೂ ಇಂದೂ ಉಪಯುಕ್ತವೆನಿಸುವಂತಿದೆ. ಒಟ್ಟಾರೆ, ಮಾನವೀಯ ಸಂಸ್ಕೃತಿಯ ಮುನ್ನಡೆಯಲ್ಲಿ ಬಾಬಿಲೋನೀ ಸಂಸ್ಕೃತಿ ಇಜಿಪ್ತದಿಂದ ಮುನ್ನ ಮೆಟ್ಟಾಗಿದೆ. ಈ ದೃಷ್ಟಿಯಿಂದ ಈ ಸಂಸ್ಕೃತಿಯ ಸೂಕ್ಷ್ಮ ಅಭ್ಯಾಸ ನಡೆಸುವುದು ಅವಶ್ಯ.

## ಪ್ರಶ್ನೆಗಳು.

೧ ಈಜಿಪ್ತದ ಸಂಸ್ಕೃತಿಯ ವೈಶಿಷ್ಟ್ಯಗಳು ಯಾವವು ?

೨ ಸಂಕ್ಷೇಪವಾಗಿ ಪರಿಚಯ ಮಾಡಿಕೊಡಿರಿ.

೧) ಈಜಿಪ್ತದ ನೆಪೋಲಿಯನ್ ೨) ಈಜಿಪ್ತದ ಅಕಬರ ೩) ಪ್ರಚಂಡ ಸ್ತೂಪಗಳು

## ೪. ಭಾರತದಲ್ಲಿ ಆರ್ಯರ ಪ್ರಾಚೀನ ನೆಲೆವೀಡುಗಳು

### ಆರ್ಯ-ದ್ರಾವಿಡರ ಮಿಲನ

**ಆರ್ಯರು :—** ಹಿಂದುಸ್ತಾನದಲ್ಲಿ ಆರ್ಯರ ಮೊದಲ ಬೀಡು ಬಂದುದು ಯಾವಾಗ ಎಂಬ ವಿಷಯದಲ್ಲಿ ನಿಶ್ಚಿತ ಏಕಮತವಿಲ್ಲ. ಆದರೂ ಯಾರ ಅಭಿಪ್ರಾಯ ದಲ್ಲಿಯೂ ಆ ಕಾಲವು ಕ್ರಿ. ಪೂ. ೨೦೦೦ಕ್ಕಿಂತ ಎಂದರೆ ಇಂದಿಗೆ ೪೦೦೦ ವರ್ಷಗಳ ಪೂರ್ವಕ್ಕಿಂತ ಈಚಿನದಲ್ಲ. ಅವರು ವಾಯುವ್ಯದ ಕಡೆಯಿಂದ ಹೊರಗಿನಿಂದ ಬಂದವರೇ ಮೊದಲಿಂದಲೂ ಇಲ್ಲಿದ್ದವರೇ ಎಂಬ ಬಗೆಗೂ ಸ್ವಲ್ಪ ವಾದವಿದೆ. ಆದರೂ ಅವರು ವಾಯುವ್ಯದಿಂದ ಹಿಂದುಸ್ತಾನಕ್ಕೆ ಬಂದರೆಂದೇ ಬಹುಜನ ವಿದ್ವಾಂಸರ ನಂಬುಗೆ.ಅಂತೂ ಏನಿಲ್ಲೆಂದರೂ ೪೦೦೦ ವರ್ಷಗಳ ಹಿಂದೆ ಆರ್ಯರು ಸಿಂಧು* ಮತ್ತು ಅದರ ಐದಾರು ಶಾಖಾ ನದಿಗಳ ಫಲವತ್ಪ್ರದೇಶವನ್ನು ನೋಡಿ ಅಲ್ಲಿ ನೆಲಸಿದರೆಂಬಲ್ಲಿ ಸಂದೇಹವಿಲ್ಲ. ಋಗ್ವೇದದಲ್ಲಿ ಕುಭಾ (ಕಾಬೂಲ) ನದಿಯ ಉಲ್ಲೇಖವೂ ದೊರೆಯುತ್ತದೆ.

**ಆರ್ಯರ ಗ್ರಂಥ :—** ಆರ್ಯರು ಸಂಸ್ಕೃತ ಭಾಷೆಯನ್ನಾಡುತ್ತಿದ್ದರು. ಸಂಸ್ಕೃತ ಜಗತ್ತಿನಲ್ಲಿ ಎಲ್ಲಕ್ಕೂ ಪ್ರಾಚೀನ ಭಾಷೆ. ಆರ್ಯರ ಸುಸಂಬದ್ಧವಾದ ಮಾಹಿತಿ ಎಲ್ಲಿಯೂ ದೊರೆಯುವದಿಲ್ಲ. ಅದನ್ನು ಒದಗಿಸುವ ಒಂದೇ ಸಾಧನವೆಂದರೆ ಆ ಕಾಲದ ಋಗ್ವೇದಗ್ರಂಥ. ಋಗ್ವೇದದಲ್ಲಿ ೧೦ ಮಂಡಲಗಳಿವೆ. ಅವುಗಳಲ್ಲಿ ಒಟ್ಟು ೧೦೨೮ ಸೂಕ್ತಗಳಿವೆ. ಸಾಮಾನ್ಯವಾಗಿ ಒಂದು ಛಂದೋಬದ್ಧ ವಾಕ್ಯವು ಒಂದು ಋಚವೆನಿಸುತ್ತದೆ; ಇಂತಹ ಅನೇಕ ಋಚಗಳು ಕೂಡಿ ಸೂಕ್ತವಾಗಿರುವುದು. ಋಗ್ವೇದವು ಯಾವೊಬ್ಬ ಋಷಿಯ ರಚನೆಯಲ್ಲ;ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಜನರು ಸೃಷ್ಟಿದೇವತೆಗಳನ್ನೂ ಪಂಚಮಹಾಭೂತಗಳನ್ನೂ ಕುರಿತು ಮಾಡಿದ ಪ್ರಾರ್ಥನೆಗಳು ಅದರಲ್ಲಿ ಗ್ರಥಿತವಾಗಿವೆ. ಹೆಚ್ಚು ಪ್ರಾರ್ಥನೆಗಳು ಸರ್ವದೇವತೆಗಳ ಅರಸಾದ ಇಂದ್ರನನ್ನು ಕುರಿತು ಇವೆ; ಅಗ್ನಿ, ವರುಣ ಇತ್ಯಾದಿ ದೇವತೆಗಳ ಪ್ರಾರ್ಥನೆಗಳೂ ಇವೆ. ಇಂದ್ರನ ಪರಾಕ್ರಮದ ವರ್ಣನೆ ಅಲ್ಲಲ್ಲಿ ಬರುತ್ತದೆ ದೇವತೆಗಳನ್ನು ಕುರಿತು ಇದ್ದ ಪ್ರಾರ್ಥನೆಗಳಲ್ಲಿ ಹಲವಾರು ಸಂಗತಿಗಳಿವೆ. ಶತ್ರುಗಳ ನಾಶವಾಗಬೇಕು, ಸತ್ತವರಿಗೆ ಸದ್ಗತಿಯಾಗಬೇಕು.

* ಕಾಲಾಂತರದಲ್ಲಿ ನದಿಗಳ ಹಾದಿ ಬದಲಾಗುತ್ತದೆ. ಸತಲಜ ನದಿ ಕಳೆದ ೪೦೦೦ ವರ್ಷಗಳಲ್ಲಿ ೮೦ ಮೈಲು ಸರಿದಿದೆ ಎಂದು ತರ್ಕಿಸಲಾಗಿದೆ.ಆದುದರಿಂದ ಹಿಂದಿನ ಮತ್ತು ಇಂದಿನ ಪ್ರದೇಶವನ್ನೇ ಗುರುತಿಸುವಾಗ ಎಚ್ಚರಪಡುವುದು ಅಗತ್ಯ 'ಆರ್ಯ' ಶಬ್ದವು ಸಂಸ್ಕೃತ 'ಅರ್' ಧಾತುವಿನಿಂದ ಬಂದುದು; ಅರ್ ಎಂದರೆ ಉಳು. ಇದರಿಂದ ಹೊರಡುವ ಒಂದು ಅನುಮಾನವೆಂದರೆ, ಹೊಸಬರು ನೆರೆಯ ಜನರಿಂದ ತಮ್ಮನ್ನು ಬೇರೆಯಾಗಿ ಗುರುತಿಸುವುದಕ್ಕಾಗಿ ' ಆರ್ಯ ' ಎಂಬ ಹೆಸರಿನ್ನಿಟ್ಟುಕೊಂಡಿರಬೇಕು.

ವಿವಾಹಿತ ವಧುವಿಗೆ ಸುಪುತ್ರನಾಗಬೇಕು, ಪಾಪ ನಷ್ಟವಾಗಬೇಕು, ಸದ್ಬುದ್ಧಿ ಯುಂಟಾಗಬೇಕು, ಧನಪ್ರಾಪ್ತಿಯಾಗಬೇಕು, ಚೆನ್ನಾಗಿ ಬೆಳೆ ಬರಬೇಕು, ಅಮರತ್ವವು ಎಂದರೆ ಬ್ರಹ್ಮಸ್ವರೂಪವು ಪ್ರಾಪ್ತವಾಗಬೇಕು.ಹೀಗೆ ಇಹಪರ ಉದ್ದೇಶಗಳು ಆ ಪ್ರಾರ್ಥನೆಗಳಲ್ಲಿ ಕಂಡುಬರುತ್ತವೆ.

**ದ್ರಾವಿಡರು :—** ಆರ್ಯರ ಜೀವನದಲ್ಲಿ ಮುಂದಿನ ಕಾಲದಲ್ಲಿ ಕೆಲವು ಹೆಚ್ಚುಕಡಿಮೆಗಳಾಗುತ್ತ ಬಂದವು ಭಾರತದಲ್ಲಿದ್ದ 'ದ್ರಾವಿಡ' ಜನಾಂಗದೊಡನೆ ಉಂಟಾದ ಸಂಬಂಧವೇ ಅದಕ್ಕೆ ಮುಖ್ಯ ಕಾರಣ. ಆರ್ಯರಿಗಿಂತ ಮೊದಲು ಹಿಂದುಸ್ತಾನದಲ್ಲಿ ದ್ರಾವಿಡರು ವಸತಿಮಾಡಿದ್ದರು. ಆರ್ಯರು ಬಂದ ಬಳಿಕ ತತ್ಕಾಲೀನ ಭಾರತದಲ್ಲಿ,ಆರ್ಯರು, ಆರ್ಯಸಂಸ್ಕೃತಿಯನ್ನು ಸ್ವೀಕರಿಸಿದ ಇತರರು, ದ್ರಾವಿಡರು ಮತ್ತು ಅನಾರ್ಯರು–ಹೀಗೆನಾಲ್ಕು ಮುಖ್ಯ ಸಮಾಜಗಳಿದ್ದಿರಬೇಕು. ಇವರಲ್ಲಿ ಕಾಡು ಜನರ ಸಮಾಜಕ್ಕೆ ಅನಾರ್ಯ ಎಂಬ ಹೆಸರು ಕೊಡಲಾಗಿದೆ. ಅನಾರ್ಯರಿಗೆ ಕೌಟುಂಬ ವ್ಯವಸ್ಥೆ ಗೊತ್ತಿತ್ತೊ ಇಲ್ಲವೊ ಹೇಳುವುದು ಬಿರಿ. ದ್ರಾವಿಡರ ಮತ್ತು ಆರ್ಯರ ಪ್ರಸಾರವಾದಂತೆ ಅವರು ಬೆಟ್ಟ ಕೊಳ್ಳಗಳನ್ನು ಸೇರಿದರೆಂಬುದು ಮಾತ್ರ ನಿಜ. ದ್ರಾವಿಡರು ಸುಸಂಸ್ಕೃತರಾಗಿದ್ದರು. ಪೂರ್ವಕಾಲೀನ ದ್ರಾವಿಡರು ಬೇಡವೃತ್ತಿಯವರು; ಅವರಲ್ಲಿ ಮಾತೃಸತ್ತಾಕ ಪದ್ಧತಿ ಅಸ್ತಿತ್ವದಲ್ಲಿತ್ತು. ಹೆಂಗಸರು ಮಕ್ಕಳ ಜೋಪಾನಮಾಡುವರು, ಗಂಡಸರು ಬೇಟೆಗಾಗಿ ಮತ್ತು ನಿರ್ವಾಹಕ್ಕಾಗಿ ಅಲ್ಲಿ ಇಲ್ಲಿ ಸಂಚರಿಸುವರು. ಇವರೆಲ್ಲರೂ ಒಂದೆಡೆಯಲ್ಲಿ ವಾಸಿಸುತ್ತಿದ್ದರು. ಅವರ ಆಸ್ತಿಪಾಸ್ತಿಗಳು ಅವರ ಸಾಮೂಹಿಕ ಒಡೆತನದವಾಗಿದ್ದವು. ಕಾಲಾಂತರದಲ್ಲಿ ಸ್ತ್ರೀಯರೂ ಕಂದಮೂಲಗಳನ್ನು ಸಂಗ್ರಹಿಸಲು ತೊಡಗಿದರು. ಮುಂದೆ, ಬಹುಶಃ ಆರ್ಯ ಋಷಿಗಳು ಈ ದ್ರಾವಿಡರಿಗೆ ಭೂಮಿಯನ್ನು ಉಳುವುದನ್ನು ಕಲಿಸಿದರು. ಈ ದ್ರಾವಿಡರ ಗುಂಪುಗಳು ಸಾಮೂಹಿಕ ರೀತಿಯಿಂದ ಅಲ್ಲಲ್ಲಿ ವಾಸಿಸುತ್ತಿದ್ದವು. ಹಿಂದುಸ್ತಾನದಲ್ಲಿಯ ಬಹು ಸಂಖ್ಯೆಯ ಹಳ್ಳಿಗಳು ಉಂಟಾದುದು ಹೀಗೆಯೆ. ಇಂತಹ ಸಮಾಜರಚನೆಯಲ್ಲಿ ಮಕ್ಕಳಿಗೆ ತಂದೆಗಿಂತ ತಾಯಿಯ ಗುರುತು ಹೆಚ್ಚು; ಅವರ ಪ್ರೀತಿ ತಾಯಿಯಮೇಲೆ ಬಹಳ. ನೆಲದಲ್ಲಿ ಖಾದ್ಯಪದಾರ್ಥಗಳು ಹುಟ್ಟಿ ಅದರಿಂದ ಎಲ್ಲರ ಹೊಟ್ಟೆ ಹೊರೆಯುವಂತಾಗಲು ನೆಲ ಅವರ ' ಮಾತೃಭೂಮಿ ' ಆಯಿತು.

**ಉದ್ಯೋಗ:** ಆರ್ಯರು ಬೇಸಾಯ ಮಾಡುತ್ತ ಮನೆಕಟ್ಟಿಕೊಂಡು ಇರುತ್ತಿದ್ದರೆಂಬುದು ವೇದಗಳಲ್ಲಿಯ ಪ್ರಾಸಂಗಿಕ ಉಲ್ಲೇಖಗಳಿಂದ ಸಿದ್ಧವೇ ಆಗಿದೆ. ಬೇಸಾಯದ ಉನ್ನತಿಗಾಗಿ ಅವರು ಬಾವಿಗಳನ್ನು ತೋಡಿದರು, ಒಡ್ಡು ಒತ್ತಲುಗಳನ್ನು ಕಟ್ಟಿದರು. ಗೋದಿ-ಸಜ್ಜೆಗಳನ್ನು ಬೆಳೆಯುತ್ತಿದ್ದರು. ಅಕ್ಕಿಯ ಉಲ್ಲೇಖ ದೊರೆಯುವುದಿಲ್ಲ. ಅವರು ಸೋಮ ಎಂಬ ವನಸ್ಪತಿಯ ರಸವನ್ನು ತೆಗೆದು ಕುಡಿಯುತ್ತಿದ್ದರು. ವಸ್ತ್ರಪ್ರಾವರಣಗಳಲ್ಲಿಯೂ ವಿಶೇಷ ಪ್ರಗತಿ ಹೊಂದಿದ್ದರು. ನೂಲುವುದು ನೇಯುವುದೂ ಅವರಿಗೆ ಗೊತ್ತಿತ್ತು. 'ನೇಕಾರ ಉದ್ದ-ಅಡ್ಡ ಎಳೆಗಳಿಂದ ಬಟ್ಟೆ ನೇಯುವಂತೆ ಪರಮೇಶ್ವರನು ಹಗಲಿರುಳುಗಳಿಂದ ಕಾಲವನ್ನು ರಚಿಸಿದ್ದಾನೆ' ಎಂಬರ್ಥದ ಒಂದು ಋಚೆ ಋಗ್ವೇದದಲ್ಲಿದೆ. ಬಂಡಿ, ರಥ ಮೊದಲಾದ ವಾಹನಗಳನ್ನುಅವರು ಉಪಯೋಗಿಸುತ್ತಿದ್ದರು.

ಬಿಲ್ಲು ಬಾಣಗಳಿಂದಲೂ ಕತ್ತಿ ಢಾಲುಗಳಿಂದಲೂ ಅವರು ಕಾದುತ್ತಿದ್ದರು. ಬೆಳ್ಳಿ ಬಂಗಾರದ ಆಭರಣಗಳನ್ನು ತೊಡುತ್ತಿದ್ದರು. 'ನಿಷ್ಕ' ಎಂಬ ಬಂಗಾರದ ನಾಣ್ಯದಿಂದ ಕೊಡುಕೊಳ್ಳುವಿಕೆ ನಡೆಯುತ್ತಿತ್ತು.

**ಸಮಾಜರಚನೆ:** ಆರ್ಯರಲ್ಲಿ ಜಾತಿಭೇದವಿರಲಿಲ್ಲ. ಬಾಲವಿವಾಹದ ಪದ್ಧತಿ ಇರಲಿಲ್ಲ. ಸ್ತ್ರೀಯರನ್ನು ಪರದೆಯಲ್ಲಿ, ಅಜ್ಞಾನದಲ್ಲಿ, ದಾಸ್ಯದಲ್ಲಿ ಇಡುವ ರೂಢಿಯಿರಲಿಲ್ಲ ಯಜ್ಞ ಮತ್ತು ಲಗ್ನ ಸಮಾರಂಭಗಳು ಬಲು ಸಡಗರದಿಂದ ಜರುಗುತ್ತಿದ್ದವು. ಋಗ್ವೇದದಲ್ಲಿಯ ಆ ಪ್ರಸಂಗಗಳ ವರ್ಣನೆಗಳು ಅಗತ್ಯವಾಗಿ ಓದುವಂತಹವಿವೆ. ಶವಗಳನ್ನು ಸುಡುವ ಬಗ್ಗೆ ಮತ್ತು ಹುಗಿಯುವ ಬಗ್ಗೆ ಋಗ್ವೇದದಲ್ಲಿ ಉಲ್ಲೇಖಗಳಿವೆ.

**ರಾಜಕೀಯ ಸಂಸ್ಥೆ :** ಆರ್ಯರು ಭಾರತದಲ್ಲಿ ಬಂದಾಗ ಜನ್ಮನ್, ವಿಶ್, ಏಕಜನ ಎಂಬ ಒಂದಕ್ಕಿಂತ ಒಂದು ಹಿರಿದಾದ ಸಂಘಟನೆಗಳಿದ್ದವು. ಜನ್ಮನ್ ಅಥವಾ ಗ್ರಾಮದಲ್ಲಿಯ ಎಲ್ಲ ಜನರು ಪ್ರಾರಂಭದಲ್ಲಿ ಒಂದೇ ಕುಟುಂಬದವರಿದ್ದು ವಿಸ್ತಾರಹೊಂದಿದವರಾಗಿದ್ದರು. ಹಲವು ಗ್ರಾಮಗಳ ಗುಂಪಿಗೆ ವಿಶ್ ಎಂಬ ಸಂಜ್ಞೆಯಿತ್ತು ಇವರಲ್ಲಿ ಬಹುಶಃ ಒಂದೇ ವಂಶದ ಜನಗಳಿರುತ್ತಿದ್ದರು. ಅನೇಕ ವಿಶ್‌ಗಳಿಂದಾದದ್ದು ಏಕಜನ ಅಥವಾ ಗಣ—ಎನಿಸುತ್ತಿತ್ತು. ಗಣದಲ್ಲಿ ಅನೇಕ ಗುಂಪಿನವರಿರುತ್ತಿದ್ದರು. ಗಣಗಳ ಮುಖ್ಯಸ್ಥನು ಜನಪತಿ ಅಥವಾ ಗಣಪತಿ. ಆರ್ಯರು ಇಲ್ಲಿ ಸ್ಥಿರಗೊಂಡ ಮೇಲೆ ಗಣಪತಿಗೆ ರಾಜಪದವು ಪ್ರಾಪ್ತವಾಗಿರಬೇಕೆಂದು ತರ್ಕಿಸಲಾಗಿದೆ.

ಋಗ್ವೇದದಲ್ಲಿ ಬೇರೆ ಬೇರೆ ರಾಜರ ಉಲ್ಲೇಖಗಳಿವೆ. ರಾಜರು ಭವ್ಯವಾದ ಅರಮನೆಗಳಲ್ಲಿರುತ್ತಿದ್ದರು. ಆಕಳು, ಕುದುರೆ, ಬಟ್ಟೆ, ಬಂಗಾರಗಳನ್ನು ಅವರು ದಾನಕೊಡುತ್ತಿದ್ದರು. ಬೃಹಸ್ಪತಿಗೆ ಮತ್ತು ಬ್ರಾಹ್ಮಣರಿಗೆ ಮಾನ ಕೊಡುತ್ತಿದ್ದರು. ಸಭೆ ಮತ್ತು ಸಮಿತಿಗಳನ್ನು ನೆರೆಸಿ ರಾಜರು ಸಲಹೆ ಪಡೆಯುತ್ತಿದ್ದರು. ಈ ವರ್ಣನೆಯಿಂದ ಅವರ ರಾಜತ್ವದ ಅರಿವು ನಮಗಾಗುತ್ತದೆ. ಅನೇಕ ವಸಾಹತಿಗಳ ಪ್ರಮುಖನಿಗೆ ಸಮ್ರಾಟ್ ಎನ್ನುತ್ತಿದ್ದರು. ಪ್ರತಿಷ್ಠಿತ ಪ್ರಮುಖರದು 'ಸಭೆ' ಸಾಮಾನ್ಯ ಜನಕ್ಕಾಗಿ ಇದ್ದದ್ದು ' ಸಮಿತಿ '. ಸಮಿತಿಯಲ್ಲಿ ಎಲ್ಲರ ಸಮಾವೇಶವಾಗುತ್ತಿತ್ತು. ರಾಜರು ವಂಶಪರಂಪರಾಗತರಾಗಿರುತ್ತಿದ್ದರು. ಆದರೆ ಆಪತ್ಪ್ರಸಂಗದಲ್ಲಿ ಸಮಿತಿಯವರು ಅವರನ್ನು ಆಯುವುದೂ ಇತ್ತು. ಹೊಣೆಗಾರ ರಾಜ್ಯಪದ್ಧತಿಯ ಅರ್ವಾಚೀನ ಕಲ್ಪನೆ ಆಗ ಗೊತ್ತಿರಲಿಲ್ಲ. ಆದರೆ ಸಮಿತಿಯೊಡನೆ ಮತಭೇದವಾಗುವುದು ದೊಡ್ಡ ಕುತ್ತವೆಂದು ರಾಜರಿಗೆ ಎನಿಸುತ್ತಿತ್ತು. ತತ್ತ್ವತಃ ರಾಜನ ಕಾರಭಾರವು ಅನಿಯಂತ್ರಿತವೇ; ಆದರೆ ಧರ್ಮ ಕಲ್ಪನೆಗಳ ಅನುಲ್ಲಂಘ್ಯ ನಿಬಂಧನೆಗಳು 'ಸಭೆ'ಯ ಸಲಹೆಗಳು 'ಸಮಿತಿ'ಯ ಚರ್ಚೆಗಳು ಈ ಮೂರರ ನಿಯಂತ್ರಣವು ಅವನ ಅಧಿಕಾರದ ಮೇಲೆ ಇದ್ದೇ ಇರುತ್ತಿತ್ತು. ಗ್ರಾಮಗಳಲ್ಲಿ ಅಥವಾ ಹಳ್ಳಿಗಳಲ್ಲಿ ಆಯು ಎಂಬವನಿರುತ್ತಿದ್ದನು. ಅಲ್ಲಿಯ ಆಡಳಿತ ಗ್ರಾಮಪಂಚಾಯತಿಗಳ ಕೈಯಲ್ಲಿತ್ತು. ಪಂಚಾಯತಿಗಳ ಕಾರಭಾರದಿಂದಾಗಿ ರಾಜಸತ್ತೆ ಒಂದೇ ಕೈಯಲ್ಲಿರದೆ, ಜನರಿಗೆ ನಿಜವಾದ 'ಸ್ವರಾಜ್ಯ'ವನ್ನು ಅನುಭವಿಸಲು ಎಡೆಯಿತ್ತು.

**ಧರ್ಮ :** ಆರ್ಯರ ಧರ್ಮವು ಬಹು ಮನಸೆಳೆಯುವಂತಿದೆ. ಆ ಕಾಲದ ಎಲ್ಲ ಜನರ ಮೇಲೆ ಅದರ ಮುದ್ರೆ ಶೀಘ್ರದಲ್ಲಿಯೇ ಬಿದ್ದು, ಅದನ್ನವರು ಸ್ವೀಕರಿಸಿದರು. ಸೃಷ್ಟಿಯಲ್ಲಿಯ ಪಂಚಮಹಾಭೂತಗಳ ಸತ್ಯಸ್ವರೂಪ ಅಥವಾ ಕಾರ್ಯಕಾರಣಭಾವ ತಿಳಿಯುವ ಮೊದಲು, ಅವುಗಳ ಬಗೆಗೆ ದೈವೀ ಭಾವನೆ ಜಾಗೃತವಾಯಿತು. ಆ ಪ್ರತಿಯೊಂದು ಶಕ್ತಿಗೂ ಅವರು ಭಕ್ತಿಭಾವದಿಂದ ನಮಸ್ಕಾರ ಮಾಡಿದರು. ಇಂದ್ರ, ವರುಣ, ಅಗ್ನಿ, ಸೂರ್ಯ ಮತ್ತು ಆಕಾಶ—ಇವೆಲ್ಲವನ್ನೂ ಆರ್ಯರು ದೇವರೆಂದು ಮನ್ನಿಸುತ್ತಿದ್ದರು. ಪ್ರಸಂಗಾನುಸಾರವಾಗಿ ದೇವತೆಗಳನ್ನು ಭಕ್ತಿಭಾವದಿಂದಪ್ರಾರ್ಥಿಸುತ್ತಿದ್ದರು. ಯಮ ಮತ್ತು ಯಮಲೋಕಗಳಲ್ಲಿ ಅವರಿಗೆ ನಂಬಿಗೆಯಿತ್ತು. ಪುನರ್ಜನ್ಮದಲ್ಲಿ ವಿಶ್ವಾಸ ಮತ್ತು ಆತ್ಮನ ಅಮರತ್ವ, ದೇಹದ ನಶ್ವರತೆ ಮತ್ತು ಪರಲೋಕ ಕಲ್ಪನೆ ಇವು ಆರ್ಯ ಕಾಲದಲ್ಲಿ ಕಂಡುಬರುತ್ತವೆ. ಆದರೆ ಈ ದೇವತೆಗಳ ವಿವಿಧತೆಯಿಂದಾಗಿ ದೇವರು ಒಬ್ಬನೆಂಬುದು ಆರ್ಯರಿಗೆ ಗೊತ್ತಿರಲಿಲ್ಲವೆಂದು ತಿಳಿಯುವುದು ತಪ್ಪಾಗುವುದು. ಗ್ರೀಕ್ ಅಥವಾ ರೋಮನ್ ಜನರಂತೆಯೇ ಆರ್ಯರ ದೇವತೆಗಳು ಭಿನ್ನವಾಗಿದ್ದರೂ ಮೂಲ ದೇವನು ಒಬ್ಬನಿದ್ದಾನೆ. ಮಿಕ್ಕ ದೇವತೆಗಳು ಆತನ ಬೇರೆ ಬೇರೆ ಸ್ವರೂಪಗಳು ಎಂಬ ತತ್ತ್ವದಲ್ಲಿ ಆರ್ಯರಿಗೆ ತುಂಬ ಭರವಸೆಯಿತ್ತು. ಆದರೆ ಈ ಪರಮೇಶ್ವರ ವಿಷಯಕ ಕಲ್ಪನೆ ಪ್ರಾರಂಭದಿಂದಲೇ ಇದ್ದುದಲ್ಲ. ಋಗ್ವೇದ ಕಾಲದ ಕೊನೆಯಲ್ಲಿ ಅದು ಉದಯವಾಯಿತು. ಉಪನಿಷತ್ಕಾಲದಲ್ಲಿ ದೃಢಮೂಲವಾಯಿತು ಎಂದು ಕಾಣುತ್ತದೆ. ಪರಮೇಶ್ವರನ ಈ ಸ್ವರೂಪದ ಅರಿವುಂಟಾದುದರಿಂದ ಆರ್ಯರು ಮುಂದೆ ಬೇರೆ ಬೇರೆ ಧರ್ಮಪಂಥೀಯರೊಡನೆ ಅತ್ಯಂತ ತಾಳ್ಮೆಯಿಂದ ನಡೆದುಕೊಂಡರೆಂಬುದು ಒಳ್ಳೇ ಅಭಿಮಾನದ ಸಂಗತಿಯೇ ಸರಿ.

**ಅಸುರರು :** ನಿರ್ವಾಹಕ್ಕಾಗಿ ಸಂಚರಿಸಿ ಪುರುಷರು ತಿರುಗಿ ತಮ್ಮ ಭೂಮಿಗೆ ಬರುತ್ತಿದ್ದರು. ಆಗ ಅವರಲ್ಲಿ ದೊಡ್ಡ ಉತ್ಸವವಾಗುತ್ತಿತ್ತು. ಸ್ತ್ರೀಪುರುಷರು ಭೇದ ಭಾವವಿಲ್ಲದೆ ಕಲೆಯುತ್ತಿದ್ದರು. ಎಷ್ಟೋ ಸಲ, ಅವರು ಮರದಡಿಯಲ್ಲಿ ಒಂದುಗೂಡಿ ಸಾಮುದಾಯಿಕ ಪ್ರಶ್ನೆಗಳನ್ನು ಚರ್ಚಿಸುತ್ತಿದ್ದರು. ಆಗ ವಯಸ್ಕರಾದ ಮಕ್ಕಳೆಲ್ಲರೂ ಅವರ ಹತ್ತಿರ ಕುಳಿತಿರುತ್ತಿದ್ದರು, ಆದರಿಂದ ಅವರಿಗೆ ಶಿಕ್ಷಣ ದೊರೆಯುತ್ತಿತ್ತು ಇಂಥ ಹುಡುಗರನ್ನು ಚಿಕ್ಕಪುಟ್ಟ ಬೇಟೆಗಳಿಗೂ ಕರೆದೊಯ್ಯುತ್ತಿದ್ದರು. ಹೀಗೆ ಸಾಮುದಾಯಿಕ ಜೀವನದಲ್ಲಿ ಸಾಮಾನ್ಯರ ರಕ್ಷಣೆಯೂ ಪೋಷಣೆಯೂ ಆಗುತ್ತಿತ್ತು. ಆದರೆ ಮಹತ್ವಾಕಾಂಕ್ಷಿಗಳೂ ಕರ್ತೃತ್ವಶಾಲಿಗಳೂ ಅವರಿಗೆ ಕಟ್ಟಿಹಾಕಿದಂತಾಗುತ್ತಿತ್ತು. ಅಂಥವರು ಅವರಿಂದ ಸಿಡಿದು ಹೋಗಿ, ತನ್ನಂತಿರುವವರನ್ನು ನೆರವಿಕೊಂಡು, ಮೂಲ ಸಂಘದಲ್ಲಿಯ ಹೆಂಗುಸರನ್ನೂ ಹುಡುಗರನ್ನೂ ಓಡಿಸಿಕೊಂಡು ಹೋಗುತ್ತಿದ್ದರು; ತಮ್ಮ ನೇತೃತ್ವದಲ್ಲಿ ಬೇರೊಂದು ವಸಾಹತನ್ನು ಸ್ಥಾಪಿಸಿಕೊಳ್ಳುತ್ತಿದ್ದರು. ತಮಗೆ ಗೆಲವಾಗಬೇಕೆಂದು ಅವರು ದುರ್ಗಾದೇವಿಯನ್ನು ಆರಾಧಿಸುತ್ತಿದ್ದರು. ತಮ್ಮ ವಿರೋಧಿಗಳನ್ನು ಬಲಿ ಕೊಟ್ಟು ಅವರ ರಕ್ತದಿಂದ ಅವಳನ್ನು ಸಂತುಷ್ಟಗೊಳಿಸುತ್ತಿದ್ದರು. ' ರಾಜ ' , ' ರಾಜ್ಯ ' ಇತ್ಯಾದಿ ಕಲ್ಪನೆ, ಸ್ತ್ರೀಯರನ್ನು ನಿರ್ಬಂಧದಲ್ಲಿಡುವ

ವಿವಾಹ ಸಂಸ್ಥೆ, ವ್ಯಕ್ತಿಗತ ಆಸ್ತಿಪಾಸ್ತಿಗಳ ಕಲ್ಪನೆ ಮೊದಲು ಈ ಬಂಡುಗಾರರ ಗುಂಪಿನಲ್ಲಿ ಉಂಟಾದವೆಂದು ಹೇಳುತ್ತಾರೆ. ಯಶಸ್ವಿ ಬಂಡುಗಾರನು ರಾಜನಾಗುತ್ತಿದ್ದನು ಮತ್ತು ಅಪಹೃತಳಾದ ಸ್ತ್ರೀ ಒಬ್ಬನ ಸೊತ್ತಾಗಿ ಇರುತ್ತಿದ್ದಳು. ಮೂಲ ದ್ರಾವಿಡರು ಶಾಂತವೃತ್ತಿಯುವರು ಆದರೆ ಆರ್ಯರು ತಮ್ಮ ವರ್ಚಸ್ಸವನ್ನು ಸ್ಥಾಪಿಸುವುದಕ್ಕಾಗಿ ಕಾದಾಡಬೇಕಾಗಿ ಬಂದದ್ದು ಈ ಪ್ರಚಂಡ ಸಾಹಸಿಗಳೊಡನೆ. ಈ ಭಯಂಕರ ವೃತ್ತಿಯ ಮೂಲಕ ಆರ್ಯರು ಇವರಿಗೆ 'ಅಸುರ' ಅಥವಾ 'ರಾಕ್ಷಸ' ಎಂದು ಹೆಸರು ಕೊಟ್ಟಿರಬೇಕು.

**ದ್ರಾವಿಡ ಸಂಸ್ಕೃತಿ:** ದ್ರಾವಿಡ ಸಂಸ್ಕೃತಿ ಆರ್ಯ ಸಂಸ್ಕೃತಿಗಿಂತ ಭಿನ್ನವಾಗಿತ್ತೆಂಬುದನ್ನು ಮರೆಯಲಾಗದು. ಕೃಷಿವಿದ್ಯೆಯನ್ನು ಆರ್ಯರಿಂದ ಇವರು ಅರಿತಿರಬೇಕೆಂಬುದನ್ನು ಹಿಂದೆಯೆ ಹೇಳಿದೆ. ದ್ರಾವಿಡರು ಹೆಣಗಳನ್ನು ಕುಳಿತ ಸ್ಥಿತಿಯಲ್ಲಿ ಹೂಗಿಯುತ್ತಿದ್ದರು. ಮುಂದೆ ಆರ್ಯರ ಸಹವಾಸದಿಂದ ಹೆಣವನ್ನು ಸುಡುವುದು ರೂಢಿಗೆ ಬಂದ ಮೇಲೆ, ಮೃತನ ಬೂದಿಯನ್ನು ಮಣ್ಣು ಕೊಡದಲ್ಲಿ ತುಂಬಿಟ್ಟು ಅವನ ಶಸ್ತ್ರಾಸ್ತ್ರಗಳನ್ನು ಅದರ ಹತ್ತಿರ ಇಡುತ್ತಿದ್ದರು. ಆ ಕೊಡವನ್ನು ಪೂಜೆಗಾಗಿ ದ್ರಾವಿಡರು ಮನೆಯಲ್ಲಿ ಇಟ್ಟಿರುತ್ತಿದ್ದರು. ತಾಮ್ರ-ಬ್ರಾಂಝುಗಳ ಉಪಯೋಗವು ಇವರಿಗೆ ಆರ್ಯರು ಬರುವುದಕ್ಕಿಂತ ಮೊದಲೂ ಗೊತ್ತಿತ್ತು. ಮಾನವೀ ಪ್ರಗತಿಯ ಪ್ರಥಮಾವಸ್ಥೆಯಲ್ಲಿ ಈ ಧಾತುಗಳನ್ನು ಮನುಷ್ಯನು ಬಳಸುತ್ತಿದ್ದನು. ಅನಂತರದ ಕಾಲದಲ್ಲಿ ಕಬ್ಬಿಣ ಗೊತ್ತಾಯಿತು, ಅದರ ಉಪಯೋಗವು ಸಾಧ್ಯವಾಯಿತು. ಆ ಮೇಲೆ ಬಂಗಾರ ಬೆಳ್ಳಿ ಬಳಕೆಗೆ ಬಂದವು. ಆರ್ಯರ ಆಗಮನ ಪೂರ್ವದ ದ್ರಾವಿಡರು ಇವೆಲ್ಲ ಧಾತುಗಳ ಉಪಯೋಗವನ್ನು ಅರಿತವರಾಗಿದ್ದರು. ಸುಂದರ ನಕ್ಷೆಗಳುಳ್ಳ ಪಾತ್ರೆಗಳೂ ಆಯುಧಗಳೂ ಅವರ ಪ್ರಗಲ್ಭಾವಸ್ಥೆಗೆ ಸಾಕ್ಷಿಗಳಾಗಿವೆ. ಒಡ್ಡು ಕಟ್ಟಿ ಪ್ರವಾಹವನ್ನು ತಡೆಯುವುದು, ಒಣ ಪ್ರದೇಶಗಳಿಗೆ ನೀರು ಪೂರಯಿಸುವುದು, ಜಲಪರ್ಯಟನಕ್ಕಾಗಿ ನಾವೆ ಕಟ್ಟುವುದು, ಬಗೆಬಗೆಯ ಅಂದವಾದ ಮಣ್ಣಿನ ಪಾತ್ರೆಗಳನ್ನು ಮಾಡುವುದು—ಇವನ್ನೆಲ್ಲ ಅವರು ಬಲ್ಲವರಾಗಿದ್ದರು.

ಇಂದು ಅವರ ವಸತಿ ವಿಂಧ್ಯೆಯ ದಕ್ಷಿಣದಲ್ಲಿ, ವಿಶೇಷವಾಗಿ ಕೃಷ್ಣೆಯ ದಕ್ಷಿಣದಲ್ಲಿ ಇದೆ. ತೆಲುಗು, ಕನ್ನಡ, ತಮಿಳು, ಮಲಯಾಳಿ ಮೊದಲಾದವು ಈ ದ್ರಾವಿಡರ ಭಾಷೆಗಳು. ಈ ದ್ರಾವಿಡರು ಭಾರತಕ್ಕೆ ಹೊರಗಿನಿಂದ ಬಂದವರೇ ಅಥವಾ ಮೂಲತಃ ಇಲ್ಲಿಯವರೇ ಎಂಬ ಬಗೆಗೆ ಮತಭೇದವಿದೆ. ಬಲೂಚಿಸ್ತಾನದಲ್ಲಿ ಬ್ರಾವು ಈ ಭಾಷೆಯಲ್ಲಿ ದ್ರಾವಿಡ ಭಾಷೆಯಲ್ಲಿಯ ಶಬ್ದ ಸಮೂಹಗಳು ಮತ್ತು ವಾಕ್ಪ್ರಚಾರಗಳು ಕ್ವಚಿತ್ತಾಗಿ ಕಂಡುಬರುತ್ತವೆ ಅದಕ್ಕಾಗಿ, ದ್ರಾವಿಡರು ಮಧ್ಯ ಆಶಿಯಾದಿಂದ ಬಲೂಚಿಸ್ತಾನದ ಮಾರ್ಗವಾಗಿ ಇಲ್ಲಿಗೆ ಬಂದರೆಂದು ಕೆಲವರ ಅಭಿಪ್ರಾಯ. ಮೊಹೆಂಜೋದಡೋ ಸಂಶೋಧನೆಯಿಂದ ಈ ಅಭಿಪ್ರಾಯಕ್ಕೆ ಇನ್ನಷ್ಟು ಬಲ ಬಂದಿದೆ. ಇನ್ನು ಕೆಲವರ ಅಭಿಪ್ರಾಯವೆಂದರೆ ದ್ರಾವಿಡರು ಮೂಲತಃ ಇಲ್ಲಿಯ ನಿವಾಸಿಗಳೇ; ಒಂದು ಕಾಲದಲ್ಲಿ ಬಲೂಚಿಸ್ತಾನದವರೆಗೂ ಇವರ ವ್ಯಾಪ್ತಿಯಿತ್ತು,

ಆರ್ಯರ ಆಗಮನದಿಂದ ಹಿಂಪೆ ಸರಿಯುತ್ತ ದಕ್ಷಿಣಕ್ಕೆ ಹೋಗಿರಬೇಕು. ಏನೇ ಇರಲಿ; ದ್ರಾವಿಡರು ಆರ್ಯರಿಗಿಂತ ಮೊದಲು ಈ ದೇಶದಲ್ಲಿದ್ದರು; ಅವರ ಸಂಸ್ಕೃತಿ ಆರ್ಯ ಸಂಸ್ಕೃತಿಗಿಂತ ಭಿನ್ನವಾಗಿದ್ದು, ಬಹಳ ಉಚ್ಚ ದರ್ಜೆಯದಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.

**ಆರ್ಯದ್ರಾವಿಡ ಸಮನ್ವಯ ಅಥವಾ ಹಿಂದುಸಂಸ್ಕೃತಿ** :— ದ್ರಾವಿಡ ಜನತೆಯ ವರ್ಣನೆಯನ್ನೋದಿ, ಆರ್ಯರು ಬಂದ ಸಮಯದಲ್ಲಿ ಕೂಡ ಭಾರತವು ಸರ್ವಸ್ವೀ ಕಾಡುಜನರ ದೇಶವಾಗಿರಲಿಲ್ಲ ಎಂದು ಓದುಗರಿಗೆ ನಂಬುಗೆಯಾಗಿರಲು ಸಾಕು. ಆರ್ಯರಿಗೂ ಅವರ ಸಂಸ್ಕೃತಿಗೂ ಆರ್ಯೇತರರ ಮೇಲೆ ವರ್ಚಸ್ಸನ್ನು ಸ್ಥಾಪಿಸು-ವುದು ಸಾಧ್ಯವಾಯಿತೆಂಬುದು ಮಾತ್ರ ನಿರ್ವಿವಾದ. ಆರ್ಯರಲ್ಲಿ ಪಿತೃಸತ್ತಾತ್ಮಕ ಕುಟುಂಬ ಪದ್ಧತಿಯಿತ್ತು. ಭೂಮಿ–ದನಕರುಗಳು ಅವರವರ ವೈಯಕ್ತಿಕ ಸ್ವಾಮಿತ್ವಕ್ಕೆ ಸೇರಿ-ದ್ದವು. ಒಂದು ಹಳ್ಳಿಯಲ್ಲಿ ಒಂದು ಮಾತ್ರ ಸಾಮೂಹಿಕ ಸ್ವಾಮ್ಯದ ಕ್ಷೇತ್ರವಿರು-ತ್ತಿತ್ತು–ದನಕರುಗಳನ್ನು ಮೇಯಿಸುವುದಕ್ಕಾಗಿ. ಆರ್ಯರ ಶಾಸನ ಸಂಸ್ಥೆ, ನಿರ್ವಾಹ ಸಾಧನಗಳು, ಧರ್ಮಕಲ್ಪನೆಗಳು ದ್ರಾವಿಡರಿಗಿಂತ ಪ್ರಗತಿಪರವಾಗಿದ್ದವು. ದ್ರಾವಿಡ-ರಲ್ಲಿಯ ಬಂಡುಗಾರರು ಕಡ್ಡಾಯದಿಂದ ನಿರ್ಮಾಣಮಾಡಿದ ರಾಜ ಮತ್ತು ರಾಜ್ಯ ಸಂಸ್ಥೆಗಳನ್ನು ಸಾಮಾನ್ಯ ವ್ಯವಹಾರಕ್ಕಾಗಿ ಉಪಯೋಗಿಸಿಕೊಳ್ಳುವುದನ್ನು ಅವರು ತಿಳಿದಿದ್ದರು. ಆರ್ಯರ ಮುಖ್ಯ ಗಣಾಧಿಪನು ಕೋಟೆಯಲ್ಲಿರುತ್ತಿದ್ದನು. ಅಲ್ಲಿ ಅವನು ಗಣಗಳ ಸಭೆಕೂಡಿಸಿ ವಿಚಾರವಿನಿಮಯದಿಂದ ನಿರ್ಬಂಧ (ಕಾಯದೆ) ಗಳನ್ನು ರಚಿಸಿ ರೂಢಿಯಲ್ಲಿ ತರುತ್ತಿದ್ದನು. ಗೋದಿ, ಸಜ್ಜೆ, ಎಣ್ಣೆಕಾಳು ಇತ್ಯಾದಿ ಹಲವು ಧಾನ್ಯಗಳನ್ನು ಅವರು ಕಂಡುಹಿಡಿದಿದ್ದರು: ಶತ್ರುನಾಶಮಾಡುವ ದ್ರಾವಿಡರ ದುರ್ಗೆ ಗಿಂತ ಆರ್ಯರ ಪರಮೇಶ್ವರನ ಕಲ್ಪನೆ ಚರಾಚರಗಳನ್ನೆಲ್ಲ ವ್ಯಾಪಿಸುವಂತಹದಾಗಿತ್ತು. ಆದರೆ, ಎರಡೂ ಸಂಸ್ಕೃತಿಗಳ ಸಮನ್ವಯವನ್ನು ಮಾಡುವಾಗ ಆರ್ಯರು ದ್ರಾವಿಡರ ಶಿವ ಮತ್ತು ಶಕ್ತಿ ದೇವತೆಗಳನ್ನು ಸ್ವೀಕರಿಸಿದರು. ಪೌರಾಣಿಕ ಧರ್ಮದಲ್ಲಿಯಂತೂ ನಾಗಪೂಜೆ, ವೃಕ್ಷಪೂಜೆಗಳಂತಹವೂ ಸೇರಿದವು. ಇದಕ್ಕೆ ಪ್ರತಿಯಾಗಿ, ಆರ್ಯರ ಧರ್ಮವನ್ನೂ ಅವರ ಸಂಸ್ಕೃತ ಭಾಷೆಯನ್ನೂ ದ್ರಾವಿಡರು ಅಂಗೀಕರಿಸಿದರು. ಈ ಬಗೆಯಾಗಿ ಆರ್ಯರ ಮತ್ತು ಮೇಲೆ ವರ್ಣಿಸಿದ ಸಂಸ್ಕೃತಿಯ ದ್ರಾವಿಡರ ಹೆಚ್ಚು ಕಡಿಮೆ ಸಮ್ಮಿಶ್ರಣದಿಂದ ಉತ್ಪನ್ನವಾದ ನಡೆವಳಿಗೆ, ವಿಚಾರಸರಣಿಗೆ, ಧರ್ಮಕಲ್ಪನೆಗಳಿಗೆ, ಮತ್ತು ಸಂಸ್ಕೃತಿಗೆ 'ಹಿಂದು' ಎಂಬ ಹೆಸರು ಉಂಟಾಗಿದೆ.

**ಯುರೋಪದಲ್ಲಿಯ ಆರ್ಯರು ಮತ್ತು ಆರ್ಯರ ಭಾಷೆ** : ಕ್ರಿ. ಪೂ. ೨೦೦೦ ವರ್ಷಗಳ ಸುಮಾರಿಗೆ ಹಿಂದುಸ್ತಾನಕ್ಕೆ ಬಂದ ಆರ್ಯರೂ ಯುರೋಪದಲ್ಲಿ ನೆಲೆಸಲು ಹೋದ ಆರ್ಯನ್ನರೂ ಒಂದೇ ವಂಶದವರಿರಬೇಕೆಂದು ಕೆಲವರ ತಿಳವಳಿಕೆ. ಏಕೆಂದರೆ, ಅವರ ಭಾಷೆಯಲ್ಲಿಯ ಮತ್ತು ವೇದಕಾಲೀನ ಆರ್ಯರ ಸಂಸ್ಕೃತ ಭಾಷೆ ಯಲ್ಲಿಯ ಕೆಲವು ಮಹತ್ವದ ಶಬ್ದಗಳಲ್ಲಿ ವಿಲಕ್ಷಣಸಾಮ್ಯವಿರುವುದು. ಉದಾ :— ಸಂಸ್ಕೃತ ಪಿತೃ ಮತ್ತು ಲಾಟಿನ್ ಪೇಟರ್, ಹಾಗೆಯೇ ಮಾತೃ–ಮೇಟರ್, ಕೇಂದ್ರ–ಸೆಂಟರ್ ಇವುಗಳಲ್ಲಿ ತೀರ ಹೊಂದಿಕೆ ಕಾಣುತ್ತದೆ. ಋಗ್ವೇದಪೂರ್ವಕಾಲೀನ

ಇರಾಣೀ ಭಾಷೆ ಮತ್ತು ಪ್ರಾಚೀನ ಆರ್ಯರ ಭಾಷೆಗಳಲ್ಲಿ ಶಬ್ದಸಾಮ್ಯಮಾತ್ರವೇ ಅಲ್ಲ ಮುಚಗಳಲ್ಲಿಯೂ ಹೋಲಿಕೆ ಕಂಡುಬರುತ್ತವೆ. ಈ ಬಗೆಯ ಶಬ್ದಸಾದೃಶ್ಯವು ದ್ರಾವಿಡ ವರ್ಗೀಯ ಭಾಷೆ ಮತ್ತು ಭಾರತ ಬಾಹಿರ ಭಾಷೆಗಳಲ್ಲಿ ಕಂಡುಬರುವುದಿಲ್ಲ. ಆದರೆ ಕೇವಲ ಭಾಷಾಸಾದೃಶ್ಯದಿಂದಲೇ ಅವುಗಳನ್ನಾಡುವವರು ಒಂದೇ ವಂಶದವರೆಂದು ಸಿದ್ಧವಾಗಲಾರದು. ಈಗಲೂ ಭಿನ್ನ ಭಿನ್ನ ವಂಶಗಳ ಜನರು ಇಂಗ್ಲಿಷನ್ನೋ ಕನ್ನಡವನ್ನೋ ಮಾತನಾಡುತ್ತಾರೆ. ಆದರೆ, ಇದರಿಂದ ಒಂದಕ್ಕೊಂದು ಸದೃಶವಾಗಿರುವ ಭಾಷೆಗಳನ್ನಾಡುವ ಜನರ ಪೂರ್ವಜರು ಒಂದಾನೊಂದು ಕಾಲದಲ್ಲಿ ನೆರೆಹೊರೆಯಾಗಿ ವಾಸಿಸಿರಬಹುದೆಂದು ಊಹಿಸಬಹುದು; ಅಷ್ಟೆ.

**ಆರ್ಯ-ದ್ರಾವಿಡ ಭಾಷೆಗಳು ಮತ್ತು ಲಿಪಿ:—** ಆರ್ಯರ ಭಾಷೆ ಭಾರತದಲ್ಲಿ ಎಲ್ಲೆಡೆಗೂ ತನ್ನ ಪ್ರಭಾವ ಬೀರಿತೆಂಬುದು ನಿರ್ವಿವಾದ. ಇಂದು ಭಾರತದಲ್ಲಿ ಬಳಿಕೆಯಲ್ಲಿರುವ ಹದಿನಾಲ್ಕು ಭಾಷೆಗಳಲ್ಲಿ ಮೂರು ಮುಖ್ಯ ವರ್ಗಗಳಾಗುತ್ತವೆ. ಮೊದಲನೆಯದಾಗಿ ಸಂಸ್ಕೃತ ಮತ್ತು ಸಂಸ್ಕೃತೋದ್ಭವ ಭಾಷೆಗಳ ವರ್ಗ ದೊಡ್ಡದು; ಇದರಲ್ಲಿ ಒಂಬತ್ತು—ಆಸಾಮಿ, ಬಂಗಾಲಿ, ಗುಜರಾಥಿ, ಹಿಂದೀ, ಕಾಶ್ಮೀರಿ, ಮರಾಠಿ, ಉಡಿಯಾ, ಪಂಜಾಬಿ ಮತ್ತು ಮೂಲ ಸಂಸ್ಕೃತ-ಭಾಷೆಗಳಸೇರ್ಪಡೆಯಾಗುತ್ತವೆ. ದ್ರಾವಿಡೀಯ ಭಾಷಾವರ್ಗ ಎರಡನೆಯದು; ಕನ್ನಡ, ತೆಲುಗು, ತಮಿಳು, ಮಲೆಯಾಳಮ್ ಈ ನಾಲ್ಕು ಭಾಷೆಗಳು ಈ ಗುಂಪಿನವು. ಆದರೆ ಈ ಮಾತುಗಳನ್ನಾಡುವವರು ಕೂಡ ಧರ್ಮವನ್ನು ತಿಳಿದುಕೊಳ್ಳುವುದಕ್ಕಾಗಿಸಂಸ್ಕೃತವನ್ನು ಅರಿತುಕೊಳ್ಳಬೇಕಾಗುತ್ತದೆ. ಉರ್ದು ಭಾಷಿಕರದು ಮೂರನೆಯ ವರ್ಗ. ಈ ಭಾಷೆ ಬಹುಮಟ್ಟಿಗೆ ಹಿಂದಿಯಂತೆ ಇದ್ದರೂ ಇದರಲ್ಲಿ ಅರಬೀ ಮತ್ತು ಫಾರಸೀ ಶಬ್ದಗಳ ವಿಶೇಷ ಬಾಹುಲ್ಯವಿದೆ. ಸಂಸ್ಕೃತದ ಲಿಪಿಯಾದ ದೇವನಾಗರಿ ಅತ್ಯಂತ ಶಾಸ್ತ್ರಶುದ್ಧವಾದದ್ದು. ಹಿಂದೀ, ಮರಾಠಿ, ಕಾಶ್ಮೀರಿ ಭಾಷೆಗಳು ಅದನ್ನೇ ಬಳಸುತ್ತಿವೆ. ಬಂಗಾಲಿ, ಗುಜರಾಥಿ ಲಿಪಿಗಳು ಬಹ್ವಂಶದಿಂದ ದೇವನಾಗರಿಯ ಮಾದರಿಯಲ್ಲೇ ಇವೆ. ದ್ರಾವಿಡ ಭಾಷೆಗಳ ಬರವಣಿಗೆ ಮಾತ್ರ ತೀರ ಬೇರೆ; ಆದರೆ ಎಲ್ಲವುಗಳ ವರ್ಣಮಾಲೆ (ಅಕ್ಷರಗಳ ಹೆಸರು

| | | | | | |
|---|---|---|---|---|---|
| **ನಾಗರಿ** | अ | उ | क | का | कि |
| **ಗುಜರಾಥಿ** | અ | ઉ | ક | કા | કિ |
| **ಗುರುಮುಖಿ** | ਅ | ਉ | ਕ | ਕਾ | ਕਿ |
| **ಬಂಗಾಲಿ** | অ | উ | ক | কা | কি |
| **ಉಡಿಯಾ** | ଅ | ଉ | କ | କା | କି |
| **ತೆಲಗು** | అ | ఉ | క | కా | కి |
| **ಕನ್ನಡ** | ಅ | ಉ | ಕ | ಕಾ | ಕಿ |
| **ತಮಿಳು** | அ | உ | க | கா | கி |
| **ಮಲೆಯಾಳಿ** | അ | ഉ | ക | കാ | കി |

ಭಾರತೀಯ ವರ್ಣಮಾಲೆಯ ಭಾಷಾನ್ವಯ

ಮತ್ತು ಸಂಖ್ಯೆ) ಒಂದೇ ಆಗಿದೆ. ಇವೆಲ್ಲವುಗಳಲ್ಲಿಯೂ ಕಾಗುಣಿತ ಪದ್ಧತಿ ಇದೆ. ಅದೇಕೆ, ದೇವನಾಗರಿ ಮತ್ತು ದ್ರಾವಿಡ ಲಿಪಿಗಳೆಲ್ಲವೂ ಒಂದೇ ಮೂಲ ಬ್ರಾಹ್ಮೀ ಲಿಪಿಯ ರೂಪಾಂತರಗಳಿರಬೇಕೆಂದು ತಜ್ಞರ ಅನುಮಾನವಿದೆ. ಭಾರತದ ಹೊರಗಿನ ಬ್ರಹ್ಮೀ, ತಿಬೇಟ ಮತ್ತು ಕಾಂಬೋಜಿ ಭಾಷೆಗಳೂ ಭಾರತೀಯ ವರ್ಣಮಾಲೆಯನ್ನು ಅಂಗೀಕರಿಸಿದವು. ಉರ್ದೂ ಭಾಷೆಯ ಲಿಪಿ ಮತ್ತು ವರ್ಣಮಾಲೆಗಳೆರಡೂ ದೇವನಾಗರಿಯಿಂದ ಸಂಪೂರ್ಣ ಬೇರೆಯಾಗಿವೆ.

**ಭಾರತದಲ್ಲಿಯ ಇತರ ಜನಗಳು :** ದ್ರಾವಿಡರು ಮತ್ತು ಆರ್ಯರ ಹೊರತು ಭಿಲ್ಲರು, ಸಂಥಾಳರು, ಜಾಲಗಾರರು, ಬೇಡರು ಮೊದಲಾದ ಆಯುಧೋಪಜೀವಿಗಳಾದ ಕಾಡುಜನರ ತಂಡಗಳು ಇತಿಹಾಸ ಪೂರ್ವಕಾಲದಿಂದ ಈ ದೇಶದಲ್ಲಿ ಬೇರೆ ಬೇರೆ ಭಾಗಗಳಲ್ಲಿ ವಾಸವಾಗಿದ್ದವು. ಅವರೀಗ ಗುಡ್ಡಗಳ ದರಿಕಂದರಗಳಲ್ಲಿ ಇರುತ್ತಾರೆ. ಗ್ರಂಥಕರ್ತರು ಅವರನ್ನೇ 'ಅನಾರ್ಯ' ಎಂದು ಸಂಬೋಧಿಸಿದ್ದಾರೆ. ಈಗವರಿಗೆ 'ಆದಿ ದ್ರಾವಿಡ' ಎಂದು ಎನ್ನುತ್ತಾರೆ. ಇವರಲ್ಲದೆ ಕ್ರಿ. ಪೂ. ದ ಎರಡನೆಯ ಶತಕದಿಂದ ಪಾರ್ಥಿಯನ್, ಶಕ, ಹೂಣ, ಕುಶಾನ ಇತ್ಯಾದಿ ಜನರ ಗುಂಪುಗಳು. ಕ್ರಿ. ಪೂ. ಎರಡನೆಯ ಶತಕದಿಂದ ಕ್ರಿ. ಶ. ೫-೬ನೆಯ ಶತಕದ ವರೆಗೂ ಭಿನ್ನ ಭಿನ್ನ ಕಾಲಗಳಲ್ಲಿ ಇಲ್ಲಿಗೆ ಬಂದವು. ಮತ್ತು ಹಿಂದೂ ಸಂಸ್ಕೃತಿಯಲ್ಲಿ ಸಮಾವಿಷ್ಟವಾದವು. ಮುಂದೆ ಎರಡನೆಯ ಶತಕದಲ್ಲಿ ಇರಾಣದಲ್ಲಿದ್ದ ಝುರತುಷ್ಟ್ರ ಪಂಥದ ಪಾರಶಿಕರು ಅಥವಾ ಪಾರ್ಸಿಗಳು ಕ್ರಿ. ಶ. ೭೦೦ರಲ್ಲಿ ಇಲ್ಲಿಗೆ ಬಂದರು. ಅವರು ಮೂಲತಃ ಅಲ್ಲಿಯ ನಿವಾಸಿಗಳೆನ್ನುತ್ತಾರೆ. ಆ ಬಳಿಕ ಶೀಘ್ರದಲ್ಲಿಯೇ ಮುಸಲ್ಮಾನರ ಪ್ರವೇಶವಾಯಿತು. ಹದಿನಾರನೆಯ ಶತಕದಲ್ಲಿ ಪೋರ್ತುಗೀಜರ ಪ್ರವೇಶವಾದ ನಂತರ, ಕ್ರೈಸ್ತರ ಆಗಮನಕ್ಕೆ ಆರಂಭವಾಯಿತು. ಆದರೆ, ಇಂದಿಗೂ ಈ ದೇಶದಲ್ಲಿ ಹಿಂದೂ ಸಂಸ್ಕೃತಿಯ ಜನಸಂಖ್ಯೆ ತದಿತರರಿಗಿಂತ ಬಹಳ ದೊಡ್ಡದಿದೆ.

## ಪ್ರಶ್ನೆಗಳು

೧. ವೇದಕಾಲೀನ ಆರ್ಯರ ಕೆಳಗಿನ ವಿಷಯಗಳ ಬಗ್ಗೆ ಮಾಹಿತಿ ಬರೆಯಿರಿ :
(೧) ಆರ್ಯರ ಗ್ರಂಥ, (೨) ಸಾಮಾಜಿಕ ರೀತಿನೀತಿ, (೩) ಧರ್ಮ.

೨. ಆರ್ಯರ ಮತ್ತು ದ್ರಾವಿಡರ ರೀತಿನಡತೆಗಳಿಂದ ಪರಸ್ಪರರ ಮೇಲಾದ ಪರಿಣಾಮಗಳು ಯಾವುವು ?

# ೫. ಇರಾಣ ಮತ್ತು ಭಾರತ

**ಇರಾಣ-ಭಾರತಗಳು ಅಣ್ಣತಮ್ಮಂದಿರು :** ಇರಾಣ ಮತ್ತು ಭಾರತಗಳಲ್ಲಿ ಪ್ರಾಚೀನ ಕಾಲದಲ್ಲಿ ಹೇಗೆ ಸಂಬಂಧವುಂಟಾಯಿತೆಂಬುದನ್ನು ಇಲ್ಲಿ ವಿವೇಚಿಸಬೇಕಾಗಿದೆ. ಸುಮಾರು ಮುನ್ನೂರು ವರುಷಗಳ ಹಿಂದೆ ಇರಾಣದ ಒಬ್ಬ ವ್ಯಾಪಾರಿಯ ಮಗಳು ಮೆಹರುನ್ನಿಸಾ ಎಂಬವಳು ದಿಲ್ಲಿಯ ಮೊಗಲ ಬಾದಶಹನಾದ

ಜಹಾಂಗೀರನ ರಾಣಿಯಾದಳು. ಅವಳಿಗೆ ನೂರಜಹಾನ್ ಎಂದು ಹೆಸರಾಯಿತು. ಅವಳು ಮೊಗಲ ಬಾದಶಾಹಿಯ ವೈಭವಕ್ಕೆ ವಿಲಾಸದ ಮತ್ತು ದರ್ಬಾರೀ ರೀತಿಯನ್ನು ತಂದುಕೊಟ್ಟಳು. ಇದಕ್ಕೂ ಮೊದಲು ಅಕಬರನ ತಂದೆ ಹುಮಾಯೂನನಿಗೆ, ಕಳೆದುಕೊಂಡ ತನ್ನ ದಿಲ್ಲೀ ರಾಜ್ಯವನ್ನು ಪುನಃ ದೊರಕಿಸುವುದಕ್ಕೆ ಇರಾಣದ ಬಾದಶಾಹನ ಸಹಾಯ ದೊರಕಿತು. ಸುಮಾರು ಇನ್ನೂರು ವರ್ಷಗಳ ಪೂರ್ವದಲ್ಲಿ ಇರಾಣದ ಬಾದಶಾಹನಾದ ನಾದೀರಶಾಹನು ಕ್ರಿ. ಶ. ೧೭೩೯ರಲ್ಲಿ ಭಾರತದ ಮೇಲೆ ದಾಳಿಮಾಡಿ ಬಹಳವಾಗಿ ಸುಲಿಗೆ ಮಾಡಿಕೊಂಡು ಹೋದನು. ಆ ಸುಲಿಗೆಯಲ್ಲಿ ದಿಲ್ಲಿಯ ಬಾದಶಾಹಿಯ ಮಯೂರ ಸಿಂಹಾಸನವೂ ಕೊಹಿನೂರ ರತ್ನವೂ ಹೋದವು. ಮೊಗಲ ಸತ್ತೆಯ ವೈಭವವನ್ನು ತುರ್ಕಿಯೋಧರೂ ಇರಾಣೀ ಮುತ್ಸದಿಗಳೂ ಹೆಚ್ಚಿಸಿದರು.

ಆದರೆ ಇವೆಲ್ಲ ಈಚೆಯ ಇನ್ನೂರು ಮುನ್ನೂರು ವರುಷಗಳಲ್ಲಿಯ ಮಾತು. ಇವುಗಳಿಂದ ಇರಾಣ-ಭಾರತ ಸಂಬಂಧದ ಯಥಾರ್ಥ ಕಲ್ಪನೆ ಬರಲಾರದು. ಮೊಗಲರಿಗಿಂತಲೂ ಮುಂಚೆ ಎಂದರೆ ಸುಮಾರು ೧೨೦೦ ವರುಷಗಳ ಹಿಂದೆ, ಕ್ರಿ. ಶ. ೭೧೭ರಲ್ಲಿ-ಇರಾಣಿಗಳ ಒಂದು ಗುಂಪು ಭಾರತದ ಪಶ್ಚಿಮ ಸಮುದ್ರ ತೀರದ ಸಂಜಾಣಾ ಬಂದರದಲ್ಲಿ ಬಂದಿಳಿಯಿತು. ಅವರು ಪಾರಸಿಕರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರು. ಭಾರತದಲ್ಲಿರುವ ಪಾರಸಿಗಳು ಅವರ ವಂಶಜರು. ಇರಾಣ ಭಾರತಗಳ ಪರಸ್ಪರ ಸಂಬಂಧ ಇದಕ್ಕಿಂತಲೂ ಬಹಳ ಪೂರ್ವದ್ದು; ಅಂದರೆ, ಕನಿಷ್ಠ ಎರಡು ಸಾವಿರ ವರುಷಗಳಷ್ಟು ಹಿಂದಿನದು. ಇರಾಣಿಗಳು ಮತ್ತು ವೇದಕಾಲದ ಭಾರತೀಯರು ಇಬ್ಬರೂ ಮೂಲದಲ್ಲಿ ಆರ್ಯರು. ಇಷ್ಟೇ ಅಲ್ಲ, ಯುರೋಪದಲ್ಲಿ ಗ್ರೀಸ ಮತ್ತು ರೋಮಗಳಿಗೆ ಹೋಗಿ ಅಲ್ಲಿ ತಮ್ಮ ಕರ್ತೃತ್ವದಿಂದ ಪ್ರಸಿದ್ಧಿಗೆ ಬಂದ ಜನರೂ ಆರ್ಯರೇ. ಆರ್ಯರು ಮೊದಲು ಕಾಕೇಶಸ್ ಪರ್ವತದ ಉತ್ತರದ ಬದಿಯಿಂದ ಹೊರಟರು. ಅವರ ಒಂದು ಗುಂಪು ಯುರೋಪಿಗೆ ಹೋಯಿತು; ಇನ್ನೊಂದು ಗುಂಪು ಕೆಲಕಾಲ ಮಧ್ಯ ಆಸಿಯದಲ್ಲಿ ಇದ್ದು, ಇಬ್ಭಾಗವಾಯಿತು. ಅವುಗಳಲ್ಲೊಂದು ಇರಾಣದಲ್ಲಿ ನೆಲಸಿ ಉದಯಕ್ಕೆ ಬಂದಿತು. ಇನ್ನೊಂದು ಭಾರತದಲ್ಲಿ ಪ್ರವೇಶಿಸಿತು. ಇದರಿಂದ, ಇರಾಣಿಗಳೂ ಭಾರತೀಯರೂ ಮೂಲತಃ ಒಡಹುಟ್ಟಿದವರು, ಪ್ರಾಚೀನ ಕಾಲದಲ್ಲಿ ನೆರೆಹೊರೆಯಲ್ಲಿ ವಾಸಿಸಿದವರು ಎಂಬುದು ವ್ಯಕ್ತವಾಗುತ್ತದೆ. ಈಗ ಭೂಪಟದಲ್ಲಿ ಕಾಣುವ ಅಫಗಾಣಿಸ್ತಾನ-ಬಲೂಚಿಸ್ತಾನಗಳ ಪ್ರದೇಶವು ಕ್ರಿ. ಪೂ. ದ ಐದನೆಯ ಶತಕದಲ್ಲಿ ಇರಾಣ ಮತ್ತು ಭಾರತ ರಾಜ್ಯಗಳಲ್ಲಿ ಗಣಿಸಲ್ಪಡುತ್ತಿದ್ದವು; ಮತ್ತು ಕುಭಾ ಅಥವಾ ಕಾಬೂಲ ನದಿ ಎರಡೂ ರಾಜ್ಯಗಳ ಗಡಿ ಗೆರೆಯಾಗಿತ್ತು.

**ಪ್ರಾಚೀನ ಸಂಬಂಧದ ಪ್ರಮಾಣಗಳು :** ಇರಾಣ-ಭಾರತಗಳ ಪ್ರಾಚೀನ ಪರಸ್ಪರ ಸಂಬಂಧದ ಬಗ್ಗೆ ಈಗ ಅನೇಕ ಪ್ರಮಾಣಗಳು ದೊರೆಯತೊಡಗಿವೆ. ಇರಾಣಿಗಳ ಪ್ರಾಚೀನ ಪೆಹಲವೀ ಭಾಷೆ ಮತ್ತು ವೈದಿಕ ಸಂಸ್ಕೃತ ಭಾಷೆಗಳೊಳಗಿನ

ಒಂದಕ್ಕೊಂದು ಸಮಾನವಾಗಿರುವ ಸುಮಾರು ಒಂಬೂವರೆ ಸಾವಿರ ಶಬ್ದಗಳನ್ನು ಜ್ಞಾನಕೋಶದಲ್ಲಿ ಕೊಟ್ಟಿದ್ದಾರೆ (ಪ್ರಸ್ತಾವನಾ ಸಂಪುಟ, ಭಾಗ ೩; ಉತ್ತರಾರ್ಧ; ಪುಟ ೧೦೧–೧೦೬). ಈ ಶಬ್ದಗಳಲ್ಲಿ ತಾಯಿ, ತಂದೆ, ಸೋದರಗಳಂತಹ ಹತ್ತಿರದ ನಂಟಿನ ಶಬ್ದಗಳಂತೂ ಯುರೋಪಿಗೆ ಹೋದ ಆರ್ಯರ ಲ್ಯಾಟಿನ್ ಭಾಷೆಯಲ್ಲಿಯೂ ಸಂಸ್ಕೃತ ದಲ್ಲಿಯೂ ಒಂದೇ ಹೋಲಿಕೆಯವಾಗಿವೆ. ಮೇಲೆ ಉಲ್ಲೇಖಿಸಿದ ಒಂಬೂವರೆ ಸಾವಿರ ಶಬ್ದಗಳಲ್ಲಿ ಈ ಆಪ್ತತ್ವ ಶಬ್ದಗಳು ಮಾತ್ರವಲ್ಲ, ಸಂಖ್ಯೆ, ಪ್ರಾಣಿ, ಋತು, ನಿರ್ಜೀವ-ಸಜೀವ ಪದಾರ್ಥಗಳು, ಕ್ರಿಯಾಪದಗಳು, ಸೃಷ್ಟಿದೇವತೆ-ಹೀಗೆ ವಿವಿಧ ಕ್ಷೇತ್ರಗಳಲ್ಲಿಯ ಶಬ್ದಗಳೂ ಬಂದಿವೆ. ಜಗತ್ತಿನೊಳಗಿನ ಬೇರೆ ಯಾವ ಭಾಷೆಯೊಡನೆಯೂ ಸಂಸ್ಕೃತ ಭಾಷೆಯ ಸಾಮ್ಯ ಇಷ್ಟೊಂದಿಲ್ಲ. ಈ ಭಾಷಾಪ್ರಮಾಣವಲ್ಲದೆ ಇನ್ನೊಂದು ಪ್ರಮಾಣವು ಹ್ಯೂಗೋ ವಿಂಕ್ಲೇರ್ ಎಂಬ ಜರ್ಮನ್ ಸಂಶೋಧಕನಿಗೆ ಕ್ರಿ. ಶ. ೧೯೦೭ರಲ್ಲಿ ಸಿಕ್ಕಿದೆ. ಆಶಿಯಾ ಮಾಯನರದ ಈಶಾನ್ಯದಲ್ಲಿ ಬೋಘಜಕೋಯೀ ಎಂಬ ಊರಲ್ಲಿ ಒಂದು ಲೇಖನವು ಉಪಲಬ್ಧವಾಗಿದೆ. ಅಲ್ಲಿಯ ಮಿಟಾನಿ ಮತ್ತು ಹಿಟಾಯಿಟ್ ಜನಗಳಲ್ಲಿ ನಡೆದ ಯುದ್ಧದ ನಂತರ ಆದ ಒಪ್ಪಂದದ ಕರಾರುಗಳು ಅದರ ಲ್ಲಿವೆ; ಅದರಲ್ಲಿ, ಮಿ-ಇತ-ರ (ಮಿತ್ರ), ಉರೂವಣ (ವರುಣ), ಇಂದರ (ಇಂದ್ರ), ನಸ-ಅತತೀಯಾ (ನಾಸತ್ಯ-ಎಂದರೆ ಅಶ್ವಿನೀಕುಮಾರ) ಈ ದೇವತೆಗಳ ಸಾಕ್ಷಿ ಕೊಡಲಾಗಿದೆ. ಈ ಒಪ್ಪಂದದ ಐತಿಹಾಸಿಕ ಅಂಶದ ವಿಷಯ ಸದ್ಯ ನಮಗೆ ಬೇಕಿಲ್ಲ. ದೇವತೆಗಳ ಈ ಹೆಸರುಗಳು ಅವೆಸ್ತಾ ಭಾಷೆಗಿಂತ ಸಂಸ್ಕೃತ ಭಾಷೆಗೆ ಹೆಚ್ಚು ಹೊಂದು ವಂತಹವಾಗಿವೆ. ಈ ಲೇಖನದ ಕಾಲ ಕ್ರಿ. ಪೂ. ೧೪೦೦ ವರ್ಷ. ಇದರಿಂದ, ಇರಾಣಿ ಗಳ ಮತ್ತು ಭಾರತೀಯರ ಮೂಲಭಾಷೆ ಸಂಸ್ಕೃತವಾಗಿದ್ದಿತೆಂದೂ ಮುಂದೆ ಇರಾಣಿ ಗಳ ಅವೆಸ್ತಾ ಪಹೆಲವೀ ಭಾಷೆ ಕಾಲವಶದಿಂದ ಸಂಸ್ಕೃತದಿಂದ ಭಿನ್ನವಾಗಿರಬೇಕೆಂದೂ ತರ್ಕ ಹೊರಡುತ್ತದೆ ಅವೆಸ್ತಾದಲ್ಲಿಯ ವಚನಗಳನ್ನು ಸಂಗ್ರಹಿಸಿದ ಝರತುಷ್ಟ್ರನ ಕಾಲವು ಕ್ರಿ. ಪೂ. ಸುಮಾರು ೧೦೦೦ ವರುಷವೆಂದು ತಿಳಿಯಲಾಗಿದೆ. ಇರಾಣಿ ಧರ್ಮಗ್ರಂಥವಾದ ಅವೆಸ್ತಾ, ಬಾಯಬಲಿನಂತೆ ಅಥವಾ ಕುರಾಣದಂತೆ ಧರ್ಮ ಸಂಸ್ಥಾಪಕನ ಮತ್ತು ಆವನ ಸಂಪ್ರದಾಯದ ಬಗ್ಗೆ ಮಾಹಿತಿ ಕೊಡುವ ಗ್ರಂಥವಾಗಿಲ್ಲ. ದೇವತಾಸ್ತುತಿಪರವಾದ ಋಚಗಳು ಅದರಲ್ಲಿವೆ. ಅವೆಸ್ತಾದಲ್ಲಿ ಯಸ್ನ ಎಂಬ ಒಂದು ಭಾಗವಿದೆ. ಅದರಲ್ಲಿ ಹ-ಓಮ್ ಯಜ್ಞದ ವಿಧಿಯನ್ನು ಹೇಳಲಾಗಿದೆ. ಅದಕ್ಕೂ ವೈದಿಕ ಕಾಲದಲ್ಲಿಯ ಸೋಮಯಜ್ಞಕ್ಕೂ ಬಹಳ ಸಾಮ್ಯವುಂಟು. ವೇದಗಳಲ್ಲಿಯ ಮಿತ್ರ, ಅರ್ಯಮನ್, ವಾಯು, ಉಷಸ್, ವರೇಥ್ರುಘ್ನ ಎಂಬ ಹೆಸರುಗಳಿಂದ ಕಾಣಿಸಿ ಕೊಳ್ಳುತ್ತಾರೆ.

**ರೀತಿನಡತೆಗಳಲ್ಲಿಯ ಸಾಮ್ಯ** : ಇರಾಣ ಭಾರತಗಳ ಭಾಷೆ, ದೇವತೆಗಳು, ಪ್ರದೇಶ ಈ ವಿಷಯಗಳಲ್ಲಿದ್ದಂತೆ ಎರಡೂ ಜನಾಂಗಗಳ ಸಾಮಾಜಿಕ ರೀತಿನಡತೆಗಳ ಲ್ಲಿಯೂ ಸಾಮ್ಯವು ಕಂಡುಬರುತ್ತದೆ. ಇರಾಣೀ ಜನರಲ್ಲಿ ಹುಡುಗರು,—ಹುಡುಗಿ ಯರು ಕೂಡ ದೊಡ್ಡವರಾದ ಬಳಿಕ ಪವಿತ್ರಸೂತ್ರಧಾರಣೆಯ ವಿಧಿಯನ್ನು ಜರು

ಗಿಸುವುದುಂಟು. ಇಲ್ಲಿ ವೈದಿಕ ಆರ್ಯರ ಉಪನಯನ ವಿಧಿಯ ಸಾಮ್ಯವು ಒಡೆದು ಕಾಣುತ್ತದೆ. ಮದುವೆಯಾದ ಬಳಿಕ ವಧುವನ್ನು ಅಲಂಕರಿಸಿ ಮೆರೆಸುತ್ತ ಗಂಡನ ಮನೆಗೆ ಕಳಿಸುವುದು, ಮನೆಯ ಆಡಳಿತದಲ್ಲಿ ಗಂಡಹೆಂಡರಿಬ್ಬರಿಗೂ ಸಮಾನದರ್ಜೆ, ಮಲಗಿ ಎದ್ದಾಗ, ಉಣ್ಣುವಾಗ ಹಾಗು ರಾತ್ರಿಯಲ್ಲಿ ದೇವರ ಪ್ರಾರ್ಥನೆ;—ಎರಡೂ ಜನಾಂಗಗಳಲ್ಲಿಯ ರೀತಿ-ನಡತೆಗಳ ಸಾಮ್ಯಕ್ಕೆ ಇಂತಹ ಅನೇಕ ಉದಾಹರಣೆಗಳನ್ನು ಕೊಡಬಹುದು. ಪಾರಸಿಗಳ ದೇವರಿಗೆ ಅಹುರಮರಿಲ್ಲಿ ಎಂಬ ಹೆಸರಿದೆ. ಋಗ್ವೇದದಲ್ಲಿ ಅಸುರಮಹನ್ ಎಂಬ ಶಬ್ದವಿದೆ. ಅಹುರ ಎಂಬುದು ಅಸುರ ಎಂಬುದರ ರೂಪಾಂತರವಾಗಿದೆ. ಈ ಎಲ್ಲ ವಿವೇಚನೆಯಿಂದ ಹೊರಡುವ ನಿಷ್ಕರ್ಷವೇನೆಂದರೆ—ಪಾರಸಿಗಳ ಮತ್ತು ಭಾರತೀಯ (ಆರ್ಯ)ರ ಪೂರ್ವಜರು ಮೊದಲು ಒತ್ತಟ್ಟಿಗೇ ಇದ್ದವರು, ಒಂದೇ ಧರ್ಮವನ್ನು ಪಾಲಿಸುವವರು, ಒಂದೇ ದೇವದೇವತೆಗಳ ಪೂಜೆ ಮಾಡುವವರು ಮತ್ತು ಒಂದೇ ಭಾಷೆಯನ್ನು ಮಾತಾಡುವವರು ಆಗಿದ್ದರು. ಕಾಲಾಂತರದಲ್ಲಿ ಆರ್ಯರ ಒಂದು ಗುಂಪು ಇರಾಣದಲ್ಲಿ ನಿಂತಿತು, ಇನ್ನೊಂದು ಭಾರತದ ಕಡೆಗೆ ಬಂದಿತು. ಮತ್ತು ಅವರ ದೇವತೆಗಳಲ್ಲಿ ವ್ಯತ್ಯಾಸಗಳಾದವು. ಇರಾಣದಲ್ಲಿ ಇದ್ದವರು ಅಹುರ ಅಥವಾ ಅಸುರರನ್ನು ಪೂಜಿಸತೊಡಗಿದರು; ಭಾರತದ ಕಡೆಗೆ ವಿಜಿಗೀಷರಾಗಿ ಬಂದ ಆರ್ಯರು ದೇವರ ಪೂಜೆಯನ್ನು ಮೊದಲಿನಂತೆಯೆ ಮುಂದುವರಿಸಿದರು. ಮುಂದಿನ ಕಾಲದಲ್ಲಿ ಇರಾಣಿಗಳೂ ಭಾರತೀಯರೂ ತಮ್ಮ ಬಾಂಧವ್ಯವನ್ನು ಮರೆತುಬಿಟ್ಟರು. ಭಾರತೀಯರು ಅಸುರರನ್ನು ಮಾನವತೆಯ ಶತ್ರುಗಳೆಂದು ಎಂದರೆ ರಾಕ್ಷಸರೆಂದು ತಿಳಿಯತೊಡಗಿದರು. ಈ ಕಾಲದಲ್ಲಿ ಇರಾಣೀ ಜನಗಳಿಂದ ಜಾದು-ಮಾಟ ಮತ್ತು ಮಂತ್ರ ತಂತ್ರಗಳನ್ನು ಭಾರತೀಯರು ಸ್ವೀಕರಿಸಿದರು, ಮತ್ತು ತದ್ವಿಷಯಕವಾದ ಶಬ್ದಗಳನ್ನು ತಮ್ಮ ಭಾಷೆಯಲ್ಲಿ ತೆಗೆದುಕೊಂಡರು. ಇರಾಣದಲ್ಲಿ ಝುರತುಷ್ಟ್ರನು 'ದೇವನು ಒಬ್ಬನೆ' ಎಂದು ಜನರಿಗೆ ಬೋಧಿಸಿದನು. ಭಾರತೀಯರು ಸಪ್ತಸಿಂಧುವಿನ ಪ್ರಾಂತದಲ್ಲಿ ಸ್ಥಿರವಾದ ಬಳಿಕ ಅವರಿಗೂ ದೇವರು ಒಬ್ಬನೇ ಎಂಬ ಅರಿವಾಯಿತು. ಜೀವನ ಅನೇಕತ್ವದಿಂದ ಏಕತ್ವದ ಕಡೆಗೆ ಸಾಗುವ ಮಾನವ ಸಂಸ್ಕೃತಿಯ ವಿಕಾಸವು ಈಜಿಪ್ತು, ಪಲೆಸ್ತಾಯಿನ್, ಇರಾಣ ಮತ್ತು ಭಾರತ ಈ ಎಲ್ಲ ಕಡೆಗಳಲ್ಲಿಯೂ ಒಂದೇ ರೀತಿ ಕಂಡುಬರುತ್ತದೆ.

**ಝುರತುಷ್ಟ್ರ ಮತ್ತು ಅವನ ಉಪದೇಶ:** ಇರಾಣೀ ಜನತೆಗೆ ತನ್ನ ಕರ್ತೃತ್ವದಿಂದ ವೈಶಿಷ್ಟ್ಯವನ್ನು ತಂದುಕೊಟ್ಟವನೆಂದರೆ ಝುರತುಷ್ಟ್ರನು. ಅವನು ಕ್ರಿ. ಪೂ. ೧೦೦೦ದ ಸುಮಾರಿಗೆ ಆಗಿಹೋದನು. ಪ್ರಾಚೀನ ಇರಾಣಿ ಅಥವಾ ಪಾರಸಿ ಧರ್ಮದ ಸಂಸ್ಥಾಪಕನು ಆತನು. ಅವನನ್ನು ಕುರಿತು ಅನೇಕ ದಂತ ಕಥೆಗಳು ಇರಾಣಿ ಗ್ರಂಥದಲ್ಲಿ ದೊರೆಯುತ್ತವೆ. ಅವನು ಹುಟ್ಟಾಗ ಅಳುವದಕ್ಕೆ ಬದಲು ನಗುತ್ತಿದ್ದನೆಂದು ಹೇಳುತ್ತಾರೆ. ಅವನು ದೊಡ್ಡವನಾದ ಮೇಲೆ ತಂದೆ ತಾಯಿಗಳು ಅವನ ಮದುವೆಗೆ ತೊಡಗಿದರು. ವರನು ವಧುವನ್ನು ಮೊದಲು ನೋಡುವ ರೂಢಿ ಆಗ ಇರಲಿಲ್ಲ. ಆದರೆ ಝುರತುಷ್ಟ್ರನು ಹಟದಿಂದ, ಗೊತ್ತಾದ ಹೆಣ್ಣನ್ನು ನೋಡಿದ

ಹೊರತು ತಾನು ಮದುವೆಗೆ ನಿಲ್ಲುವುದಿಲ್ಲವೆಂದನು. ಈ ದಂತಕಥೆಯನ್ನು ಯಾರೂ ನಂಬಲಿಕ್ಕಿಲ್ಲ; ಆದರೆ, ಝುರತುಷ್ಟ್ರನು ಪ್ರಚಲಿತ ರೂಢಿ-ವಾಡಿಕೆಗಳ ವಿರುದ್ಧ ಧೈರ್ಯದಿಂದ ಎದುರು ನಿಲ್ಲುವ ಬಂಟನಾಗಿದ್ದನೆಂಬುದು ಮಾತ್ರ ಸಿದ್ಧವಾಗುತ್ತದೆ. ಇರಾಣಿಗಳು ಅನೇಕ ದೇವದೇವತೆಗಳನ್ನು ಪೂಜಿಸುತ್ತಿದ್ದರು. ಅದನ್ನು ಅವನು ನಿಷೇಧಿಸಿದನು; ದೇವರು ಒಬ್ಬನೇ ಎಂದು ಜನರಿಗೆ ಹೇಳತೊಡಗಿದನು. ಝುರತುಷ್ಟ್ರನ ಮಾತಿನ ಪರಿಣಾಮ ಆಗಿನ ಜನರ ಮೇಲಾಯಿತು. ಅನೇಕರು ಅವನಿಗೆ ಅನುಯಾಯಿಗಳಾದರು. ಅವರಿಗೆ ಅವನು ಹೀಗೆ ಬೋಧಿಸಿದನು : "ಪಾಪ ಮತ್ತು ಪುಣ್ಯ, ಕೆಟ್ಟದು ಮತ್ತು ಒಳ್ಳೆಯದು, ದುರ್ಜನ ಮತ್ತು ಸಜ್ಜನ ಇವುಗಳ ನಡುವೆ ಸತತವಾಗಿ ಯುದ್ಧ ನಡೆದಿದೆ. ಪಾಪದ ದೇವತೆಗೆ ಅಹ್ರಿಮುತ್ತ್ವ ಎಂದು ಹೆಸರಿದೆ; ಪುಣ್ಯದ ದೇವತೆ ಅಹುರಮಝ್ದ ಎಂಬವನಿದ್ದಾನೆ. ನಿರಂತರವಾಗಿ ನಡೆದ ಈ ಯುದ್ಧದಲ್ಲಿ ಮಾನವನು ಸಜ್ಜನರ ಪಕ್ಷವನ್ನು ವಹಿಸಿ ವಿಜಯ ಸಂಪಾದಿಸಲು ಹೋರಾಡಬೇಕು. ಈ ಗುರಿಯನ್ನು ಸಾಧಿಸುವದಕ್ಕಾಗಿ ಮಾನವನು ಜ್ಞಾನವನ್ನು ಗಳಿಸಬೇಕು; ದುಷ್ಟರನ್ನು ಪರಿವರ್ತಿಸಬೇಕು. ಹಗೆಯನ್ನು ಗೆಳೆಯನನ್ನಾಗಿ ಮಾಡಬೇಕು; ಇದಕ್ಕಾಗಿ ಸಂತತವಾಗಿ ಪ್ರಯತ್ನಿಸಬೇಕು." ಝುರತುಷ್ಟ್ರನು ಸೂರ್ಯ ಅಗ್ನಿಗಳನ್ನು ಅತ್ಯಂತ ಪೂಜ್ಯರೆಂದು ಮನ್ನಿಸಿದ್ದನು. ಇಂದಿಗೂ ಪಾರಸಿಗಳು ಅಗ್ನಿಯಲ್ಲಿ ಅತ್ಯಂತ ಪೂಜ್ಯಭಾವವುಳ್ಳವರಾಗಿದ್ದಾರೆ. ಇರಾಣೀ ಜನಗಳಿಗೆ ಬಾಹ್ಯ ಜನರ ಸಂಬಂಧವುಂಟಾಗಿ ಸಮಾಜ ಸಂಕರವಾಗಬಾರದೆಂದು ಅವನು ಸೋದರ-ಸೋದರೀಯರಂತಹ ಹತ್ತಿರದ ಸಂಬಂಧದಲ್ಲಿಯ ವಿವಾಹಕ್ಕೆ ಪ್ರೋತ್ಸಾಹನವಿತ್ತನು.

**ಧರ್ಮ ಪ್ರಸಾರ :** ಝುರತುಷ್ಟ್ರನು ತನ್ನ ಧರ್ಮದ ಪ್ರಸಾರಕ್ಕಾಗಿ ಬಹಳವಾಗಿ ಶ್ರಮಿಸಿದನು. ಗುಶ್ತಾಸ್ಪರಾಜನ ಓಲಗಕ್ಕೆ ಹೋಗಿ, ಅಲ್ಲಿ ಜನರ ಪ್ರಶ್ನೆಗಳಿಗೆ ಅವನು ಸಮರ್ಪಕವಾಗಿ ಉತ್ತರವಿತ್ತನು ಅದರಿಂದ ಗುಶ್ತಾಸ್ಪನು ಅವನ ಧರ್ಮವನ್ನು ಸ್ವೀಕರಿಸಿದನು. ಆದರೆ, ಅವನ ಲೋಕಪ್ರಿಯತೆ ಅವನ ಶತ್ರುಗಳಿಗೆ ಸಹನವಾಗಲಿಲ್ಲ. ಅವರು ಸಂಚುಹೂಡಿ ಗುಶ್ತಾಸ್ಪನ ರಾಜ್ಯದ ಮೇಲೆ ದಾಳಿ ತಂದರು. ಈ ದಾಳಿಯಲ್ಲಿ, ಝುರತುಷ್ಟ್ರನು ದೇವಾಲಯದಲ್ಲಿ ಪ್ರಾರ್ಥನೆಗೆ ಕುಳಿತಾಗ ಶತ್ರುಗಳು ದೇವಾಲಯಕ್ಕೆ ಕಿಚ್ಚಿಕ್ಕಿದರು. ಅದರಲ್ಲಿ ಅವನು ಅದೃಶ್ಯನಾದನು.

ಝುರತುಷ್ಟ್ರನ ಧರ್ಮಗ್ರಂಥಕ್ಕೆ ಝೆಂದಾವೆಸ್ತ [ಝೆಂದ=ಹಳೆಯ ಅವೆಸ್ತಾ=ಟೀಕಾ] ಎಂದು ಹೆಸರು. ಈ ಗ್ರಂಥದಲ್ಲಿ ಮುಖ್ಯವಾಗಿ ಪ್ರಾರ್ಥನೆಗಳ ಸಂಗ್ರಹ ಮತ್ತು ಯಜ್ಞವಿಧಿಗಳ ವರ್ಣನೆಗಳಿವೆ. ಈ ಗ್ರಂಥದ ಭಾಷೆಗೆ ಅವೆಸ್ತಾ ಪಹೆಲು ಎಂದು ಎನ್ನುತ್ತಾರೆ. ಝುರತುಷ್ಟ್ರನು ಹೋದನು; ಆದರೆ ಅವನ ಉಪದೇಶದಿಂದ ಇರಾಣೀ ಜನರಲ್ಲಿ ಹೊಸ ಚೈತನ್ಯವೇ ಉಂಟಾಯಿತು. ಅವರು ಯತ್ನವಾದಿಗಳಾದರು. ತಮ್ಮ ಸಂಘಟನೆ ಮಾಡಿಕೊಂಡರು. ಮತ್ತು ಹೊರಗಿನ ಶತ್ರುಗಳನ್ನು ಎದುರಿಸಲು ಬಲವಾದ ಸಿದ್ಧತೆ ಮಾಡಿದರು.

ಹುಡುಕುವುದಕ್ಕಾಗಿ ಉತ್ಖನನ ಮಾಡುವರು. ಅತಿ ಪ್ರಾಚೀನಕಾಲದ ಜನರು ಇರುತ್ತಿದ್ದ ಸ್ಥಳಗಳು ನದಿಗಳು ಮಹಾಪೂರದಿಂದ ಅಥವಾ ಬೆಂಕಿಯ ಅನಾಹುತ, ರೋಗ ರುಜಿನ ಪಿಡುಗುಗಳಂತಹ ಆಕಸ್ಮಿಕ ಆಪತ್ತಿಗಳಿಂದ ಹಾಳಾಗಿರುತ್ತವೆ. ಆಪತ್ತಿ ಒಮ್ಮೆಲೆ ಒದಗಿದರೆ ವಸ್ತು ಒಡವೆಗಳನ್ನು ಇದ್ದಕ್ಕಿದ್ದಹಾಗೆ ಬಿಟ್ಟು ಜನರು ಹೊರಟುಹೋಗಬೇಕಾಗುತ್ತದೆ. ಕಾಲಾಂತರದಲ್ಲಿ ಮನೆ-ಮಠಗಳು ಬಿದ್ದು ವಸ್ತುಗಳು ಹುಗಿದು ಹೋಗುತ್ತವೆ. ಆ ವಸ್ತುಗಳ ಥರಗಳಿಂದ ಅಲ್ಲಿ ದಿನ್ನೆ ಉಂಟಾಗುತ್ತದೆ. ಮುಂದೆ ಕೆಲ ಕಾಲದ ಮೇಲೆ ಪುನಃ ಜನರು ವಸತಿ ಮಾಡುತ್ತಾರೆ; ಅನೇಕ ವರ್ಷಗಳ ಮೇಲೆ ಅದೂ ನಾಶವಾಗುತ್ತದೆ. ಹೀಗೆ ಉಂಟಾದ ದಿನ್ನೆಗಳನ್ನು ಪದ್ಧತಿ ಪೂರ್ವಕವಾಗಿ ಅಗೆದರೆ ಹಿಂದಿನ ವಸ್ತುಗಳು ದೊರಕುತ್ತವೆ.

ಇಂತಹ ದಿನ್ನೆಗಳು ಅಥವಾ ಐತಿಹಾಸಿಕ ದೃಷ್ಟಿಯಿಂದ ಅಗಿಯಲು ತಕ್ಕುದಾದ ಸ್ಥಳಗಳು ಯಾವುವೆಂಬುದನ್ನು ಸಂಶೋಧಕರು ಗುರುತಿಸಬಲ್ಲರು. ಒಮ್ಮೊಮ್ಮೆ, ನೆರೆಯಿಂದಲೂ ದಿನ್ನೆಯ ಮಣ್ಣು ಹರಿದು ಹೋಗಿ ವಸ್ತುಗಳು ಹೊರಗೆ ಬರುವುದುಂಟು; ಒಮ್ಮೊಮ್ಮೆ ಮನೆಕಟ್ಟುವುದಕ್ಕಾಗಿ ನೆಲ ಅಗಿಯುವಾಗಲೂ ಕೆಲ ಅವಶೇಷಗಳು ಹೊರಡುವದುಂಟು. ಇಂತಹ ಸ್ಥಳಗಳನ್ನು ಶಾಸ್ತ್ರೀಯ ದೃಷ್ಟಿಯಿಂದ ಅಗೆಯಲು ಆರಿಸುತ್ತಾರೆ. ಅಗೆಯುವಾಗ ಯಾವದೊಂದು ವಸ್ತು ಸಿಕ್ಕರೆ, ಅದು ಎಷ್ಟು ಥರ ಕೆಳಗಿತ್ತು, ಅದರ ಸ್ಥಳ ಯಾವುದು ಎಂಬುದನ್ನು ಸಂಶೋಧಕರು ಸರಿಯಾಗಿ ಟಿಪ್ಪಣಿ ಮಾಡಿಕೊಳ್ಳುತ್ತಾರೆ. ಏಕೆಂದರೆ, ಅವುಗಳನ್ನವಲಂಬಿಸಿಯೇ ಆ ವಸತಿಯ ಕಾಲವನ್ನು ನಿರ್ಧರಿಸಬೇಕಾಗುತ್ತದೆ. ಕಾಲನಿರ್ಣಯದ ದೃಷ್ಟಿಯಿಂದ ನಾಣ್ಯಗಳ ಮತ್ತು ಲೇಖಗಳ ಉಪಯೋಗ ಹೆಚ್ಚು. ತಾಮ್ರದ ತಗಡಿನ ಮೇಲೆ, ಇಟ್ಟಿಗೆಯ ಮೇಲೆ ಲೇಖನಗಳು ಇರುವುದುಂಟು. ಆ ಲೇಖನದ ಲಿಪಿ ಮತ್ತು ಭಾಷೆ ಗೊತ್ತಾದರೆ ಆ ವಸ್ತುಗಳಿಂದ ಚೆನ್ನಾಗಿ ಮಾಹಿತಿ ದೊರೆಯುತ್ತದೆ.

ಉತ್ಖನನದಲ್ಲಿ ಎಂತಹ ವಸ್ತುಗಳು ಸಿಕ್ಕುವವೋ ಹೇಳುವುದು ಕಠಿಣ ಆದರೆ ಆ ಕಾಲದ ಕುಟುಂಬಗಳಲ್ಲಿ ಬಳಸಲಾಗುತ್ತಿದ್ದ ಮೂರ್ತಿಗಳು, ಆಟಿಗೆಗಳು, ಅಲಂಕಾರಗಳು ಮೊದಲಾದ ಎಲ್ಲ ವಸ್ತುಗಳು ಅಥವಾ ಆ ಸ್ಥಳದಲ್ಲಿ ನಡೆಯುತ್ತಿದ್ದ ಕಾರ್ಯಗಳಿಗೆ ಸಂಬಂಧಪಟ್ಟ ವಸ್ತುಗಳು ದೊರೆಯಬಹುದು. ಮನುಷ್ಯನ ಅಸ್ಥಿಪಂಜರ, ಮೂರ್ತಿ ಅಥವಾ ದೇವರ ಮೂರ್ತಿ ಇವು ಸಿಕ್ಕರೆ ಆ ಕಾಲದ ವೇಷಭೂಷಣ ಮತ್ತು ಸಂಸ್ಕೃತಿಯ ಕಲ್ಪನೆ ನಮಗುಂಟಾಗುತ್ತದೆ.

ಹೀಗೆ, ಮೊಹೆಂಜೊದಡೊ ಎಂಬಲ್ಲಿ ಅಖಂಡವಾದ ವಿಸ್ತಾರವಾದ ಪ್ರದೇಶವನ್ನು ಆಳವಾಗಿ ಅಗೆಯಲಾಗಿದೆ. ಮಹಾರಾಷ್ಟ್ರದಲ್ಲಿಯೂ ಕರ್ಹಾಡ ಮತ್ತು ಕೊಲ್ಹಾಪುರಗಳಲ್ಲಿಯೂ ಶಾಸ್ತ್ರಜ್ಞರು ಉತ್ಖನನ ಮಾಡಿದ್ದಾರೆ.

---

## ಹಮ್ಮುರಬಿಯ ಕಾಯಿದೆ:

[ಬದಿಯ ಚಿತ್ರದಲ್ಲಿ— ಸೂರ್ಯದೇವನು ಸಿಂಹಾಸನದಲ್ಲಿ ಕುಳಿತಿದ್ದಾನೆ; ಕೈ ಜೋಡಿಸಿ ನಿಂತಿರುವ ಹಮ್ಮುರಬಿಗೆ ಪ್ರಸನ್ನನಾಗಿ ಕಾಯಿದೆಯ ಕಾಗದ ಕೊಡುತ್ತಿದ್ದಾನೆ. ಈ ಆಕೃತಿ ೮ ಅಡಿ ಎತ್ತರದ ಶಿಲಾಖಂಡದ ಮೇಲ್ಗಡೆಯಲ್ಲಿ ಕೆತ್ತಿದೆ; ಕೆಳಗಿನ ಭಾಗದಲ್ಲಿ ಕಾಯಿದೆಯ ವಿಷಯ ಕೊರೆದಿದೆ. ಕ್ರಿ. ಶ. ೧೯೦೧ರಲ್ಲಿ ಸೂಸಾ (ಇರಾಣ) ಎಂಬಲ್ಲಿ ಈ ಕಲ್ಲು ಸಿಕ್ಕಿದೆ. ಮಾದರಿಗಾಗಿ ಕೆಲವು ಕಾಯಿದೆಗಳನ್ನು ನೋಡಿರಿ]:



ಹಮ್ಮುರಬಿ ಮತ್ತು ಸೂರ್ಯದೇವತೆ

'ನ್ಯಾಯಾಧೀಶನಿಗೆ ಅಥವಾ ಸಾಕ್ಷಿದಾರನಿಗೆ ಲಂಚ ಕೊಟ್ಟವನು ಕಠೋರ ಶಾಸನಕ್ಕೆ ಗುರಿಯಾಗುವನು.'

'ಒಡ್ಡಿನ ರಕ್ಷಣೆ ಮಾಡುವ ಮತ್ತು ತನ್ನ ಹೊಲದಲ್ಲಿಯ ನೀರನ್ನು ಮುಂದಿಯ ಹೊಲದಲ್ಲಿ ಬಿಟ್ಟು ಅವನ ಬೆಳೆಯನ್ನು ನಾಶಮಾಡುವ ಒಕ್ಕಲಿಗನು ಬೆಳೆಯ ಹಾನಿಯನ್ನು ತುಂಬಿ ಕೊಡಬೇಕಾಗುವುದು.'

'ಹೊಸದಾಗಿ ಕಟ್ಟಿಸಿದ ಯಾವುದೊಂದು ಮನೆ ಬಿದ್ದರೆ ಮತ್ತು ಅದರಿಂದ ಮನೆಯೊಡೆಯನ ಮಗನು ಸತ್ತರೆ, ಆ ಮನೆಯನ್ನು ಕಟ್ಟಿದ ವಾಸ್ತುಶಿಲ್ಪಿಯ ಮಗನಿಗೆ ಮರಣದಂಡನೆಯಾಗುವದು.'

'ತಂದೆಯನ್ನು ಹೊಡೆಯುವ ಮಗನ ಕೈಯನ್ನು ಕತ್ತರಿಸಲಾಗುವುದು.'

## ಸೂರ್ಯನ ಪ್ರಾರ್ಥನೆ:

(ಋಗ್ವೇದದ ಎರಡನೆಯ ಮಂಡಲದ ೩೮ನೆಯ ಸೂಕ್ತದ ಕೆಲ ಭಾಗವನ್ನು ಕೆಳಗೆ ಕೊಟ್ಟಿದೆ):

ಜನರಿಗೆ ಸ್ಫೂರ್ತಿಯನ್ನೀಯುವುದೇ ತನ್ನ ಕಾರ್ಯವಾಗಿರುವ ಜಗತ್ತಿನ ನಾಯಕನಾದ ಸೂರ್ಯದೇವನು ಜನರನ್ನು ಪ್ರೇರಿಸುವುದಕ್ಕಾಗಿ ದಿನದಿನವೂ ಮೂಡುತ್ತಾನೆ. ಅವನು ಯಜ್ಞ ಮಾಡುವವರಿಗೆ ಲೇಸು ಮಾಡುವನು.

ಸೂರ್ಯನು ಪಡುವಣದ ಕಡೆ ಸಾಗಿರುವಾಗ, ಅವನ ಹೊಳಪು ಕಡಿಮೆಯಾಗುತ್ತಿರುವಾಗ, ದಾರಿಕಾರರು ಪಯಣವನ್ನು ನಿಲ್ಲಿಸುತ್ತಾರೆ.....

ಸೂರ್ಯನು ಮುಳುಗಿದನೆಂದರೆ, ವಿಜಯಕ್ಕಾಗಿ ದೂರ ಹೋಗಿದ್ದ ವೀರನು ಮರಳು ತ್ತಾನೆ ಹೊರಗೆ ಅಲೆಯುತ್ತಿದ್ದ ಎಲ್ಲರ ಮನಸ್ಸೂ ಮನೆಯ ಕಡೆ ಹರಿಯುವುದು. ಕೆಲಸಗಾರನು ಕೆಲಸವನ್ನು ಅರ್ಧಕ್ಕೇ ಬಿಟ್ಟು ಮನೆಗೆ ತೆರಳುತ್ತಾನೆ....ಎಲ್ಲ ಪಶುಪಕ್ಷಿ ಗಳು ತಮ್ಮ ಬೀಡು-ಗೂಡು ಸೇರುತ್ತವೆ.

ಆ ಸೂರ್ಯದೇವನಿಗೆ ನಾನು ನಮಿಸುತ್ತೇನೆ; (ಆತ್ಮ) ಕಲ್ಯಾಣಕ್ಕಾಗಿ ಅವನನ್ನು ಕರೆಯುತ್ತೇನೆ.

ಸಿರಿ ಮತ್ತು ಪಶುಗಳು ದೊರೆಯುವುದಕ್ಕಾಗಿ ನಾವು ಸೂರ್ಯದೇವನಿಗೆ ಪ್ರಿಯ ರಾಗಬೇಕು (ಎಂಬ ಬಯಕೆ).

ಓ ಸೂರ್ಯನೇ, ನಮಗೆ ನೀನಿತ್ತ ಧನ, ದ್ಯುಲೋಕ, ಅಂತರಿಕ್ಷ ಮತ್ತು ಪೃಥ್ವಿ ಇವುಗಳೊಳಗಿಂದ ಬಾ.

**ಸೂರ್ಯನ ಪ್ರಾರ್ಥನೆ :**

[ನಾಲ್ಕನೆಯ ಆಮೆನ್‌ಹಟೆಪ್ ಅಥವಾ ಇಖನಾಟನ್ (ಕ್ರಿ.ಪೂ. ೧೩೮೦ರಿಂದ ೧೩೬೨) ಎಂಬ ಈಜಿಪ್ತದ ದೊರೆಗೆ 'ಸೂರ್ಯನೆಂಬ ಈಶ್ವರನು ಒಬ್ಬನೇ' ಎಂದು ಅವನು ಹೇಳುತ್ತಿದ್ದನು. ಅವನು ಹಳೆಯ ಧರ್ಮವನ್ನು ತಳ್ಳಲು ಯತ್ನಿಸಿದನು. ಆದರೆ ಅವನ ತರುವಾಯ ಹಳೆಯ ಧರ್ಮವು ಮತ್ತೆ ತಲೆಯೆತ್ತಿತು;— ಆಮೆನ್-ಹಟೆಪ್ಪನ ಕಾರ್ಯವು ಜಲಹೋಮವೇ ಆದಂತಾಯಿತು. ಈ ದೊರೆ ಸೂರ್ಯಸ್ತುತಿಯ ಅನೇಕ ಪದಗಳನ್ನು ರಚಿಸಿದ್ದಾನೆ. ಅವುಗಳಲ್ಲೊಂದರ ಭಾವಾರ್ಥ ಇಲ್ಲಿ ಕೊಟ್ಟಿದೆ]:

ಹೇ ರವಿಯೆ, ನೀನು ಮೂಡಿದೊಡನೆ ಇಡೀ ಪೃಥ್ವಿ ಬೆಳಕಿನಿಂದ ತುಂಬುತ್ತದೆ. ಎಲ್ಲೆಡೆಯ ಕತ್ತಲನ್ನು ನೀನು ಓಡಿಸುತ್ತೀ. ನಿನ್ನ ಕಿರಣಗಳು ಭೂಮಿಗೆ ಸೋಕಿ ದೊಡನೆ ಎಲ್ಲೆಲ್ಲಿಯೂ ಆನಂದವೇ ಆನಂದವಾಗುವುದು.

ದನಗಳಿಗೆ ಹುಲ್ಲು, ಹಾಗೆಯೆ ಗಿಡಪೊದೆಗಳು ನಿನ್ನಿಂದ ಬೆಳೆಯುವುವು. ನೀನು ಬಂದೊಡನೆ ಹಕ್ಕಿಗಳು ರೆಕ್ಕೆ ಬಡಿದೇಳುವವು— ತಮ್ಮ ರೆಕ್ಕೆಗಳನ್ನು ನೀಡಿ ನಿನ್ನನ್ನು ಬರಮಾಡಿಕೊಳ್ಳುವವೊ ಏನೋ. ಕುರಿಗಳು ಆನಂದದಿಂದ ಅತ್ತಿತ್ತ ಜಿಗಿದಾಡುವುವು. ಹೊಳೆಗಳಲ್ಲಿ ಮೀನುಗಳು ಕೆಳಗೆ-ಮೇಲೆ ನೆಗೆದಾಡುವುವು.

ಕಡಲಿನಲ್ಲಿ ದೋಣಿಗಳ ಸಾಗಾಟಕ್ಕೆ ಮೊದಲಾಗುವುದು. ನೀನು ಉದಿಸಿ ದೊಡನೆಯೆ ಎಲ್ಲ ದಾರಿಗಳು ಪ್ರವಾಸಿಗಳಿಗಾಗಿ ತೆರೆಯುವವು. ನಿನ್ನ ಕಿರಣಗಳಿಂದ ತೋಟದೊಳಗಿನ ಸುಂದರವಾದ ಗಿಡಬಳ್ಳಿಗಳು ಬೆಳೆಯುವುವು. ಬೇಸಗೆ, ಚಳಿಗಾಲ ಗಳೆಂಬ ಋತುಗಳನ್ನು ಸೃಜಿಸುವವನು ನೀನೆ.

ನೀನು ನನ್ನ ಹೃದಯದೊಳಗೆ ಮನೆಮಾಡಿರುವೆ. ಈ ಜಗತ್ತೇ ನಿನ್ನದಾಗಿದೆ. ನೀನು ಉದಿಸಿದರೆ ಜಗತ್ತಿನ ಬದುಕು, ನೀನು ಮುಳುಗಿದರೆ ಅದೂ ಶಾಂತವಾಗುವುದು. ನಿನ್ನಿಂದಲೇ ಜನರು ಜೀವಿಸುವುದು. ನೀನು ಪಶ್ಚಿಮದತ್ತ ಸರಿದೆಯೋ ಜನರು ತಮ್ಮ ವ್ಯವಹಾರ ನಿಲ್ಲಿಸುತ್ತಾರೆ.

# ಕಾಲಪಟ ೧

## (ಕ್ರಿ. ಪೂ. ೫೦೦೦ ದಿಂದ ಕ್ರಿಸ್ತವರ್ಷಾರಂಭದ ವರೆಗೆ)

[ ಯಾವೊಬ್ಬ ರಾಜನ ಆಳಿಕೆಯು ಕಾಲವನ್ನು ಹೇಳುವಂತೆ ಯಾವೊಂದು ಸಂಸ್ಕೃತಿ ಈ ವರುಷದಲ್ಲಿ ಆರಂಭವಾಯಿತು, ಈ ವರುಷ ಮುಗಿಯಿತು ಎಂದು ಹೇಳಲಿಕ್ಕಾಗುವದಿಲ್ಲ. ಅತಿ ಪ್ರಾಚೀನ ಕಾಲದ ರಾಜರ ವರುಷವನ್ನು ನಿಶ್ಚಿತವಾಗಿ ಹೇಳುವುದು ಸಾಧ್ಯವಿಲ್ಲ. ಆದುದರಿಂದ ಇತಿಹಾಸಕಾರರ ಅಂದಾಜುಗಳಲ್ಲಿಯೂ ಏಕ ಸೂತ್ರತೆ ಉಂಟಾಗುವುದಿಲ್ಲ. ಆದರೂ ಸ್ಥೂಲಮಾನದಿಂದ ಕಾಲವು ತಟ್ಟನೆ ನಿದರ್ಶನಕ್ಕೆ ಬರಬೇಕೆಂದು ಈ ಕಾಲಪಟವನ್ನು ಕೊಟ್ಟಿದೆ. ಸಾಮಾನ್ಯವಾಗಿ ವಿಲ್ಯಂ ಡ್ಯೂರಂಟನು ಹೇಳಿದ ವರುಷಗಳನ್ನು ಗ್ರಹಿಸಲಾಗಿದೆ. ]

ಕ್ರಿ. ಪೂ. ೫೦೦೦

೪೦೦೦ ಸುಮೇರಿಯನ್ ಸಂಸ್ಕೃತಿ
(ಕ್ರಿ. ಪೂ. ೩೬೦೦೦)
ಈಜಿಪ್ತದ ಅತ್ಯಂತ ಹಳೆಯ ರಾಜ್ಯ

೩೦೦೦ (ಕ್ರಿ. ಪೂ. ೩೫೫೭—೨೬೩೧)
ಸಿಂಧು ಸಂಸ್ಕೃತಿ
(ಕ್ರಿ. ಪೂ. ೩೫೦೦—೨೮೭೦)

ಬಾಬಿಲೋನಿಯನ್ ದೊರೆ ಹಮ್ಮುರಬಿಯ ಕಾಲ (ಕ್ರಿ.ಪೂ. ೨೧೨೩—೨೦೮೧)

ಬಾಬಿಲೋನಿಯಾ ಸಂಸ್ಕೃತಿ

೨೦೦೦

ಭಾರತದಲ್ಲಿ ಆರ್ಯರು ನೆಲೆಸಿದ್ದು
(ಕ್ರಿ. ಪೂ. ೧೫೦೦)

ಈಜಿಪ್ತದ ೪ನೆಯ ಆಮೆನ್‌ಹಟೆಪ್ (ಕ್ರಿ.ಪೂ. ೧೪೧೨—೧೩೭೬)

೧೦೦೦

ನಿನ್ನೆವಾ (ಅಸೀರಿಯನ್) ಸಂಸ್ಕೃತಿ
ಇರಾಣದಲ್ಲಿ ಝುರತುಷ್ಟ್ರ

ಅಸೀರಿಯನ್ ದೊರೆ ಅಸುರನಿಪಾಲ (ಕ್ರಿ. ಪೂ. ೬೬೯—೬೨೬)

ಕ್ರಿ. ವ. ಆರಂಭ

### ತೃತೀಯ ಖಂಡ

# ಮಹಾವೀರ ಮತ್ತು ಬುದ್ಧಯುಗ

## ೧. ಭಾರತದಲ್ಲಿಯ ಆರ್ಯರ ಸಮೃದ್ಧ ಜೀವನ*

**ಬುದ್ಧನಿಗೆ ಮೊದಲು :** ಮಹಾವೀರ ಮತ್ತು ಗೌತಮ ಬುದ್ಧರ ಕಾರ್ಯದ ಪರಿಚಯವಾಗುವುದಕ್ಕಾಗಿ, ಅವರಿಗಿಂತ ಹಿಂದಿನ ಭಾರತದ ಧಾರ್ಮಿಕ ರಾಜಕೀಯ ಪರಿಸ್ಥಿತಿಯನ್ನು ತಿಳಿದುಕೊಳ್ಳುವುದು ಅವಶ್ಯ. ಹಿಂದಿನ ಖಂಡದಲ್ಲಿ ಅತಿ ಪ್ರಾಚೀನ ಆರ್ಯರ ವಿಷಯಗಳನ್ನು ತಿಳಿಸಿದೆ. ಆರ್ಯರು ಪರಾಕ್ರಮಿಗಳೂ ಬುದ್ಧಿಶಾಲಿಗಳೂ ಇದ್ದುದರಿಂದ ಅವರ ಜೀವನವು ಪ್ರಗತಿಶೀಲವಾಗಿದ್ದಿತು. ಬುದ್ಧಪೂರ್ವಕಾಲದಲ್ಲಿ ರಾಜಕೀಯ ಮತ್ತು ಧಾರ್ಮಿಕ ರಂಗದಲ್ಲಿ ಆರ್ಯರು ಬಹಳ ಪ್ರಗತಿಯನ್ನು ಸಾಧಿಸಿದರು; ಅದರೊಡನೆ ಅವರಲ್ಲಿ ಕರ್ಮಠತನವೂ ಬೆಳೆಯಿತು. ಅದು ಹೇಗಾಯಿತೆಂಬುದನ್ನು ಸ್ಥೂಲಮಾನದಿಂದ ಕೆಳಗೆ ಕೊಡಲಾಗಿದೆ.

**ಗಂಗೆಯ ದಡದಲ್ಲಿ ಆರ್ಯರ ನೆಲೆವೀಡು :** ಆರ್ಯರಿಗೆ ಪಂಜಾಬವು ಕಿರಿಯದೆನಿಸತೊಡಗಿತು. ಆಗ ಅವರು ಮುಂದಕ್ಕೆ ಸಾಗಿ ಗಂಗಾ–ಯಮುನಾನದಿಗಳ ದಂಡೆಯ ವರೆಗೆ ನೆಲೆಸಿದರು. ಅವರೊಳಗೆ ಬೇರೆ ಬೇರೆ ವಂಶದವರು ಬೇರೆ ಬೇರೆ ಪ್ರದೇಶಗಳಲ್ಲಿ ವ್ಯಾಪಿಸಿದರು. ಕುರುವಂಶದವರು ಹಸ್ತಿನಾಪುರವನ್ನೂ ಪಾಂಚಾಲರು ಪೂರ್ವಕ್ಕೆ ಕಂಪಿಲ್ಯವನ್ನೂ ಕೋಸಲರು ಅಯೋಧ್ಯೆಯನ್ನೂ ವಿದೇಹರು ಬಿಹಾರವನ್ನೂ ವ್ಯಾಪಿಸಿದರು. ಈ ಎಲ್ಲ ವಿಷಯಗಳು ರಾಮಾಯಣ ಮಹಾಭಾರತ ಗ್ರಂಥಗಳಿಂದ ನಮಗೆ ತಿಳಿಯುತ್ತವೆ. ಈ ಕಾಲದಲ್ಲಿ ಅವರು ವಿಶೇಷವಾಗಿ ಧಾರ್ಮಿಕ ಪ್ರಗತಿಯನ್ನು ಪಡೆದರು. ಋಗ್ವೇದಕ್ಕೆ ಇತರ ಮೂರು ವೇದಗಳು ಕೂಡಿಕೊಂಡವು. ಯಜ್ಞವಿಧಿಯ ಮಹತ್ವ ಹೆಚ್ಚಿತು. ಅವಕ್ಕಾಗಿ ಯಜ್ಞವಿಧಿಗಳನ್ನು ವರ್ಣಿಸುವ ಗ್ರಂಥಗಳು ಹುಟ್ಟಿದವು. ಅದರೊಡನೆಯೇ, ದೇವರು ಎಲ್ಲಿದ್ದಾನೆ, ಅವನು ಹೇಗಿದ್ದಾನೆ ಎಂಬುದನ್ನು ಕುರಿತು ಆವರು ಚಿಂತನಶೀಲ ವಿವೇಚನೆ ಮಾಡತೊಡಗಿದರು. ಈ ಪ್ರಗತಿಯ ಪರಿಚಯವನ್ನು ಇಲ್ಲಿ ಮಾಡಿಕೊಳ್ಳುವಾ.

**ಉಪನಿಷತ್ತುಗಳು ಮತ್ತು ಅರಣ್ಯಕಗಳು :** 'ಬ್ರಾಹ್ಮಣ' ಗಳಿಗಿಂತಲೂ ಆರಣ್ಯಕಗಳು ಮತ್ತು ಉಪನಿಷತ್ತುಗಳು ಈ ಕಾಲದಲ್ಲಿಯ ಮಹತ್ವದ ಗ್ರಂಥಗಳು. ಆರಣ್ಯಕಗಳು ಯಜ್ಞಗಳ ತಂತ್ರಗಳಿಗಿಂತ ತಪಶ್ಚರ್ಯೆಗೆ ಮತ್ತು ಆತ್ಮಾನುಭವಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಡಲಾಗಿದೆ. ಅಡವಿಯಲ್ಲಿ ಶಾಂತವಾಗಿ ಕುಳಿತಾಗ ಪಕ್ಕನೆ ಹೊಳೆದವುಗಳು ಆರಣ್ಯಕಗಳು. ಈ ಆರಣ್ಯಕಗಳಿಗಿಂತಲೂ ಮಹತ್ವದವು

* ಸಮಾರು ಕ್ರಿ. ಪೂ. ೪೦೦ ರಿಂದ ಕ್ರಿ. ಪೂ. ೬೦೦ರ ವರೆಗೆ.

ಉಪನಿಷತ್ತುಗಳು. ವೇದಕಾಲದಲ್ಲಿ ಆದಿ-ಮಾನವರು ಪಂಚಮಹಾಭೂತಗಳನ್ನು ಭಕ್ತಿ ಭಾವದಿಂದ ಪ್ರಾರ್ಥಿಸಿದರು ಮಾತ್ರ. ಆಮೇಲೆ ಸೃಷ್ಟಿದೇವತೆಗಳನ್ನು ಪ್ರಸನ್ನಗೊಳಿಸುವುದಕ್ಕಾಗಿ ಯಜ್ಞಗಳು ರೂಢಿಗೆ ಬಂದವು. ಅನಂತರದ ಕಾಲದಲ್ಲಿ ಆರ್ಯರು ಅಂತರ್ಮುಖಿಗಳಾದರು. ಉಪನಿಷತ್ಕಾಲದಲ್ಲಿ ಆರ್ಯರು ಸೃಷ್ಟಿದೇವತೆಗಳ ಬಗೆಗೆ ಆದರ, ಆಶ್ಚರ್ಯ, ಭೀತಿ ಇತ್ಯಾದಿ ಭಾವನೆಗಳ ಆಚೆಗೆ ಹೋಗಿ, ತತ್ತ್ವಶೋಧಕರಾಗಿ ವಿಚಾರ ಮಾಡತೊಡಗಿದರು. ಆಗ, ಈ ಪಂಚಮಹಾಭೂತಗಳ ಹಿಂದಿದ್ದ ಜಗನ್ನಿಯಾಮಕನ ಸ್ವರೂಪವು ಅವರಿಗೆ ನಿಚ್ಚಳವಾಗಿ ಕಂಡಿತು. ಈ ತತ್ತ್ವಜ್ಞಾನಗಳ ನಿತಾಂತ ಸುಂದರ ವಿವೇಚನೆ ಉಪನಿಷತ್ತುಗಳಲ್ಲಿದೆ. ಉದಾಹರಣೆಗಾಗಿ ಕೇನೋಪನಿಷತ್ತಿನಲ್ಲಿಯ ವಚನಗಳ ಅರ್ಥವನ್ನು ನೋಡಿರಿ.

ತಾನು ಕಣ್ಣಿಗೆ ಕಾಣದೆ, ಕಣ್ಣಿಗೆ ನೋಡುವ ಶಕ್ತಿಯನ್ನು ಕೊಡುವುದೇ ಬ್ರಹ್ಮವೆಂದು ತಿಳಿ; ಜನರು ಬ್ರಹ್ಮನೆಂದು ಉಪಾಸಿಸುತ್ತಿರುವುದು ಬ್ರಹ್ಮವಲ್ಲ. ತಾನು ಕಿವಿಗೆ ಕೇಳುವ ಶಕ್ತಿಯನ್ನು ಕೊಡುವುದೆ ಬ್ರಹ್ಮವೆಂದು ನೀನು ತಿಳಿ; ಉಪಾಸಿಸುತ್ತಿರುವುದು ಬ್ರಹ್ಮವಲ್ಲ.

ಗುರುವಿನ ಬಳಿ ಕುಳಿತು ಅರಿತುಕೊಂಡುದು ಉಪನಿಷತ್ತು (ಉಪ+ನಿ+ಸದ್= ಕೂಡು) ವೇದ, ಬ್ರಾಹ್ಮಣ ಆರಣ್ಯಕ, ಉಪನಿಷತ್ತುಗಳು ಹೀಗೆ ಯಥಾಕ್ರಮದಲ್ಲಿ ವಿಕಾಸಗೊಂಡವು. ಇವೆಲ್ಲವುಗಳಿಗೆ 'ಶ್ರುತಿ' ಎಂಬ ಸಂಜ್ಞೆ. ತತ್ಕಾಲೀನ ಋಷಿಗಳು ಇವುಗಳಲ್ಲಿಯ ಮಂತ್ರಗಳ 'ಕರ್ತೃ'ಗಳಾಗಿರದೆ 'ದ್ರಷ್ಟಾ'ರರಾಗಿರುವರು. ವೇದಗಳು ಅಪೌರುಷೇಯವೆಂದು ಹಿಂದುಗಳು ನಂಬುತ್ತಾರೆ. ಆರ್ಯ ಋಷಿಗಳು ತಾತ್ತ್ವಿಕ ಪ್ರಶ್ನೆಗಳನ್ನು ಕುರಿತು ಏಕಾಗ್ರಚಿತ್ತದಿಂದ ಚಿಂತಿಸುತ್ತ ಧ್ಯಾನಸ್ಥರಾಗಿದ್ದಾಗ ಆ ಮಂತ್ರಗಳು ಸಹಜವಾಗಿ ಒಳಗಣ್ಣಿಗೆ ಹೊಳೆದು ಅವರ ಬಾಯಿಂದ ಅವು ಹೊರಬಿದ್ದವೆಂದು ಇದರರ್ಥದಂತೆ ತೋರುತ್ತದೆ. ಉಪನಿಷತ್ಕಾಲೀನ ಆರ್ಯರು ವೇದಕಾಲೀನ ಆರ್ಯರಂತೆ ಭಾವಿಕ ಪ್ರಾರ್ಥನೆ ಮಾಡದೆ, ತಾತ್ತ್ವಿಕ ವಿಚಾರದಲ್ಲಿಯೂ ಗೂಢ ಸಂಶೋಧನೆಯಲ್ಲಿಯೂ ನಿಮಗ್ನರಾಗಿರುತ್ತಿದ್ದರೆಂದು ತೋರುತ್ತದೆ. ಜಗತ್ತಿನಲ್ಲಿಯ ಅತ್ಯುಚ್ಚ ತತ್ತ್ವಜ್ಞಾನವು ಉಪನಿಷತ್ತುಗಳಲ್ಲಿ ಕಾಣುತ್ತದೆ. ಅವುಗಳನ್ನೋದಿದ ಜರ್ಮನ್ ಪಂಡಿತ ಶೊಪೆನ್ ಹಾಯರನು "ಉಪನಿಷತ್ತುಗಳು ನನ್ನ ಜೀವದ ತಳಮಳವನ್ನು ಶಾಂತಗೊಳಿಸಲು ಕಾರಣೀಯಭೂತವಾದವು" ಎಂದು ಉದ್ಗಾರ ತೆಗೆದಿದ್ದಾನೆ.

**ಮಹಾಕಾವ್ಯಗಳ ಮಹತ್ತ್ವ :** ರಾಮಾಯಣ, ಮಹಾಭಾರತ ಈ ಗ್ರಂಥಗಳಿಗೆ ಮಹಾಕಾವ್ಯ ಎನ್ನುತ್ತಾರೆ. ರಾಮಾಯಣದಲ್ಲಿಯ ರಾಮನು ವಿಷ್ಣುವಿನ ಏಳನೆಯ ಅವತಾರ, ಮಹಾಭಾರತದಲ್ಲಿಯ ಕೃಷ್ಣನು ಎಂಟನೆಯ ಅವತಾರ. ರಾಮಾಯಣದಲ್ಲಿ ಮಹಾಭಾರತಕ್ಕಿಂತ ಪ್ರಾಚೀನಕಾಲದ ವರ್ಣನೆ ದೊರೆಯುತ್ತದೆ. ಆದರೆ ರಾಮಾಯಣ ಕಾವ್ಯದ ರಚನೆಯಾದುದು ಮಹಾಭಾರತಕ್ಕಿಂತ ಮೊದಲೋ ಆಮೇಲೆಯೋ ಖಂಡಿತವಾಗಿ ಹೇಳುವುದು ಕಠಿಣ. ರಾಮಾಯಣದ ರಚನೆ ಮಹಾಭಾರತಕ್ಕಿಂತ ಈಚೆಯದಿರಬೇಕೆಂದು ಕೆಲವು ಪಂಡಿತರ ತರ್ಕವಿದೆ. ರಾಮಾಯಣ ಕಾಲದಲ್ಲಿ, ಹಿಂದುಸ್ತಾನದಲ್ಲೆಲ್ಲ ತಳವೂರುವ ಆರ್ಯರ ಪ್ರಯತ್ನ ಸಣ್ಣಾಗಿ ನಡೆದಿತ್ತೆಂಬುದು ರಾಮಾಯಣದಲ್ಲಿಯ ದಂಡಕಾರಣ್ಯ ವಾಸಿಗಳಾದ ಅನೇಕ ಋಷಿಗಳ

ಆಶ್ರಮಗಳ ಉಲ್ಲೇಖಗಳಿಂದ ಸಿದ್ಧವಾಗುತ್ತದೆ. ಮಹಾಭಾರತಕಾಲದಲ್ಲಿ ಈ ಕೆಲಸ ಬಹುಮಟ್ಟಿಗೆ ಪೂರ್ಣವಾಗಿರಬೇಕು. ರಾಮಾಯಣದಲ್ಲಿಯ ರಾಮನ ಚಿತ್ರವೆಂದರೆ, ಆದರ್ಶಭೂತ ರಾಜನ, ಸ್ನೇಹಾಳು ಬಂಧುವಿನ, ಕರ್ತವ್ಯನಿಷ್ಠ ಪುತ್ರನ, ಪ್ರೇಮಲ ಪತಿಯ ಮತ್ತು ತೇಜಸ್ವೀ ವೀರನ ಗುಣಸಮುಚ್ಚಗಳ ಚಿತ್ರವೇ ಆಗಿದೆ. ರಾಮನು ಏಕವಚನಿ, ಏಕಬಾಣಿ ಮತ್ತು ಏಕಪತ್ನೀ ವ್ರತಸ್ಥ. ಮಹಾಭಾರತದಲ್ಲಿ ಪ್ರಸಂಗಗಳ ವಿವಿಧತೆಯೂ, ಬೌದ್ಧಿಕ ಪ್ರಗತಿಯ ಚಿತ್ರಣವೂ ಬಹುದೊಡ್ಡ ಪ್ರಮಾಣದಲ್ಲಿದೆ. ಕೃಷ್ಣನ ರಾಜಕಾರಣ ಪಟುತ್ವ, ಅರ್ಜುನನ ಬಿಲ್ಲುಗಾರಿಕೆಯ ಬಲ್ಮೆ, ಯುಧಿಷ್ಠಿರನ ಧರ್ಮನಿಷ್ಠೆ, ಭೀಷ್ಮನ ದೃಢನಿಶ್ಚಯ ಮತ್ತು ಕಡುತರ ಬ್ರಹ್ಮಚರ್ಯ, ಕರ್ಣನ ಔದಾರ್ಯ, ಪತಿಗಳ ಸಂಕಟ ಸಮಯದಲ್ಲಿ ದ್ರೌಪದಿಯ ಚಾತುರ್ಯ, ನಿಷ್ಠೆ ಮತ್ತು ಕೃಷ್ಣಭಕ್ತಿ ಈ ಗುಣಗಳನ್ನು ಇದರಲ್ಲಿ ಕಾಣುತ್ತೇವೆ. ಎರಡೂ ಗ್ರಂಥಗಳಲ್ಲಿ ಆಯಾ ಕಾಲದ ಜನಗಳ ವರ್ಣನೆಯೂ ದೊರೆಯುತ್ತದೆ. ರಾಮಾಯಣದಲ್ಲಿ ದಶರಥನ ಸ್ತ್ರೀ ಲಾಂಪಟ್ಯ ವಾಲಿಯ ವಧೆ, ರಾವಣನ ಅತ್ಯಾಚಾರ, ಹಾಗೂ ಮಹಾಭಾರತದಲ್ಲಿ ದ್ಯೂತದ ವ್ಯಸನ ಮತ್ತು ದಾಯಾದತನದ ಪರಿಣಾಮ ಮೊದಲಾದವುಗಳು ಕಂಡುಬರುತ್ತವೆ. ಒಟ್ಟಾರೆ, ಸಮಾಜದಲ್ಲಿಯ ಆಬಾಲವೃದ್ಧರ ಮನಸ್ಸಿನ ಮೇಲೆ ಉಚ್ಚವಿಚಾರಗಳ ಅಚ್ಚೊತ್ತುವ, ಸತ್ಕೃತ್ಯಗಳ ಪರಿಣಾಮವನ್ನು, ಪಾಪಗಳ ಕೊನೆಯನ್ನು ನಿಚ್ಚಳವಾಗಿ ತೋರಿಸುವ, ಸಮಾಜದಲ್ಲಿ ಬಹುವಿಧ ವ್ಯಕ್ತಿಗಳಿಗೆ ಒಂದೇ ಸಂಸ್ಕೃತಿಯ ಬಾಲಾಮೃತವನ್ನು ಕುಡಿಸುವ ಮತ್ತು ಅವರ ಮನಸ್ಸಿಗೆ ರಂಜನೆಯನ್ನೂ ಬೋಧವನ್ನೂ ಒದಗಿಸುವ ಗ್ರಂಥಗಳ ಆಗತ್ಯ ಸಮಾಜದಲ್ಲಿರುತ್ತದೆ. ಈ ಗ್ರಂಥಗಳು ಹಾಗೆ ಇವೆ ಎಂಬುದು ನಿಃಸಂದೇಹ ಅವುಗಳಲ್ಲಿಯ ಎಷ್ಟೋ ಪ್ರಸಂಗಗಳು ಕಾಲ್ಪನಿಕವಿರಬಹುದು; ಆದರೆ ಆ ಕಲ್ಪನೆಯ ಬುಡದಲ್ಲಿ ಉಚ್ಚವಿಚಾರಗಳ ಮನೋಭೂಮಿಕೆಯಿದೆಯೆಂಬುದನ್ನು ಮರೆಯಲಾಗದು. ಹಿಂದುಳಿದ ಕಾಡು ಸಮಾಜದಲ್ಲಿ ಇಂತಹ ಗ್ರಂಥರಚನೆ ಅಸಂಭವ. ಮಹಾಭಾರತ ರಾಮಾಯಣ ಎರಡೂ ಮಹಾಕಾವ್ಯಗಳೊಳಗಿನ ಐತಿಹಾಸಿಕ ಸತ್ಯವನ್ನು ಶೋಧಿಸಿಕೊಳ್ಳುವುದು ಕಠಿನ, ಆದರೆ ಈ ಎರಡೂ ಗ್ರಂಥಗಳಲ್ಲಿ—ವಿಶೇಷವಾಗಿ ಮಹಾಭಾರತದಲ್ಲಿ ವ್ಯಾವಹಾರಿಕ ಜಾಣ್ಮೆಯನ್ನು ಕಲಿಸುವ ಪ್ರಸಂಗಗಳು ತುಂಬಿವೆ; ಇದರಿಂದಾಗಿಯೇ ' ವಾಸೋಚ್ಛಿಷ್ಟಂ ಜಗತ್ ಸರ್ವಂ ' ಎಂದರೆ ಸರ್ವಜಗತ್ತಿನಲ್ಲಿಯ ಜಾಣತನ ಈ ಗ್ರಂಥಗಳಲ್ಲಿ ದೊರೆಯುತ್ತದೆ ಎಂಬ ನಾಣ್ಣುಡಿ ಉಂಟಾಗಿದೆ. ತತ್ಕಾಲೀನ ಸಮಾಜಸ್ಥಿತಿಯನ್ನು ಅರಿಯುವುದಕ್ಕಂತೂ ಈ ಗ್ರಂಥದಷ್ಟು ಮಹತ್ತ್ವದ ಗ್ರಂಥ ಬೇರಿಲ್ಲ. ವೇದಗಳ ಜ್ಞಾನವುಳ್ಳ ಹಿಂದುಗಳು ತೀರ ಅಲ್ಪ; ಆದರೆ ಇಂದಿಗೂ ರಾಮಾಯಣಮಹಾಭಾರತಗಳು ಗೊತ್ತಿಲ್ಲದ ಹಿಂದುವೇ ಇಲ್ಲವೆನ್ನಬಹುದು. ಮಹಾಭಾರತದ, ಕಾಲವು ಯಾರ ಅಭಿಪ್ರಾಯದ ಮೇರೆಗೂ ಕ್ರಿ. ಪೂ. ೧೩೦೦*ರಿಂದೀಚೆಗೆ ಬರುವುದಿಲ್ಲ.

* ಕೈ. ವಾ. ಚಿಂತಾಮಣರಾವ ವೈದ್ಯರು ಭಾರತೀಯ ಯುದ್ಧದ ಕಾಲವು ಕ್ರಿ. ಪೂ. ೩೧೦೧ ಎಂದು ಪ್ರತಿಪಾದಿಸಿದ್ದಾರೆ.

**ಶ್ರೀಮದ್ಭಗವದ್ಗೀತೆ :** ಮಹಾಭಾರತದ ಯುದ್ಧಪ್ರಸಂಗದಲ್ಲಿ, ಸ್ವಜನ ರೊಡನೆ ಕಾದಬೇಕೋ ಕಾದಬಾರದೋ ಎಂಬ ಭ್ರಮೆ ಅರ್ಜುನನಿಗೆ ಉಂಟಾಯಿತು; ಅವನು ಬಿಲ್ಲು ಬಾಣಗಳನ್ನು ಬಿಸುಟು. ಹೀಗೆ ರಾಜ್ಯವನ್ನು ದೊರಕಿಸುವುದಕ್ಕಿಂತ ಅಡವಿ ಸೇರುವುದೇ ಲೇಸೆಂದು ಎನ್ನತೊಡಗಿದನು. ಆಗ ಶ್ರೀಕೃಷ್ಣನು ಎಂತಹ ಪರಿ ಸ್ಥಿತಿಯಲ್ಲಿಯೂ ಫಲದಲ್ಲಿ ಆಸಕ್ತಿಯಿಲ್ಲದೆ ತಮ್ಮ ತಮ್ಮ ಕೆಲಸ ಮಾಡುತ್ತಿರುವುದರಲ್ಲಿ ಪಾಪವಿಲ್ಲವೆಂದು ತಿಳಿ ಹೇಳಿ ಅವನ ಭ್ರಮೆಯನ್ನು ಕಳೆದನು. ಇದೇ ಪ್ರಸಿದ್ಧ ಭಗವ ದ್ಗೀತೆ. ಇದರಲ್ಲಿ ಒಟ್ಟು ಏಳುನೂರು ಶ್ಲೋಕಗಳು ಹದಿನೆಂಟು ಅಧ್ಯಾಯಗಳಿವೆ. ವೇದೋಪನಿಷತ್ತುಗಳ ತತ್ತ್ವಜ್ಞಾನದ ಸಾರವು ಇದರಲ್ಲಿ ಅಡಕವಾಗಿದೆ. ಇದೇ ಹಿಂದು ಗಳ ಧರ್ಮಗ್ರಂಥ. ಕ್ರೈಸ್ತರಿಗೆ ಬಾಯಬಲ್, ಮುಸಲ್ಮಾನರಿಗೆ ಕುರಾಣ ಇದ್ದ ಹಾಗೆ ಹಿಂದುಗಳಿಗೆ ಭಗವದ್ಗೀತೆ.

**ನಾಲ್ಕು ಆಶ್ರಮಗಳು :** ಆರ್ಯರ ಇಡಿ ಆಯುಷ್ಯಕ್ರಮವು ನಾಲ್ಕು ಆಶ್ರಮ ಗಳಲ್ಲಿ ವಿಭಕ್ತವಾಗಿತ್ತು. ಬ್ರಹ್ಮಚರ್ಯಾಶ್ರಮದಲ್ಲಿ ಅಧ್ಯಯನ ಮಾಡುವುದು, ಗೃಹಸ್ಥಾ ಶ್ರಮದಲ್ಲಿ ದ್ರವ್ಯಾರ್ಜನೆ ಮಾಡುವುದು, ವಾನಪ್ರಸ್ಥಾಶ್ರಮದಲ್ಲಿ ಲೋಕಸೇವೆಮಾಡು ವುದು ಮತ್ತು ತನ್ನಲ್ಲಿದ್ದ ಗುಣಗಳನ್ನು ತನ್ನ ಸಂಸ್ಕಾರಕ್ಕಿಂತ ಸಮಾಜಹಿತಕ್ಕಾಗಿ ಉಪ ಯೋಗಿಸುವುದು, ಮತ್ತು ಸಂನ್ಯಾಸಾಶ್ರಮದಲ್ಲಿ ಈಶಚಿಂತನೆ ಮಾಡುವುದು; ಇದು ಆ ಕಾಲದ ವ್ಯಕ್ತಿಜೀವನಕ್ರಮದ ಸಾಮಾನ್ಯ ರೂಪರೇಷೆ.

**ಚಾತುರ್ವರ್ಣ್ಯ :** ಚತುರ್ವರ್ಣಗಳ ವ್ಯವಸ್ಥೆ ತತ್ಕಾಲೀನ ಸಮಾಜದ ಇನ್ನೊಂದು ಲಕ್ಷಣ. ಕಾಲಾಂತರದಲ್ಲಿ ಒಬ್ಬನೇ ಧರ್ಮಕಾರ್ಯ, ದ್ರವ್ಯಾರ್ಜನೆ ಮತ್ತು ರಕ್ಷಣೆ ಎಲ್ಲ ವನ್ನೂ ಮಾಡುವುದು ಅಶಕ್ಯವಾದುದರಿಂದ ಶ್ರಮವಿಭಾಗತತ್ತ್ವವನ್ನನುಸರಿಸಿ ಚಾತು ರ್ವರ್ಣ್ಯದ ಉದಯವಾಯಿತು. ಅಧ್ಯಯನ, ಅಧ್ಯಾಪನ ಮತ್ತು ಧರ್ಮಾಧಿಕಾರ ನಡೆ ಸುವ ವರ್ಗಕ್ಕೆ ಬ್ರಾಹ್ಮಣ, ಯೋಧರಾದ ರಾಜರಿಗೂ ರಾಷ್ಟ್ರರಕ್ಷಣೆ ಮಾಡುವವರಿಗೂ ಕ್ಷತ್ರಿಯ, ಬೇಸಾಯ ಮತ್ತು ವ್ಯಾಪಾರ ಮೊದಲಾದವನ್ನು ಮಾಡುವವರಿಗೆ ವೈಶ್ಯ ಎಂಬ ಹೆಸರುಗಳಾದವು. ಮೊದಲು ಮೊದಲು ಮನುಷ್ಯನ ಗುಣಕರ್ಮಾನುಸಾರ ವಾಗಿ, ವರ್ಣಗಳ ನಿರ್ಣಯವಾಗುತ್ತಿತ್ತು. ಆದರೆ ಮಹಾ ಭಾರತದ ಕಾಲಾ ನಂತರದಲ್ಲಿ ಜನ್ಮದ ಮೇಲಿಂದ ನಿರ್ಣಯವಾಗತೊಡಗಿತು. ಬರಬರುತ್ತ ಆರ್ಯ ಅನಾರ್ಯರ* ಜಗಳಗಳು ಕಡಿಮೆಯಾಗಿ ಅನಾರ್ಯರು ಆರ್ಯರ ಆಳ್ತನವನ್ನು ಕೈಕೊಂ ಡರು; ಆರ್ಯರು ಅವರನ್ನು ತಮ್ಮ ಸಮಾಜ ಸಂಸ್ಥೆಯಲ್ಲಿ ಶೂದ್ರರೆಂದು ಒಳಪಡಿಸಿ

* ಆರ್ಯರು ಅನಾರ್ಯರನ್ನು ನಾಶಗೊಳಿಸದೆ ತಮ್ಮ ಸಮಾಜ ವ್ಯವಸ್ಥೆಯಲ್ಲಿ ಸೇರಿಸಿಕೊಂಡುದು ತುಲನಾತ್ಮಕ ದೃಷ್ಟಿಯಿಂದ ಆರ್ಯರ ಉದಾರ ಹೃದಯದ ದ್ಯೋತಕವಾಗಿದೆ. ೧೭–೧೮ನೆಯ ಶತಕಗಳಲ್ಲಿ ಅಮೇರಿಕೆಗೂ ಆಫ್ರಿಕೆಗೂ ವಲಸೆ ಹೋದ ಪಾಶ್ಚಾತ್ಯರು ಇಂಡಿಯನರನ್ನೂ ನಿಗ್ರೋಗಳನ್ನೂ ಅತಿ ನಿರ್ದಯತನದಿಂದ ನಾಶಗೊಳಿಸಿದರು. ಅಲ್ಲದೆ, ರೆಡ್ ಇಂಡಿಯನ್‌ರು ಇಂದು ೩೦೦ ವರುಷಗಳ ಅನಂತರವೂ–ಆ ಜನರು ಕ್ರಿಸ್ತಧರ್ಮ ವನ್ನು ಅಂಗೀಕರಿಸಿದ್ದರೂ ಅವರಿಗೆ ಕ್ರೈಸ್ತ ಸಮಾಜದಲ್ಲಿ ಸಮಾನ ದರ್ಜೆಯಿಲ್ಲ.

ಕೊಂಡರು. ‘ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ’ ಎಂದು ಭಗವದ್ಗೀತೆಯಲ್ಲಿ ಹೇಳಿದೆ. ‘ಗುಣ ಮತ್ತು ಕರ್ಮಗಳಿಗೆ ಅನುಸಾರವಾಗಿ ಸಮಾಜದಲ್ಲಿ ನಾಲ್ಕು ವರ್ಣಗಳನ್ನು ನಾನು (ದೇವನು) ಉಂಟು ಮಾಡಿದೆನು’ ಎಂದು ಇದರ ಅರ್ಥ. ದೇವನು ಉತ್ಪನ್ನಮಾಡಿದನೆಂದರೆ ಸ್ವಾಭಾವಿಕ ಉತ್ಪತ್ತಿಯಾಯಿತು ಎಂದರ್ಥ. ಪ್ರತಿಯೊಬ್ಬ ಮನುಷ್ಯನಲ್ಲಿದ್ದ ಗುಣ ಮತ್ತು ಅದನ್ನವನು ನಿತ್ಯ ವ್ಯವಹಾರದಲ್ಲಿ ಮಾಡಿಕೊಳ್ಳುವ ಅದರ ಉಪಯೋಗ ಇವುಗಳಿಂದ ಚಾತುರ್ವರ್ಣ್ಯದ ಸ್ವಾಭಾವಿಕ ಅಸ್ತಿತ್ವವುಂಟಾಗುತ್ತದೆ. ಮೊದಲಂತೂ ಚಾತುರ್ವರ್ಣ್ಯವು* ಜನ್ಮವನ್ನವಲಂಬಿಸಿರಲಿಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಸುಮಾರು ಮೂರುಸಾವಿರ ವರುಷಗಳ ಹಿಂದೆ ಹುಟ್ಟಿದ ಈ ಸಂಸ್ಥೆ ಇಂದಿನ ವರೆಗೂ ತಾಳಿ ಬಾಳಿದೆ. ಮತ್ತು ಇತರ ಅನೇಕ ಸಮಾಜಗಳು ನಾಮಶೇಷವಾಗಿದ್ದರೂ ಹಿಂದೂ ಸಮಾಜವನ್ನು ಬಾಳಿಸಿದ ಶ್ರೇಯಸ್ಸು ಈ ಸಂಸ್ಥೆಯದು. ಈ ನಾಲ್ಕು ವರ್ಣಗಳು ಮತ್ತು ಮೇಲೆ ಹೇಳಿದ ನಾಲ್ಕು ಆಶ್ರಮಗಳು ಇವೆರಡರ ಮೂಲಕ ಉದ್ದವಾಗಿಯೂ ಅಡ್ಡವಾಗಿಯೂ ಸಮಾಜದ ವರ್ಗೀಕರಣವಾಯಿತು. ಸಮಾಜದಲ್ಲಿ ವ್ಯಕ್ತಿಯ ಸ್ಥಾನ ನಿರ್ದಿಷ್ಟವಾಯಿತು. ದೀರ್ಘ ಕಾಲಾಂತರದಲ್ಲಿ ಈ ವ್ಯವಸ್ಥೆಯಲ್ಲಿ ಕೆಲ ದೋಷಗಳು ಹುಟ್ಟಿಕೊಂಡಿವೆ; ಅವನ್ನು ತೆಗೆದು ಹಾಕುವುದು ಇಂದು ಅಗತ್ಯವೂ ಆಗಿದೆ. ಈ ಕಾಲದಲ್ಲಿ ಶುದ್ಧ ಚಾತುರ್ವರ್ಣ್ಯದ ಪುನರುಜ್ಜೀವನವು ಶಕ್ಯವಿಲ್ಲದಿದ್ದರೂ ಚಾತುರ್ವರ್ಣ್ಯವನ್ನು ಸ್ಥಾಪಿಸಿದ ಪ್ರಾಚೀನರ ಮೇಲೆ ದೋಷವನ್ನಾರೋಪಿಸಲು ಬರಲಾರದು. ಚಾತುರ್ವರ್ಣ್ಯದಲ್ಲಿಯ ವರ್ಣ ಎಂಬ ಶಬ್ದವನ್ನು ‘ವ್ಯವಸಾಯ’ ಎಂಬರ್ಥದಲ್ಲಿ ಉಪಯೋಗಿಸಿರಬೇಕು. ಬಣ್ಣಕ್ಕೂ ಭಿನ್ನ ಭಿನ್ನ ಅಂಶಗಳಿಗೂ ಈ ಚಾತುರ್ವರ್ಣ್ಯದ ಸಂಬಂಧ ಕಾಣುವುದಿಲ್ಲ. ಶೂದ್ರರ ಹೊರತು ಮಿಕ್ಕ ಮೂರು ವರ್ಣದವರು ಆರ್ಯರೇ ಆಗಿದ್ದರು.

**ಧಾರ್ಮಿಕ ಉತ್ಕ್ರಾಂತಿ**: ಈ ಕಾಲದಲ್ಲಿ ಘಟಿಸಿದ ಧಾರ್ಮಿಕ ಉತ್ಕ್ರಾಂತಿ ಅತ್ಯಂತ ಮನನೀಯವಾಗಿದೆ. ಸೃಷ್ಟಿದೇವತೆಗಳನ್ನು ಅನನ್ಯ ಭಾವದಿಂದ ಪ್ರಾರ್ಥಿಸುತ್ತಿದ್ದ ಆರ್ಯರು ಈಗ ಯಜ್ಞಯಾಗಗಳಿಂದ ಆ ದೇವತೆಗಳನ್ನು ಪ್ರಸನ್ನಗೊಳಿಸಲು ತೊಡಗಿದರು. ‘ಈ ಯಜ್ಞಚಕ್ರದಿಂದ ನೀವು ದೇವತೆಗಳನ್ನು ತುಷ್ಟಗೊಳಿಸಿರಿ.’

* ಜಾತಿ ಎಂಬ ಶಬ್ದವು ಜನ್ (= ಹುಟ್ಟು) ಎಂಬುದರಿಂದ ಬಂದಿದೆ. ಸಾಮಾನ್ಯವಾಗಿ ತಂದೆಯ ಕಸುಬನ್ನೇ ಮಕ್ಕಳು ಮಾಡುತ್ತಿದ್ದರು. ಇದರಿಂದ ಒಂದು ಕಲೆಯ ಜ್ಞಾನವು ತಲೆತಲಾಂತರವಾಗಿ ಒಂದು ಮನೆತನದಲ್ಲಿ ಉಳಿಯುತ್ತಿತ್ತು. ಜಾತಿಭೇದವು ಆರಂಭವಾದ ಬಳಿಕ ಆ ವ್ಯವಸಾಯವನ್ನು ಬದಲಿಸುವುದು ಅವರಿಗೆ ಅಶಕ್ಯವಾಯಿತು. ಯಾವನು ಯಾವ ಮನೆಯಲ್ಲಿ ಹುಟ್ಟುತ್ತಾನೋ ಅದೇ ಅವನ ಜಾತಿ. ಅದನ್ನು ಬದಲಿಸುವುದು ಸಾಧ್ಯವಿಲ್ಲ. ಮುಂದೆ ಮುಂದೆ ಮನುಷ್ಯನು ಯಾವ ಉದ್ಯೋಗ ಮಾಡುತ್ತಾನೆ, ಏನು ಉಡುತ್ತಾನೆ, ಯಾವ ಪ್ರದೇಶದಲ್ಲಿ ಇರುತ್ತಾನೆ ಇತ್ಯಾದಿ ಅನೇಕ ಪ್ರಶ್ನೆಗಳ ಮೇಲಿಂದ ಜಾತಿಗಳು ಉತ್ಪನ್ನವಾದವು. ಇಂದು ಭಾರತದಲ್ಲಿ ಸುಮಾರು ೩೫೦ ಜಾತಿಗಳಿವೆ. ಸಣ್ಣ ಪುಟ್ಟ ಜಾತಿಗಳ ಸಂಖ್ಯೆಯನ್ನಂತೂ ಸಾವಿರಗಟ್ಟಲೆ ಎಣಿಸಬೇಕು.

ಅವರೂ ನಿಮ್ಮನ್ನು ತಣಿಸಲಿ, ಒಬ್ಬರಿಗೊಬ್ಬರಿಗೆ ಸುಖವನ್ನಿತ್ತು ಇಬ್ಬರೂ ಕಲ್ಯಾಣ ಹೊಂದಿರಿ.' (ಭ. ಗೀ. ಅ. ३. ಶ್ಲೋ. ೧೧) ಎಂಬಂತೆ ಸ್ವಲ್ಪ ಕೊಡಕೊಳ್ಳುವ ಬುದ್ಧಿ ಉತ್ಪನ್ನವಾಯಿತು. ಸೃಷ್ಟಿದೇವತೆಗಳ ವಿಷಯದಲ್ಲಿ ಆದ್ಯಮಾನವನಿಗೆ ಆದರವೂ ಆಶ್ಚರ್ಯವೂ ಎನಿಸುತ್ತಿತ್ತು. ಆ ತರುವಾಯ ಭೀತಿಯು ಪ್ರಾದುರ್ಭಾವವಾಯಿತು. ಮತ್ತು ಅದರ ನಿವಾರಣೆಗಾಗಿ ಮಂತ್ರತಂತ್ರಾದಿಗಳ ಉಪಚಾರಕ್ಕೆ ಆರಂಭ ವಾಯಿತು. ಯಜ್ಞವು ದೇವರನ್ನು ಸಂತುಷ್ಟಗೊಳಿಸುವ ಸಾಧನವೆಂದು ಅದನ್ನು ನಿರ್ದೋಷವಾಗಿ ಮಾಡುವುದಕ್ಕಾಗಿ ಅವುಗಳ ವಿಧಾನದಲ್ಲಿಯ ಸಣ್ಣಪುಟ್ಟ ವಿಷಯ ಗಳನ್ನೂ ನಿಯಮಬದ್ಧಗೊಳಿಸಿದರು. ಇದರಿಂದ ಕಾಲಾಂತರದಲ್ಲಿ ಋಗ್ವೇದಕ್ಕೆ ಯಜುರ್ವೇದ, ಸಾಮವೇದ, ಅಥರ್ವಣವೇದಗಳು ಜೊತೆಯಾದವು. ಯಜ್ಞದ ವಿಧಿ ಗಳನ್ನು ವರ್ಣಿಸುವ ಋಕ್ಕುಗಳನ್ನು ಯಾಜ್ಞವಲ್ಕ್ಯನು ಸಂಗ್ರಹಿಸಿದನು; ಅದು ಯಜುರ್ವೇದವಾಯಿತು. ಯಜ್ಞ ಪ್ರಸಂಗಗಳಲ್ಲಿ ಹಾಡಲು ಬರುವಂತಹ ಋಕ್ಕುಗಳಿಗೆ ಸಾಮವೇದವೆಂಬ ಹೆಸರು ಬಂದಿತು. ಸಂಕಟಗಳ ನಿವಾರಣೆಗಾಗಿ ಹೇಳುವ ಋಕ್ಕು ಗಳು ಅಥರ್ವವೇದದಲ್ಲಿ ಸಂಗ್ರಹಿತವಾಗಿವೆ. ಈ ನಾಲ್ಕು ವೇದಗಳನ್ನು ವರ್ಣೋ ಚ್ಚಾರಾದಿಗಳ ನಿಯಮಗಳನ್ನನುಸರಿಸಿ ಸ್ವರಯುಕ್ತವಾಗಿ ಎನ್ನುವುದಕ್ಕೆ ಅವುಗಳ ಸಂಹಿತೆ' ಎಂದು ಹೆಸರು. ಸಂಹಿತ ಎಂದರೆ ಕಲೆಹಾಕಿದುದು ಎಂದರ್ಥ. ಇನ್ನು ಮುಂದಿನ ಕಾಲದಲ್ಲಿ ಯಜ್ಞದ ಮಂತ್ರಗಳನ್ನೂ ವಿಧಿಗಳನ್ನೂ ಸ್ಪಷ್ಟೀಕರಿಸುವುದಕ್ಕೆ 'ಬ್ರಾಹ್ಮಣ' ಎಂಬ ಟೀಕಾ ಗ್ರಂಥಗಳು ರಚಿತವಾದವು.

**ಲೋಕಸ್ಥಿತಿ:—**ಗಂಗಾತೀರದ ಆರ್ಯರು ಪಂಜಾಬದ ಆರ್ಯರಿಗಿಂತ ಬಹಳ ಸುಧಾ ರಿಸಿದವರು. ಅಲ್ಲಿಯವರ ರಾಜ್ಯಗಳು ಹೆಚ್ಚು ವಿಸ್ತಾರವೂ ವೈಭವಪೂರ್ಣವೂ ಆಗಿ ದವು. ಅವರ ಯಜ್ಞ ಸಮಾರಂಭಗಳು ಬಹಳ ಸಂಭ್ರಮದಿಂದ ನಡೆಯುತ್ತಿದ್ದವು. ಯಜ್ಞಮಾಡುವುದರಲ್ಲಿ ಆಗಿನ ರಾಜರಲ್ಲಿ ಮೇಲಾಟವೇ ನಡೆಯುತ್ತಿತ್ತು. ಯಜ್ಞ ಕಾಲದಲ್ಲಿ ಪಶುಗಳನ್ನು ಬಲಿಕೊಡುತ್ತಿದ್ದರು. ಅವುಗಳ ಮಾಂಸವನ್ನು ಯಜ್ಞ ಕುಂಡದಲ್ಲಿ ಆಹುತಿಯ ರೂಪದಲ್ಲಿ ಹಾಕುತ್ತಿದ್ದರು. ರಾಜರ ಓಲಗದಲ್ಲಿ ಎಷ್ಟೋ ಬ್ರಾಹ್ಮಣ ಪಂಡಿತರು ಇರುತ್ತಿದ್ದರು. ಮಿಥಿಲೆಯ ಜನಕರಾಜನ ಬಳಿಯಲ್ಲಿ ಯಜು ರ್ವೇದದ ಕರ್ತೃವಾದ ಯಾಜ್ಞವಲ್ಕ್ಯನಿದ್ದನು. ಶ್ರೀರಾಮಚಂದ್ರನಲ್ಲಿ ವಸಿಷ್ಠನಿದ್ದನು. ಧಾರ್ಮಿಕ ಹಾಗೂ ಇತರ ವಿಷಯಗಳಲ್ಲಿ ರಾಜರು ಇವರ ಸಲಹೆ ಪಡೆಯುತ್ತಿದ್ದರು. ವಿದ್ಯಾರ್ಥಿಗಳು ವಿದ್ವಾಂಸನಾದ ಗುರುವಿನಲ್ಲಿದ್ದು, ಅವಶ್ಯವಿದ್ದರ ಸೇವಾವೃತ್ತಿಯನ್ನು ಕೈಕೊಂಡು, ವಿದ್ಯಾರ್ಜನೆ ಮಾಡುತ್ತಿದ್ದರು; ಹನ್ನೆರಡು ವರ್ಷ ಅಧ್ಯಯನ ಮಾಡಿದ ಬಳಿಕ, ಗುರುದಕ್ಷಿಣೆ ಕೊಟ್ಟು, ಗೃಹಸ್ಥಾಶ್ರಮಿಯಾಗುವುದಕ್ಕೆ ಗುರುವಿನ ಒಪ್ಪಿಗೆ ಕೇಳುತ್ತಿದ್ದರು. ಆಗಾಗ ಪಂಡಿತರ ಸಭೆಗಳು ಸೇರಿ, ನಾನಾ ಪ್ರಶ್ನೆಗಳ ಚರ್ಚೆ—ವಾದ ವಿವಾದಗಳು ನಡೆಯುತ್ತಿದ್ದವು. ಅವುಗಳಲ್ಲಿ ಗಾರ್ಗಿ, ಮೈತ್ರೇಯಿಯವರಂತಹ ಹೆಂಗ ಸರೂ ಪ್ರಾಮುಖ್ಯವಾಗಿ ಭಾಗವಹಿಸುತ್ತಿದ್ದರೆಂಬುದು ವಿಶೇಷವಾಗಿ ಗಮನಿಸತಕ್ಕ ಮಾತಾಗಿದೆ.

**ಆಚಾರಪ್ರಧಾನ ಧರ್ಮ**: ಹೀಗೆ ಧರ್ಮಗ್ರಂಥಗಳ ವಿಸ್ತಾರವಾಗಿದ್ದರೂ ಒಟ್ಟಿನಲ್ಲಿ ಆಚಾರಪ್ರಧಾನ ಧರ್ಮಕ್ಕೆ ಕೊಂಚ ಬೇರೆ ಒಲವುಂಟಾಯಿತೆಂದು ಹೇಳಬಹುದು ಉಚ್ಚ ತಾತ್ವಿಕ ವಿಚಾರಗಳು ಕೆಲಜನರಿಕೆ ಮಾತ್ರ ಅರ್ಥವಾಗುತ್ತವೆ. ಧಾರ್ಮಿಕ ವಿಧಿಗಳು ಬಹುಜನ ಸಮಾಜದಲ್ಲಿ ದೃಢಮೂಲವಾಗುತ್ತವೆ. ಆದುದರಿಂದ, ಕಾಲಾಂತರದಲ್ಲಿ ಮೂಲ ಭಾವನೆಗಳು ಲೋಪವಾಗಿ ಕರ್ಮಠತನವು ಮಾತ್ರ ಉಳಿಯುವ ಮಟ್ಟಿಗೂ ವಿಧಿಗಳ ಮಹತ್ತ್ವ ಬೆಳೆಯಿತು. ಧರ್ಮವು ಯಜ್ಞ ಯಾಗಾದಿಗಳಲ್ಲಿಯೇ ಅಡಕವಾಗಿದೆ ಎಂದು ಸಾಮಾನ್ಯಜನರ ಕಲ್ಪನೆಯಾಗತೊಡಗಿತು.

## ಪ್ರಶ್ನೆಗಳು

೧. ಮಹಾಭಾರತವು ಆರ್ಯರ ಜ್ಞಾನಕೋಶವೇ ಎನ್ನಲಡ್ಡಿಯಿಲ್ಲ'– ಈ ವಾಕ್ಯವನ್ನು ವಿವರವಾಗಿ ವಿವೇಚಿಸಿ.
೨. 'ವೇದಗಳು ಅಪೌರುಷೇಯ ? ಎಂದರೇನು ?
೩. ಚಾತುರ್ವರ್ಣ್ಯ ಮತ್ತು ನಾಲ್ಕು ಆಶ್ರಮಗಳು ಇವನ್ನು ಕುರಿತು ಟಿಪ್ಪಣಿ ಬರೆಯಿರಿ.
೪. ಉಪನಿಷತ್ತುಗಳ ಮಹತ್ತ್ವವನ್ನು ಹೇಳಿರಿ.

# ೨. ಬುದ್ಧ–ಮಹಾವೀರರ ಸಂದೇಶ

## (ಕ್ರಿ. ಪೂ. ೬ನೆಯ ಶತಕ)

**ಬೌದ್ಧಧರ್ಮದ ಹುಟ್ಟಿಗೆ ಕಾರಣಗಳು** :– ಆರ್ಯ ಸಂಸ್ಕೃತಿಯ ಪ್ರಗತಿಪರ ಪ್ರಸಾರದೊಂದಿಗೆ ಅದರಲ್ಲಿ ದೋಷಗಳುಂಟಾದವು. ಈ ಜಗತ್ತಿನಲ್ಲಿ ಒಳಿತು ಕೆಡಕುಗಳು ತಿಳಿಯದಂತೆ ಬೆರೆತುದು ಕಂಡುಬರುತ್ತದೆ. ಸಣ್ಣ ದೋಷಗಳು ಕಾಲಾಂತರದಲ್ಲಿ ಬಲಿಯುತ್ತವೆ. ಆರ್ಯರು ಆರ್ಯೇತರರನ್ನು ತಮ್ಮೊಳಗೆ ಕೂಡಿಸಿಕೊಂಡರು. ದಿನದಿನಕ್ಕೆ ಈ ಸಮ್ಮಿಶ್ರಣ ಹೆಚ್ಚುತ್ತ ಹೋಯಿತು. ಧರ್ಮಕ್ಕಾಗಿ ಮಾಡುವ ಯಜ್ಞ ಯಾಗಗಳು ಕಾಲಾಂತರದಲ್ಲಿ ಅತಿಯಾಗಿ ಹೆಚ್ಚಿ, ಯಜ್ಞದ ನಿಮಿತ್ತದಿಂದ ಅನೇಕ ಪಶುಗಳ ವಧೆಯಾಗತೊಡಗಿತು. ಕರ್ಮಠತನದ ಪ್ರಸ್ಥ ಬೆಳೆದು ಮೂಲಧರ್ಮತತ್ತ್ವಗಳು ಲೋಪವಾಗತೊಡಗಿದವು. ಯಜ್ಞದಿಂದ ಮೋಕ್ಷವೆಂಬ ತಿಳುವಳಿಕೆಯಿದ್ದುದರಿಂದ ವೈಯಕ್ತಿಕ ಆಚರಣದಲ್ಲಿಯ ಶೈಥಿಲ್ಯದ ಪರಿವೆಯಿಲ್ಲದೆ ಯಜ್ಞ ವಿಷಯಕ ಕೃತ್ಯಗಳಲ್ಲಿಯೇ ಜನರು ಹೆಚ್ಚಾಗಿ ತೊಡಗಿಕೊಂಡರು. ದಿನದಿನಕ್ಕೆ ಹೆಚ್ಚುತ್ತಿದ್ದ ಈ ಕೃತ್ರಿಮತೆ ನಿಜವಾದ ವಿಚಾರವಂತರ ಅಸಮಾಧಾನಕ್ಕೆ ಕಾರಣವಾಯಿತು. ಇದಕ್ಕೆ ಉಪಾಯವೆಂದು ಉಪನಿಷತ್ಕಾರರು ತಪಶ್ಶಕ್ತಿಯ ಮತ್ತು ತತ್ತ್ವಚಿಂತನೆಯ ಹಾದಿ ತೋರಿ

ದರು. ಆದರೆ ಉಪನಿಷತ್ತುಗಳಲ್ಲಿಯ ತತ್ತ್ವಜ್ಞಾನದಿಂದ ಪಂಡಿತರ ಬಾಯಾರಿಕೆ ತಣಿದರೂ ಅದು ಸಾಮಾನ್ಯ ಜನತೆಗೆ ನಿಲುಕದಂತಿತ್ತು. ಅವರಿಗೆ ಯಜ್ಞದ ಕರ್ಮಕಾಂಡ ಅಸಮಾಧಾನಕಾರಕವೆನಿಸುತ್ತಿತ್ತು. ಉಚ್ಚ ತತ್ತ್ವಜ್ಞಾನ ಅಗಮ್ಯವೆನಿಸುತ್ತಿತ್ತು. ಇಂತಹ ಸ್ಥಿತಿಯಲ್ಲಿ ಸಮಾಜಕ್ಕೆ ನಡುವಿನ ಸುಗಮ ವಿಚಾರಸರಣಿಯೊಂದು ಬೇಕಾಗಿತ್ತು.

ಒಟ್ಟಿನಲ್ಲಿ, ಜಾತಿಜಾತಿಗಳಲ್ಲಿಯ ವಿಭಾಗ, ಅವುಗಳ ನಿಯಮದಲ್ಲಿ ವಿಷಮತೆ, ಮೂಲಧರ್ಮತತ್ತ್ವಗಳ ಲೋಪ, ಆಚಾರದಲ್ಲಿಯ ಕೃತ್ರಿಮತೆ ಮತ್ತು ತತ್ತ್ವಚಿಂತನೆಯ ಗೂಢತೆ ಇತ್ಯಾದಿ ದೊಷಗಳಿಂದಾಗಿ ಬಹುಜನ ಸಮಾಜವು ಒಂದು ಬಗೆಯ ಮುಂದುಗಾಣದ ಅವಸ್ಥೆಯಲ್ಲಿದ್ದಾಗ ಮಹಾತ್ಮಾ ಗೌತಮ ಬುದ್ಧನ ಉದಯ ವಾಯಿತು. ಹೆಚ್ಚೇನು, ಈ ದೋಷಗಳ ನಿವಾರಣೆ ಮಾಡುವದೇ ಅವನ ಆಯುಷ್ಯದ ಕಾರ್ಯವಾಗಿತ್ತು.

**ಗೌತಮನ ಚರಿತ್ರೆ** : ನೇಪಾಳದ ದಕ್ಷಿಣ ಗಡಿಯ ಪ್ರದೇಶದಲ್ಲಿ ಶಾಕ್ಯ ಎಂಬ ಜನರು ನೆಲಸಿದ್ದರು. ಅದರ ಪೂರ್ವದಲ್ಲಿ ಲಿಚ್ಛವೀ ಜನರ ಮತ್ತು ಅದರಾಚೆ ಮಗಧರ ರಾಜ್ಯಗಳಿದ್ದವು; ಪಶ್ಚಿಮದಲ್ಲಿ ಕೋಸಲ ದೇಶವಿತ್ತು. ಕಪಿಲವಸ್ತು ಎಂಬುದು ಶಾಕ್ಯರ ರಾಜಧಾನಿ. ಅಲ್ಲಿ ಆಳುತ್ತಿದ್ದ ಶಾಕ್ಯರಾಜನಾದ ಶುದ್ಧೋದನನಿಗೆ ಕ್ರಿ. ಪೂ. ೫೬೩ರಲ್ಲಿ ಒಬ್ಬ ಮಗನು ಹುಟ್ಟಿದನು. ಅವನೇ ಗೌತಮ ಬುದ್ಧ. ಅವನ ಹುಟ್ಟು ಹೆಸರು ಸಿದ್ಧಾರ್ಥ. ತಂದೆಗೆ ಅವನೊಬ್ಬನೇ ಮಗ. ತಂದೆ ಅವನಿಗೆ ಉತ್ತಮ ಶಿಕ್ಷಣ ವನ್ನಿತ್ತನು; ಮತ್ತು ಅವನು ಧನುರ್ವಿದ್ಯೆಯಲ್ಲಿ ಪ್ರವೀಣನಾದನು. ಸಿದ್ಧಾರ್ಥನು ೧೬ ವರುಷದವನಿದ್ದಾಗ ಧನುರ್ವಿದ್ಯಾ ಕೌಶಲ್ಯದಿಂದ ಒಂದು ಕಠಿಣವಾದ ಪಣವನ್ನು ಗೆದ್ದನು; ಆಗ ಯಶೋಧರೆ ಎಂಬ ರಾಜಕನ್ಯೆಯೊಡನೆ ಅವನ ಮದುವೆಯಾಯಿತು. ಮುಂದೆ ಅವನಿಗೆ ರಾಹುಲನೆಂಬ ಮಗನು ಜನಿಸಿದನು. ಹೀಗೆ ರಾಜೈಶ್ವರ್ಯದ ಸುಖೋಪಭೋಗವನ್ನು ಅನುಭವಿಸುವ ತರುಣನು, ವಾಸ್ತವವಾಗಿ ಸ್ವೇಚ್ಛಾವಿಲಾಸ ದಲ್ಲಿ ಮಗ್ನನಾಗಿರಬೇಕು. ಆದರೆ ಸಿದ್ಧಾರ್ಥನ ಮನಸ್ಸಿಗೆ ಐಹಿಕ ವಿಷಯವು ಅಷ್ಟೊಂದು ರುಚಿಸಲಿಲ್ಲ. ಅವನು ಎಲ್ಲ ಕಡೆಗೂ ಸೂಕ್ಷ್ಮವಾಗಿ ನಿರೀಕ್ಷಿಸಿ ವಿಚಾರ ಮಾಡುತ್ತಿದ್ದನು. ಯಜ್ಞದಿಂದ ಮೋಕ್ಷ ಹೇಗೆ ಸಿಗುವದು ? ಯಜ್ಞದಲ್ಲಾಗುವ ವಧೆ ದೇವರಿಗೆ ಸೇರುವುದೇ ? ಸಮಾಜ ನಿಯಮಗಳಲ್ಲಿಯ ಅನ್ಯಾಯವು ದೇವರಿಗೆ ಸಮ್ಮತವೇ ? ಇತ್ಯಾದಿಯಾಗಿ ಹಗಲಿರುಳು ಅವನ ವಿಚಾರ. ಅದರಲ್ಲಿ ಸಮಾಧಾನ ದೊರೆಯದಿರಲು ಆ ಬಗ್ಗೆ ಅವನ ತಳಮಳವು ಹೆಚ್ಚತೊಡಗಿತು. ಕೊನೆಗಂತೂ ಅವನು ಒಬ್ಬ ತರುಣನ ಶವವನ್ನು, ಮಹಾರೋಗಿಯೊಬ್ಬನ ಅವಸ್ಥೆಯನ್ನು ಕಂಡು ಜೀವನವು ನಶ್ವರವೆಂದು ನಿರ್ಧರಿಸಿ, ಸಂಸಾರಸುಖವನ್ನು ಬಿಟ್ಟುಕೊಟ್ಟು ಅಡವಿಯ ಹಾದಿ ಹಿಡಿದನೆಂದು ಹೇಳುತ್ತಾರೆ. ಆದರೆ ಈ ದಂತ ಕಥೆಯಂತಹ ತಾತ್ಕಾಲಿಕ ಕಾರಣ ಗಳಿಂದ ಅವನಲ್ಲಿ ವೈರಾಗ್ಯವು ಹುಟ್ಟಿತೆಂದು ತಿಳಿಯುವದಕ್ಕಿಂತ, ಅದು ದೀರ್ಘ ವಿಚಾರದ ಪರಿಪಾಕವೆಂದು ತಿಳಿಯುವದೇ ಹೆಚ್ಚು ಸಯುಕ್ತಿಕವಾದುದು. ಅರಣ್ಯದ ಏಕಾಂತ

ವಾಸದಲ್ಲಿ, ಅಧ್ಯಯನದಲ್ಲಿಯೂ ತಪಶ್ಚರ್ಯೆಯಲ್ಲಿಯೂ ಅವನು ಆರು ವರುಷಗಳನ್ನು ಕಳೆದನು; ಆದರೂ ಅವನ ತಳಮಳವು ಶಾಂತವಾಗಲಿಲ್ಲ. ಕೊನೆಗೆ ಗಯೆಗೆ ಬಂದು ಒಂದು ಮರದಡಿಯಲ್ಲಿ ಶಾಂತವಾಗಿ ವಿಚಾರ ಮಾಡುತ್ತ ಕುಳಿತಾಗ, ಒಮ್ಮೆಲೆ ಅವನಿಗೆ ದಿವ್ಯಜ್ಞಾನವು ಪ್ರಾಪ್ತವಾಗಿ ಅವನ ತಳಮಳವು ಶಾಂತವಾಯಿತು. ಸಿದ್ಧಾರ್ಥನಿಗೆ ಯಾವ ಮರದಡಿಯಲ್ಲಿ ದಿವ್ಯಜ್ಞಾನವಾಯಿತೋ ಅದಕ್ಕೆ 'ಬೋಧಿವೃಕ್ಷ' ಎಂದೆನ್ನುತ್ತಾರೆ. ಅದರ ಗುರುತು-ಚಿಹ್ನಗಳು ಬುದ್ಧಗಯೆಯಲ್ಲಿ ಈಗಲೂ ಇವೆ; ಅದರಿಂದ ಬುದ್ಧಗಯೆ ಜಗತ್ತಿನ ಎಲ್ಲ ಬೌದ್ಧಧರ್ಮೀಯರಿಗೂ ಪವಿತ್ರ ಯಾತ್ರಾ ಸ್ಥಳವಾಗಿದೆ. ಅಶೋಕನ ಮಗಳಾದ ಸಂಘಮಿತ್ರೆ ಈ ಬೋಧಿವೃಕ್ಷದ ಒಂದು ಟೊಂಗೆಯನ್ನು ಬೌದ್ಧಧರ್ಮದ ಪ್ರಸಾರಾರ್ಥವಾಗಿ ಸಿಂಹಳ ದ್ವೀಪದಲ್ಲಿ ಅನುರಾಧಾಪುರದಲ್ಲಿ ನಟ್ಟಳು.



ಗಾಂಧಾರ (ಕಂದಹಾರ) ದಲ್ಲಿಯ ಬುದ್ಧನ ಪೂರ್ಣಾಕೃತಿ ಮೂರ್ತಿ

**ಉಪದೇಶ** : ಆತ್ಯಂತಿಕ ಮೋಕ್ಷವು ಅಥವಾ ನಿರ್ವಾಣವು ಯಾವ ಬಾಹ್ಯೋಪಚಾರಗಳಿಂದಲೂ ಸಾಧ್ಯವಿಲ್ಲ; ಶುದ್ಧಾಚರಣೆ, ದಯೆ, ಪ್ರೇಮ, ಪರೋಪಕಾರ ಮತ್ತು ಅಹಿಂಸೆ ಇವುಗಳನ್ನು ಅದು ಅವಲಂಬಿಸಿದೆ; ಎಲ್ಲ ಧಾರ್ಮಿಕ ಕೃತ್ಯಗಳಿಗಿಂತಲೂ ಸದ್ವರ್ತನವೇ ಹೆಚ್ಚು ಶ್ರೇಷ್ಠ, ಎಂದು ಬುದ್ಧನು ಕಂಡುಕೊಂಡನು (೧) ಜೀವಿತವು ದುಃಖಮಯವಾಗಿದೆ, (೨) ಆ ದುಃಖಕ್ಕೆ ಕಾರಣವುಂಟು, (೩) ದುಃಖದ ಕೊನೆಯಾಗಬೇಕು, (೪) ಅದಕ್ಕಾಗಿ ಸರಿಯಾದ ಹಾದಿ ಹುಡುಕಬೇಕು. ದುಃಖದ ಮೂಲ ಮೋಹ ಅಥವಾ ಆಸಕ್ತಿ; ಅದರ ನಿರ್ಮೂಲವಾದರೆ ದುಃಖ ನಿಃಶೇಷವಾಗಿ ಆನಂದವುಂಟಾಗುವದು. ಇವು ಅವನ ಉಪದೇಶದ ಸೂತ್ರಗಳು

ತತ್ಕಾಲೀನ ಪರಂಪರಾಗತ ಧರ್ಮಕಲ್ಪನೆ ಅವನ ಬುದ್ಧಿಗೆ ಹಿಡಿಸಲಿಲ್ಲ. ಯಜ್ಞಯಾಗಾದಿ ಕೃತ್ಯಗಳಿಂದ ಮೋಕ್ಷಪ್ರಾಪ್ತಿಯಾಗಲಾರದು; ವೇದವು ಅಪೌರುಷೇಯವಲ್ಲ. ಆದುದರಿಂದ ಅದರ ಪ್ರತಿಯೊಂದು ನುಡಿಯನ್ನು ಪ್ರಮಾಣವೆಂದು ಮನ್ನಿಸುವ ಕಾರಣವಿಲ್ಲ.

ಹೀಗೆ ಅನೇಕ ವಿಷಯಗಳನ್ನೆತ್ತಿ ತತ್ಕಾಲೀನ ಧರ್ಮಕಲ್ಪನೆಯ ಮೇಲೆ ಅವನು ಲಗ್ಗೆಯಿಟ್ಟನು ಮತ್ತು ತಾನು ಸನ್ಯಾಸವನ್ನು ಸ್ವೀಕರಿಸಿ, ಇತರರಿಗೂ ಆ ದೀಕ್ಷೆಕೊಡಲಾರಂಭಿಸಿದನು. ಜನರ ಮೇಲೆ ಅವನ ಉಪದೇಶದ ಒಳ್ಳೇ ಪರಿಣಾಮವಾಗಿ, ಅವರು ಅವನನ್ನು 'ಬುದ್ಧ' (ತಿಳಿದವ) ನೆಂದೂ ಮಹಾತ್ಮನೆಂದೂ ಕರೆದರು; ಅವನ ಪಂಥದಲ್ಲಿ ಸೇರತೊಡಗಿದರು. ಅವನ ಪಂಥದಲ್ಲಿ ಪ್ರವೇಶಿಸಲು ಮೂರು ಮೆಟ್ಟಲುಗಳಿದ್ದವು. ಮೊದಲು ಗೃಹಸ್ಥಾಶ್ರಮಿಯಾಗಿದ್ದು 'ಉಪಾಸಕ' ನಾಗಬೇಕು; ಬಳಿಕ 'ಭಿಕ್ಷುಗತಿಕ' ವೆಂಬ ಮಧ್ಯದ ಅವಸ್ಥೆಯಲ್ಲಿ ಕೆಲಕಾಲ ಕಳೆದಮೇಲೆ ಸನ್ಯಾಸವನ್ನು ಹೊಂದಿ ಭಿಕ್ಷುವಾಗಬೇಕು; ಬೌದ್ಧಧರ್ಮದಲ್ಲಿ ಮೋಕ್ಷಕ್ಕೆ ಸಮಾನವಾದ ಅತ್ಯುಚ್ಚಪದವೆಂದರೆ 'ಅರ್ಹತ್'. ಬೌದ್ಧಧರ್ಮವು ನಿರೀಶ್ವರವಾದಿ ಧರ್ಮವು.

**ಮೂರು ಪ್ರಧಾನ ವಿಷಯಗಳು :** ಬುದ್ಧನು ತನ್ನ ಧರ್ಮಪ್ರಸಾರದಲ್ಲಿ ಮೂರು ವಿಷಯಗಳಿಗೆ ಪ್ರಾಧಾನ್ಯವನ್ನಿತ್ತನು. (೧) ಬುದ್ಧ ಸಂಘದಲ್ಲಿ ಭಿಕ್ಷುಣಿಯಾಗಿ ಸೇರಲು ಹೆಂಗುಸರಿಗೆ ಒಪ್ಪಿಗೆ ಕೊಟ್ಟನು; ಮತ್ತು ಆಜನ್ಮವಾಗಿ ಹಾಗೆಯೇ ಸನ್ಯಸ್ತವೃತ್ತಿಯಿಂದ ಹಾಗೂ ಸ್ವತಂತ್ರತೆಯಿಂದ ಬೇಕಾದರೆ ಇರಬಹುದೆಂದು ಅವರಿಗೆ ದಾರಿ ತೆರೆದಿಟ್ಟನು. (೨) ತನ್ನ ಪಂಥದಲ್ಲಿ ಸೇರುವವರ ವರ್ಣಭೇದದ ಉಚ್ಚ ನೀಚ ಭಾವವನ್ನು ತೊಡೆದುಹಾಕಿ ಸಮತೆಯನ್ನು ಸ್ಥಾಪಿಸಿದನು. ಯಾವ ಜಾತಿಯವನಾದರೂ ಅವನ ಧರ್ಮದಲ್ಲಿ ಸೇರಬಹುದಿತ್ತು. ಹೀಗಾದ ಮೇಲೆ ಅವನ ಜಾತಿ ನಷ್ಟವಾಗುವುದು. (೩) ಧಾರ್ಮಿಕ ತತ್ವಗಳನ್ನು ಬೋಧಿಸುವದಕ್ಕಾಗಿ ಸಂಸ್ಕೃತದಂತಹ ಕಠಿಣವಾದ ಕೆಲವೇ ಜನರಿಗೆ ತಿಳಿಯುವ ಭಾಷೆಯನ್ನು ಬಳಸದೆ, ತತ್ಕಾಲೀನ ಜಾನಪದ ಭಾಷೆಯಾದ ಪಾಲಿಯನ್ನೇ ಬಳಸಿದನು. ಇದರಿಂದ ಅವನ ಉಪದೇಶವು ಭರದಿಂದ ಪ್ರಸಾರವಾಯಿತು. ತನ್ನ ಶಿಷ್ಯರಿಗೆ ಸನ್ಯಸ್ತ ವೃತ್ತಿಯಿಂದಿದ್ದು ಸಂಘವನ್ನು ಕಟ್ಟಲು ಅವನು ಉಪದೇಶಿಸಿದನು. ಹೀಗೆ ಧರ್ಮಪ್ರಸಾರಕ್ಕಾಗಿ ಸನ್ಯಾಸಿಗಳಾದ ಭಿಕ್ಷುಗಳ ಸಂಸ್ಥೆಗಳನ್ನು ಅಸ್ತಿತ್ವದಲ್ಲಿ ತಂದುದರಲ್ಲಿ ಅವನ ಚಾತುರ್ಯವು ಕಂಡುಬರುತ್ತದೆ.

**ಬುದ್ಧನ ಬೋಧೆ :** ಪ್ರತಿಯೊಬ್ಬ ಅನುಯಾಯಿಯು ಬುದ್ಧ, ಧರ್ಮ, ಸಂಘ ಈ ಮೂರರಲ್ಲಿ ದೃಢವಿಶ್ವಾಸವುಳ್ಳವನಾಗಿರಬೇಕೆಂದು ಅವನ ಕಟ್ಟಪ್ಪಣೆಯಿತ್ತು. ಅಕ್ರೋಧದಿಂದ ಕ್ರೋಧವನ್ನು ಗೆಲ್ಲಬೇಕು, ಅಸಾಧುವನ್ನು—ದುಷ್ಟನನ್ನು—ಸಾಧುತ್ವದಿಂದ ಗೆಲ್ಲಬೇಕು, ಇಷ್ಟೇ ಅಲ್ಲ, ತನಗೆ ಕೇಡನ್ನು ಬಗೆದವನಿಗೂ ಒಳ್ಳೆಯದನ್ನು ಮಾಡಬೇಕು ಎಂಬುದಾಗಿ ಅವನು ಉಪದೇಶಿಸಿದನು. ಯೇಸೂ ಕ್ರಿಸ್ತನ ಉಪದೇಶಕ್ಕೂ ಇದಕ್ಕೂ ಬಹಳ ಸಾಮ್ಯವಿದೆ. ಪ್ರತಿಯೊಬ್ಬನು ಶೀಲವನ್ನು ಉಚ್ಚವಾಗಿಟ್ಟುಕೊಳ್ಳಬೇಕು, ಸನ್ಯಸ್ತ ವೃತ್ತಿಯಿಂದಿರಬೇಕು, ತಾತ್ವಿಕ ವಿಷಯಗಳ ಚಿಂತನೆ ಮಾಡಬೇಕು—ಇದು ಬುದ್ಧನ ಉಪದೇಶದ ಸಾರ. ಈ ಮೂರಕ್ಕೆ ಬೌದ್ಧಧರ್ಮ ವಾಙ್ಮಯದಲ್ಲಿ ಶೀಲ, ಸಮಾಧಿ, ಪ್ರಜ್ಞೆ, ಎಂಬ ಸಂಜ್ಞೆಗಳುಂಟು.

**ಧಾರ್ಮಿಕ ಸಹಿಷ್ಣುತೆ :** ತನ್ನ ಮತದ ಪ್ರಚಾರಕ್ಕಾಗಿ ಬುದ್ಧನು ಬಹಳ ಕಡೆಗೆ ಸಂಚರಿಸಿದನು. ಆದರೆ ಆತನ ಭಿನ್ನಮತಕ್ಕಾಗಿ ಆತನನ್ನು ಸನಾತನ ಹಿಂದು

ಗಳು ಎಂದೂ ಹಿಂಸಿಸಲಿಲ್ಲ. ಇಷ್ಟೇ ಅಲ್ಲ, ಮಗಧದ ರಾಜನಾದ ಅಜಾತಶತ್ರುವು ಅವನನ್ನು ಸನ್ಮಾನಿಸಿದನೆಂದು ಹಿಂದೆ ಹೇಳಿಯೇ ಇದೆ. ಭಾರತದ ಇತಿಹಾಸದಲ್ಲಿ ಕ್ರಿ. ಪೂ. ೬ ನೆಯ ಶತಕದಲ್ಲಿ ಕಂಡುಬರುವ ಈ ಧಾರ್ಮಿಕ ಸಹಿಷ್ಣುತೆ ಯುರೋಪದ ಇತಿಹಾಸದಲ್ಲಿ ಕ್ರಿ. ವ. ೧೬ ನೆಯ ಶತಕದಲ್ಲಿಯೂ ಕಾಣುವುದಿಲ್ಲ. ಈ ವಿಷಯದಲ್ಲಿ ಯುರೋಪವು ಭಾರತಕ್ಕಿಂತ ಇಪ್ಪತ್ತೆರಡು ನೂರು ವರುಷಗಳಿಂದ ಹಿಂದಿತ್ತು. ಇಂದು ಬೌದ್ಧಧರ್ಮವು ಹಿಂದೂ ಧರ್ಮದಿಂದ ಸ್ವತಂತ್ರವಾಗಿದ್ದರೂ ಸ್ವತಃ ಗೌತಮನ ಮನಸ್ಸಿನಲ್ಲಿ ಹೊಸ ಧರ್ಮಸ್ಥಾಪನೆಗಿಂತ ಹಿಂದೂ ಧರ್ಮ ಸುಧಾರಣೆಯ ಹೇತುವೆ ಪ್ರಮುಖವಾಗಿತ್ತೆಂದು ಕಾಣುತ್ತದೆ. ಏಕೆಂದರೆ, ಅವನ ಧರ್ಮದಲ್ಲಿಯೂ ಇಂದ್ರ ವರುಣಾದಿ ದೇವತೆಗಳಿದ್ದಾರೆ. ಅವನು ಕ್ರಿ. ಪೂ. ೪೮೩ ರಲ್ಲಿ, ತನ್ನ ವಯಸ್ಸಿನ ೮೦ ನೆಯ ವರುಷದಲ್ಲಿ ಮರಣಹೊಂದಿನು.* ಭಗವಾನ್ ಕೃಷ್ಣ, ಯೇಸುಕ್ರಿಸ್ತ ಅಥವಾ ಮಹಮ್ಮದ ಪೈಗಬಂರರಂತಹ ಜಗತ್ತಿನಲ್ಲಿಯ ದೊಡ್ಡ ಮಹಾತ್ಮರಲ್ಲಿ ಆತನ ಗಣನೆಯಾಗಬೇಕು.

**ಬೌದ್ಧಧರ್ಮಗ್ರಂಥ :** ಅವನ ಮೃತ್ಯುವಿನ ಅನಂತರ ಆತನ ಅನುಯಾಯಿಗಳು ರಾಜಗೃಹದಲ್ಲಿ ತಮ್ಮದೊಂದು ದೊಡ್ಡ ಸಭೆ ಕೂಡಿಸಿ, ಬುದ್ಧನ ಎಲ್ಲ ಉಪದೇಶಗಳನ್ನು ಸಂಗ್ರಹಿಸಿದರು. ಆ ಸಂಗ್ರಹಕ್ಕೆ 'ತ್ರಿಪಿಟಕ' ಎಂದು ಹೆಸರು. ಅದರಲ್ಲಿ ಧರ್ಮ, ವಿನಯ ಮತ್ತು ಅಭಿಧರ್ಮ ಎಂದು ಮೂರು ಭಾಗಗಳಿವೆ. ಧರ್ಮಪದದಲ್ಲಿ ಬುದ್ಧನು ಮಾಡಿದ ಉಪದೇಶವಿದೆ; ವಿನಯದಲ್ಲಿ ಭಿಕ್ಷುಗಳ ಆಚಾರ ನಿಯಮಗಳನ್ನು ಹೇಳಿದೆ; ಅಭಿಧರ್ಮದಲ್ಲಿ ಬೌದ್ಧ ತತ್ತ್ವಜ್ಞಾನವು ಗ್ರಥಿತವಾಗಿದೆ. ಇದಲ್ಲದೆ ಜಾತಕ ಕಥೆಗಳ ಸಂಗ್ರಹವೂ ಬೌದ್ಧಧರ್ಮಗ್ರಂಥಗಳಲ್ಲಿ ಗಣಿಸಲ್ಪಡುತ್ತಿದೆ. ಈ ಕಥೆಗಳು ಒಟ್ಟು ೫೪೦ ಇವೆ. ಇವುಗಳ ಸ್ವರೂಪ ಪಂಚತಂತ್ರ-ಇಸಾಬನೀತಿಗಳಂತೆ ಮನೋರಂಜಕವಾಗಿರುವದರಿಂದ ಅದರಲ್ಲಿಯ ಉಪದೇಶವು ಸಾಮಾನ್ಯ ಜನರ ಮನದಲ್ಲಿ ತಟ್ಟನೆ ಬಿಂಬಿಸುತ್ತದೆ. ಜಾತಕ ಎಂದರೆ ಜನ್ಮಸಂಬಧವಾದುದು. ಗೌತಮನಿಗೆ 'ಬೋಧಿಸತ್ತ್ವ' ಪದವು ಪ್ರಾಪ್ತವಾಗುವ ಮೊದಲು ಒಟ್ಟು ೫೪೭ ಜನ್ಮಗಳಲ್ಲಿ ಅವನು ಹಾಯ್ದುಬರಬೇಕಾಯಿತೆಂದು ಅದರಲ್ಲಿ ಹೇಳಿದೆ. ಬೇರೆ ಬೇರೆ ಕಾಲದಲ್ಲಿ ರಚಿತವಾದ ಈ ಕಥೆಗಳನ್ನು ಹಿಂದು ಗಡೆ ಯಾರೋ ಒಂದೆಡೆ ಕೂಡಿಸಿರಬೇಕೆಂದು ತೋರುತ್ತದೆ. ಈ ಕಥೆಗಳಲ್ಲಿ ಬೌದ್ಧ ಮತ್ತು ಬೌದ್ಧೇತರ ಸಾಹಿತ್ಯಗಳ ಬೆರಕೆಯಿದೆ. ಏಕೆಂದರೆ ಬೌದ್ಧ ಮತ್ತು ಬೌದ್ಧೇತರದಲ್ಲಿ ಅಷ್ಟು ಕಡುತರವಾದ ಭಿನ್ನತೆ ಆಗಿನ ಕಾಲದಲ್ಲಿ ಕಥಾಸಾಹಿತ್ಯದಲ್ಲಿ ಇದ್ದಿರಲಿಕ್ಕಿಲ್ಲ. ಈ ಕಥೆಗಳಿಂದ, ತತ್ಕಾಲೀನ ಎಂದರೆ ಸಾಮಾನ್ಯವಾಗಿ ಎರಡುಸಾವಿರ ವರ್ಷಗಳ ಹಿಂದಿನ ಭಾರತಿಯ ಜನಜೀವನದ ವಿಷಯವು ಚೆನ್ನಾಗಿ ತಿಳಿದುಬರುತ್ತದೆ.

**ಬೌದ್ಧಧರ್ಮದ ಪ್ರಸಾರ :** ಬುದ್ಧನ ಮರಣಾನಂತರ ಅಲ್ಪಕಾಲದಲ್ಲಿ ಬೌದ್ಧ ಧರ್ಮೀಯರು ಹಿಂದೂ ಧರ್ಮದಿಂದ ಬೇರೆಯಾದರು ಬೌದ್ಧಧರ್ಮವು ಭರದಿಂದ

* ಕ್ರಿ. ಪೂ. ೫೪೩ ಅವನ ಮೃತ್ಯುವಿನ ವರ್ಷವೆಂದು ಕೆಲವರ ಮತ. ಅದರಿಂದ ಗೌತಮನ ಜನ್ಮ ಕ್ರಿ. ಪೂ. ೬೨೩ರಲ್ಲಿ ಇರಬೇಕೆಂದು ಅವರು ತಿಳಿಯುತ್ತಾರೆ.

ಪ್ರಸಾರಹೊಂದಿತು. ಸಾಮಾನ್ಯ ಜನತೆಗೆ ತಿಳಿಯುವ ಸರಳ ಕಥೆಗಳ ರೂಪದಿಂದ ಅವರು ಧರ್ಮ ಬೋಧನೆ ಮಾಡುತ್ತಿದ್ದರು; ಅದು ಬಹಳ ಪರಿಣಾಮಕಾರಿಯಾಗಿತ್ತು. ಕರ್ಮಠತನಕ್ಕೂ ಸಾಮಾಜಿಕವಿಷಮತೆಗೂ ಬೇಸತ್ತಿದ್ದ ಜನರಿಗೆ ಬೌದ್ಧ ಧರ್ಮದ ಸುಗಮ ವಾದ ಮತ್ತು ಸದಾಚರಣ ಪ್ರಧಾನವಾದ ತತ್ತ್ವಗಳು ಮನವರಿಕೆಯಾಗತೊಡಗಿದವು ಅಲ್ಲದೆ ಶುದ್ಧ ಆರ್ಯರ ಶ್ರೇಷ್ಠತ್ವದ ವಿರುದ್ಧವಾಗಿ ಬಂಡೆಬ್ಬಿಸಲು ಬೌದ್ಧಧರ್ಮದ ರಾಜಮಾರ್ಗದಂತಹ ಮತ್ತೊಂದು ಸುಲಭಸಾಧನವು ಆರ್ಯೇತರರಿಗೆ ಯಾವುದು ಸಿಗ ಬೇಕು? ಬೌದ್ಧ ಭಿಕ್ಷುಗಳು ಸಂನ್ಯಸ್ತ ವೃತ್ತಿಯಿಂದ ಅದರ ಪ್ರಚಾರ ಮಾಡುತ್ತಿದ್ದರಿಂದ ಬೌದ್ಧರ ಧರ್ಮತತ್ತ್ವಗಳಿಗೆ ಸ್ವಾರ್ಥತ್ಯಾಗದ ಒಪ್ಪವು ಬಂದಿತು. ಮೇಲಾಗಿ ಅಶೋಕ ಮೊದಲಾದವರು ಮನಸ್ಸುಗೊಟ್ಟದರಿಂದ ಬೌದ್ಧಧರ್ಮಕ್ಕೆ ರಾಜಾಶ್ರಯವೂ ತುಂಬಾ ಸಿಕ್ಕಿತು. ಇಷ್ಟಿದ್ದಬಳಿಕ ಈ ಧರ್ಮವು ಭರದಿಂದ ಪ್ರಚಾರವಾದುದರಲ್ಲಿ ಆಶ್ಚರ್ಯವೇನು ? ಬೌದ್ಧರು ಕಾಲಕಾಲಕ್ಕೆ ಧರ್ಮಪರಿಷತ್ತನ್ನು ಕರೆದು ವಾದಗ್ರಸ್ತ ವಿಷಯಗಳನ್ನು ತೀರ್ಮಾ ನಿಸಿಕೊಳ್ಳುತ್ತಿದ್ದರು. ಬುದ್ಧನು ತೀರಿದ ಮೇಲೆ ನೂರಾರು ವರುಷಗಳ ತರುವಾಯ ಧರ್ಮಪರಿಷತ್ತಿನ ಎರಡನೆಯ ಅಧಿವೇಶನ ಕೂಡಿತ್ತು; ಮುಂದೆ ಅಶೋಕನು ಕರೆದದ್ದು ಅದರ ಮೂರನೆಯ ಅಧಿವೇಶನ. ಆ ತರುವಾಯದ ಕಾಲದಲ್ಲಿ ಬೌದ್ಧಧರ್ಮವು ಹಿಂದು ಸ್ಥಾನದಲ್ಲಿ ಮಾತ್ರವಲ್ಲ, ಇಡೀ ಆಶಿಯಾ ಖಂಡದಲ್ಲಿಯೇ ದೊಡ್ಡ ಧರ್ಮವಾಯಿತು. ಗ್ರೀಕರಾಜನಾದ ಮಿಲಿಂದನೂ ಕುಶಾನ ರಾಜನಾದ ಕನಿಷ್ಕನೂ ಈ ಧರ್ಮವನ್ನು ಸ್ವೀಕರಿಸಿದರು.

**ಬಾವೀ ಪ್ರತಿಕ್ರಿಯೆಯ ಸ್ವರೂಪ :** ಆದರೆ ಬೌದ್ಧಧರ್ಮದ ಯಶೋದುಂದಭಿ ಒಂದು ಕಡೆ ಮೊಳಗುತ್ತಿರುವಾಗ ಇನ್ನೊಂದುಕಡೆ ಪ್ರತಿಕ್ರಿಯೆಗೆ ಆರಂಭವಾಯಿತು. ಅದರಲ್ಲಿ ಒಡಕುಂಟಾಗಿ ಅನೇಕ ಪಕ್ಷಗಳು ಉತ್ಪನ್ನವಾದವು; ಧರ್ಮ ಪರಿಷತ್ತಿನಲ್ಲಿ ಏಕವಾಕ್ಯತೆ ಆಗದೆ ಹೋಯಿತು. ಕನಿಷ್ಕನ ಕಾಲದಲ್ಲಿ ಎಂದರೆ ಕ್ರಿ. ಶ. ೨ನೆಯ ಶತಕದಲ್ಲಿ ಅವರಲ್ಲಿ ಮಹಾಯಾನ ಮತ್ತು ಹೀನಯಾನ ಎಂಬ ಪಂಥಗಳು ಹುಟ್ಟಿದವು ಮಹಾಯಾನ ಪಂಥದವರು ಬುದ್ಧಮೂರ್ತಿಯ ಪೂಜೆ ಮಾಡಲಾರಂಭಿಸಿದರು; ಮತ್ತು ಬಹು ಜನರು ಜಾನಪದ ಭಾಷೆಯನ್ನು ಬಿಟ್ಟು ಸಂಸ್ಕೃತಕ್ಕೆ ಮೊರೆಹೊಕ್ಕರು. ಇದೇ ಸುಮಾರಿಗೆ ಹಿಂದೂ ಧರ್ಮೀಯರು ಬೌದ್ಧಧರ್ಮದಲ್ಲಿಯ ಗುಣದೋಷಗಳ ಮಾರ್ಮಿಕ ನಿರೀಕ್ಷಣೆಮಾಡಿ ತಮ್ಮ ಧರ್ಮದ ಪುನರುಜ್ಜೀವನದ ಕೆಲಸ ಕೈಕೊಂಡರು. ಬೌದ್ಧಧರ್ಮದ ಲ್ಲಿಯ ಸದ್ವರ್ತನ, ಭೂತದಯೆ, ಅಹಿಂಸೆಗಳನ್ನು ಅವರು ಸ್ವೀಕರಿಸಿದರು; ಸಮಾನತೆ ತತ್ತ್ವವನ್ನು ಒಪ್ಪಿದರು. ಭಕ್ತಿಗೆ ಪಟ್ಟಗಟ್ಟಿದರು. ಕರ್ಮಠತನವನ್ನು ಹೋಗಲಾಡಿಸಿದರು ಆದರೆ ಅಲ್ಲಿಯ ನಿರೀಶ್ವರವಾದವನ್ನು, ನಿವೃತ್ತಿಪ್ರಿಯತೆಯನ್ನು ಮಾತ್ರ ತ್ಯಜಿಸಿದರು. ವೇದಗಳ ವಿಷಯದಲ್ಲಿ ಪೂಜ್ಯಬುದ್ಧಿಯನ್ನು ಜಾಗ್ರತೆಗೊಳಿಸಿ ಪೂರ್ವಪರಂಪರೆ ಯೊಡನೆ ಹೊಸ ಸಂಬಂಧ ಜೋಡಿಸಿಕೊಂಡರು. " ಭಕ್ತಿ ಪ್ರಧಾನ ನಿಷ್ಕಾಮ ಕರ್ಮ ಯೋಗ''ದ ಪ್ರವೃತ್ತಿಪರ ಭಾಗವತ ಧರ್ಮವನ್ನು ಸ್ಥಾಪಿಸಿದರು. ಈ ಭಾಗವತ ಧರ್ಮವು ಕ್ರಿ. ಪೂ. ಎರಡನೆಯ ಶತಕದಲ್ಲಿಯೇ ಹುಟ್ಟಿ ಬೌದ್ಧಧರ್ಮದಂತೆಯೇ ಅದು ಹಬ್ಬುತ್ತ

ಲಿತ್ತು. ಉತ್ತರದಲ್ಲಿ ತಕ್ಷಶಿಲೆಯಿಂದ ದಕ್ಷಿಣದಲ್ಲಿ ಮಹಾರಾಷ್ಟ್ರದ ವರೆಗೆ ಅದು ಹಬ್ಬಿತು. ಇಷ್ಟೇ ಅಲ್ಲ, ಭಾರತದ ಹೊರಗೆ ಅರ್ಮಿನಿಯಾದಲ್ಲಿಯೂ ಅದರ ಪ್ರವೇಶವಾಯಿತು. ಕಾಲಾಂತರದಲ್ಲಿ ಮೂರ್ತಿ ಪೂಜೆಗೆ ಪ್ರಸಾರ ಹೆಚ್ಚಿ ಮೂಲದ ಪ್ರವೃತ್ತಿಪರ ಭಾಗವತ ಧರ್ಮದ ತೇಜಸ್ವೀಸ್ವರೂಪವು ಬದಲವಾಗುತ್ತ ಬಂದಿತು. ಆದರೂ ಹಿಂದೂ ಧರ್ಮದ ಪುನರಜ್ಜೀವನ ಕಾರ್ಯವು ಅಖಂಡವಾಗಿ ಸಾಗಿತ್ತು. ಆದುದರಿಂದ ಬುದ್ಧನ ಜನ್ಮಭೂಮಿಯಾದ ಭಾರತದಲ್ಲಿ ಇಂದು ಬೌದ್ಧಧರ್ಮದ ಪ್ರಚಾರ ಹೆಚ್ಚಿಲ್ಲ. ಆದರೆ ಭಾರತದ ಉತ್ತರ ದಕ್ಷಿಣಗಳಲ್ಲಿದ್ದ ಟಿಬೇಟ, ಚೀನ, ಜಪಾನ, ಸಿಂಹಳ ಇತ್ಯಾದಿ ದೇಶಗಳಲ್ಲಿ ಈ ಧರ್ಮವು ಇಲ್ಲಿಂದಲೇ ಪ್ರಚಾರವಾಯಿತು. ಇವುಗಳಲ್ಲಿ ಸಿಂಹಳದ್ವೀಪದಲ್ಲಿದ್ದ ಬೌದ್ಧಧರ್ಮೀಯ ಪರಂಪರೆ ಹೆಚ್ಚು ಪ್ರಾಚೀನವೂ ವಿಶ್ವಸನೀಯವೂ ಆಗಿದೆ. ಬೌದ್ಧ ಧರ್ಮದ ಶುದ್ಧ ಸ್ವರೂಪವು ಆ ಕಡೆಯಲ್ಲಿಯೇ ದೊರೆಯುವುದು ಹೆಚ್ಚು ಸಂಭವನೀಯವಾಗಿದೆ.

**ಮಹಾವೀರ ವರ್ಧಮಾನ** : ಮಹಾವೀರ ವರ್ಧಮಾನನು ಜೈನಧರ್ಮದ ಸಂಸ್ಥಾಪಕನೆಂದು ಸಾಮಾನ್ಯವಾಗಿ ಎಲ್ಲರ ತಿಳಿವಳಿಕೆ. ಆದರೆ ಜೈನರ ಅಭಿಪ್ರಾಯದಲ್ಲಿ ವೃಷಭದೇವನು* ಅದರ ಮೊದಲನೆಯತೀರ್ಥಂಕರ (ಸಂಸ್ಥಾಪಕ)ನು. ಅವನಿಂದ ವರ್ಧಮಾನನ ವರೆಗೆ ಒಬ್ಬರ ಹಿಂದೊಬ್ಬರಂತೆ ಇಪ್ಪತ್ತು ನಾಲ್ಕು 'ತೀರ್ಥಂಕರ'ರಾದರು. ಮತ್ತು ಅವರು ಜೈನಧರ್ಮದ ಪರಂಪರೆಯನ್ನು ಕಾಯ್ದರು. ಅವರಲ್ಲಿ ಭಗವಾನ್ ಪಾರ್ಶ್ವನಾಥನಿಂದ ಮಹಾವೀರನಿಗೆ ಸ್ಫೂರ್ತಿ ಉಂಟಾಯಿತು. ಪಾರ್ಶ್ವನಾಥನು ಐತಿಹಾಸಿಕ ಪುರುಷನಾದರೂ ಅವನ ಕಾಲವು ಅನಿಶ್ಚಿತವಾಗಿದೆ. (ಕ್ರಿ. ಪೂ. ೭೦೦ ಎಂದು ಕೆಲವರ ಮತ). ವರ್ಧಮಾನನ ಆಚರಣೆಯನ್ನು ನೋಡಿ ಜನರು ಅವನನ್ನು 'ಜಿನ' ಎನ್ನತೊಡಗಿದರು. ಆದುದರಿಂದ ವರ್ಧಮಾನನನ್ನೇ ಜೈನಧರ್ಮಸ್ಥಾಪಕನೆಂದು ತಿಳಿಯಲು ಅಡ್ಡಿಯಿಲ್ಲ. ಇವನು ಗೌತಮನ ಸಮಕಾಲೀನನು; ಕ್ರಿ. ಪೂ. ೫೪೦ರಲ್ಲಿ ಗಂಗೆಯ



ಮಹಾವೀರ ವರ್ಧಮಾನ

* ಕೈಲಾಸಚಂದ್ರ ಶಾಸ್ತ್ರೀಕೃತ 'ಜೈನಧರ್ಮ'. ಪು. ೧೧

ಉತ್ತರಕ್ಕೆ ವೈಶಾಲೀ ಪ್ರಾಂತದ ಕುಂದಗ್ರಾಮದಲ್ಲಿ ಲಿಚ್ಛವಿ ಕ್ಷತ್ರಿಯ ವಂಶದಲ್ಲಿ ಇವನು ಹುಟ್ಟಿದನು. ವಿದೇಹ, ಅಂಗ, ಮಗಧಗಳ ಅರಸುಮನೆತನಗಳೊಡನೆ ಅವನ ಆಪ್ತಸಂಬಂಧವಿದ್ದುದರಿಂದ ಅವನ ಮತಪ್ರಚಾರದ ಕೆಲಸವು ಸುಲಭವಾಯಿತು. ಗೌತಮನಂತೆಯೇ ಈತನೂ ಐಹಿಕ ಸುಖವನ್ನು ತ್ಯಜಿಸಿ, ಹನ್ನೆರಡು ವರುಷ ಘೋರ ತಪಸ್ಸನ್ನಾಚರಿಸಿದನು. ಆಗವನಿಗೆ 'ಕೇವಲ' ಜ್ಞಾನಪ್ರಾಪ್ತಿಯಾಯಿತು. ಆ ಬಳಿಕ ಅವನು ಜನರಲ್ಲಿ ಪ್ರಕಟನಾದನು. ಆದುದರಿಂದ ಜನರು ಅವನನ್ನು 'ಮಹಾವೀರ' ಅಥವಾ 'ಜಿನ' (ಗೆಲ್ಲುವವ, ಇಂದ್ರಿಯಗಳನ್ನು ಅಂಕೆಯಲ್ಲಿಡುವವ) ಎಂದು ಎನ್ನತೊಡಗಿದರು. ಇದರಿಂದಲೇ ಇವನ ಧರ್ಮಕ್ಕೂ ಅನುಯಾಯಿಗಳಿಗೂ 'ಜೈನ' ಎಂಬ ಹೆಸರಾಯಿತು. ವರ್ಧಮಾನನು ತನ್ನ ವಯಸ್ಸಿನ ೭೨ನೆಯ ವರುಷದಲ್ಲಿ ಮರಣ ಹೊಂದಿದನು (ಕ್ರಿ. ಪು. ೪೬೮).

**ಜೈನಧರ್ಮದ ತತ್ತ್ವಗಳು :** ಸಂಸಾರವು ದುಃಖಮಯವಾದುದು; ಅವರವರ ಕರ್ಮವೇ ದುಃಖಕ್ಕೆ ಕಾರಣ; ತನ್ನ ಕರ್ಮದ ಫಲವನ್ನು ಭೋಗಿಸದೇ ಯಾವನಿಗೂ ಬಿಡುಗಡೆಯಿಲ್ಲ; ಆದುದರಿಂದ ಅದರೊಳಗಿಂದ ಬಿಡುಗಡೆ ಹೊಂದುವುದಕ್ಕೆ ಕರ್ಮಸನ್ಯಾಸವೊಂದೇ ಮಾರ್ಗವು. ಇದಕ್ಕಾಗಿ ಜೀವನು ಒಂದು ವೇಳೆ ಅನೇಕ ಜನ್ಮಗಳಲ್ಲಿ ಸಂಚರಿಸಬೇಕಾದೀತು. ಕರ್ಮಸಂನ್ಯಾಸವು ಸಾಧ್ಯವಾಗಬೇಕಾದರೆ ಪ್ರತಿಯೊಬ್ಬನು ಸಮ್ಯಕ್‌ಜ್ಞಾನ, ಸಮ್ಯಕ್‌ದೃಷ್ಟಿ ಮತ್ತು ಸಮ್ಯಕ್ ಆಚಾರ ಈ ಮೂರನ್ನವಲಂಬಿಸಬೇಕು. ಜೈನಧರ್ಮವು ಆತ್ಮವಾದಿ. ಜೈನರ ಮತದಂತೆ ಈಶ್ವರನೆಂದರೆ ಬೇರೆ ಯಾರೂ ಇರದೆ, ಮಾನವೀ ಆತ್ಮದ ಸುಪ್ತಸಾಮರ್ಥ್ಯದ ಆತ್ಯಂತಿಕ ವಿಕಾಸವು. ಅವನ ಸಾಧನೆಗಳೆಂದರೆ ತಪಶ್ಚರ್ಯೆ ಮತ್ತು ದೇಹದಂಡನ. ಜೀವವು ದುಃಖಮಯವಿರುವುದರಿಂದ ಶರೀರವನ್ನು ದಂಡಿಸಿ ದುಃಖಮಯ ಜೀವಿತವನ್ನು ಕೊನೆಗೊಳಿಸಿಕೊಳ್ಳುವುದು ಜೈನಧರ್ಮಕ್ಕೆ ಸಮ್ಮತವಾಗಿದೆ. ಈ ರೀತಿಗೆ 'ಸಲ್ಲೇಖನ' ಎಂದು ಹೆಸರಿದೆ. ಆದರೆ ಸಲ್ಲೇಖನವೆಂದರೆ ಭವಣಿಗೆ ಬೇಸತ್ತು ಮಾಡಿಕೊಳ್ಳುವ ಆತ್ಮಹತ್ಯೆಯಲ್ಲ ಎಂಬುದನ್ನು ನೆನಪಿಡಬೇಕು.

**ಬೌದ್ಧ-ಜೈನ ಧರ್ಮಗಳಲ್ಲಿಯ ಸಾಮ್ಯ :** ಬೌದ್ಧಧರ್ಮದಂತೆಯೇ ಜೈನಧರ್ಮವೂ ತತ್ಕಾಲೀನ ಧಾರ್ಮಿಕ ಕೃತ್ರಿಮತೆ ಮತ್ತು ವರ್ಣವ್ಯವಹಾರದಲ್ಲಿಯ ವಿಷಮತೆಗಳನ್ನು ನಿಷೇಧಿಸುವುದಕ್ಕಾಗಿಯೇ ಹುಟ್ಟಿರುವುದರಿಂದ ಎರಡರೊಳಗೂ ಬಹಳ ಸಾಮ್ಯವಿದೆ. ನಿರೀಶ್ವರವಾದ, ಕರ್ಮಠತನದ ನಿಷೇಧ, ವರ್ಣಗಳ ಶ್ರೇಷ್ಠ-ಕನಿಷ್ಠತೆಗಳ ವಿರುದ್ಧ ಬಂಡಾಯ, ವೇದಗಳ ಅಪೌರುಷೇಯತೆಯ ನಿರಾಕರಣೆ, ಅಹಿಂಸೆ ಸಂನ್ಯಾಸ ಸದ್ವರ್ತನ ಈ ಮೂರಕ್ಕೆ ಪ್ರಾಶಸ್ತ್ಯ: ಇವುಗಳು ಎರಡೂ ಧರ್ಮಗಳಲ್ಲಿ ಕಂಡುಬರುತ್ತವೆ. ಬೌದ್ಧಧರ್ಮದಂತೆ ಜೈನಧರ್ಮವೂ ಸ್ತ್ರೀಯರಿಗೆ ಮೋಕ್ಷಪ್ರಾಪ್ತಿಗಾಗಿ ಸಂನ್ಯಾಸವೃತ್ತಿಯನ್ನು ಕೈಕೊಳ್ಳಲು ಆಸ್ಪದ ಕೊಡುವುದು.

**ಎರಡೂ ಧರ್ಮಗಳಲ್ಲಿ ಮಹತ್ವದ ಭೇದಗಳು :—** ಬೌದ್ಧ ಜೈನ ಧರ್ಮಗಳಲ್ಲಿ ಮೇಲಿನಂತೆ ಸಾಮ್ಯವಿದ್ದರೂ ಅವುಗಳಲ್ಲಿ ಮೂರು ಮುಖ್ಯ ಭೇದಗಳಿವೆ. (೧) ಜೈನ

ಧರ್ಮವು ಆತ್ಮವಾದಿಯಾಗಿದೆ, ಬೌದ್ಧಧರ್ಮವು ಆತ್ಮನ ಪ್ರತ್ಯೇಕ ಅಸ್ತಿತ್ವವನ್ನು ಮನ್ನಿಸುವದಿಲ್ಲ (೨) ಮೋಕ್ಷಪ್ರಾಪ್ತಿಗಾಗಿ ಸಂನ್ಯಾಸದ ಮತ್ತು ಕಠೋರ ತಪಶ್ಚರ್ಯೆಯ ಆವಶ್ಯಕತೆಯನ್ನು ಜೈನರು ಪ್ರತಿಪಾದಿಸುತ್ತಾರೆ. ಬೌದ್ಧ ಭಿಕ್ಷುಗಳು ಸಂನ್ಯಸ್ತವೃತ್ತಿ ಯಿಂದಿರುತ್ತಿದ್ದರೂ ಈ ಸಂನ್ಯಸ್ತವೃತ್ತಿಯ ಅತಿರೇಕವನ್ನು ಮನ್ನಿಸುವದಿಲ್ಲ. ಸಾಂಸಾರಿಕ ಸುಖಭೋಗದ ಒಂದು ತುದಿ, ತಪಶ್ಚರ್ಯೆ ದೇಹದಂಡನೆಗಳ ಒಂದು ತುದಿ, ಇವುಗಳ ಮಧ್ಯದ ಶುದ್ಧಾಚರಣೆ, ದಯೆ, ಪರೋಪಕಾರ ಇವುಗಳಿಂದ ಯುಕ್ತವಾದ ಮಾರ್ಗಕ್ಕೆ ಬೌದ್ಧಧರ್ಮವು ಪ್ರಾಶಸ್ತ್ಯ ಕೊಡುತ್ತದೆ (೩) ಮೂರನೆಯ ಮಾತೆಂದರೆ ಜೈನಧರ್ಮದಲ್ಲಿ ಅಹಿಂಸೆಯ ವ್ಯಾಪ್ತಿಯನ್ನು ಹೆಚ್ಚು ವಿಸ್ತೃತಗೊಳಿಸಲಾಗಿದೆ. ಪ್ರತಿಯೊಬ್ಬನು ಮನದಿಂದ, ಮಾತಿನಿಂದ, ಶರೀರದಿಂದ ಕೃತ, ಕಾರಿತ ಅಥವಾ ಅನುಮೋದಿತ ಹಿಂಸೆಯಿಂದ ದೂರಿರಬೇಕು. ಎಂದರೆ, ಹಿಂಸೆ ಮಾಡಬಾರದು, ಮಾಡಿಸಬಾರದು ಯಾರಾದರೂ ಮಾಡಿದ್ದರೆ ಅನುಮೋದಿಸಬಾರದು. ಇಂತಹ ಅಹಿಂಸೆಯ ಶಬ್ದಶಃ ಪಾಲನವು ಬಹಳ ಕಠಿಣವಾದುದೆಂದು ತಿಳಿದು ಜೈನ ಧರ್ಮವು ಅದನ್ನು ಶ್ರಮಣರಿಗೆ (ಜೈನ ಸಾಧು) ಮಾತ್ರ ಅನ್ವಯಿಸಿದ್ದಾರೆ. ಶ್ರಾವಕರಿಗಾಗಿ (ಗೃಹಸ್ಥಾಶ್ರಮಿ) ಇದರಲ್ಲಿ ಅವಶ್ಯಕ, ಕನಿಷ್ಠ ಅಪವಾದಗಳನ್ನು ಮನ್ನಿಸಿದೆ. ಇಂತಹ ಅತಿವ್ಯಾಪ್ತ ಅಹಿಂಸೆ ಬೇರೆ ಯಾವ ಧರ್ಮದಲ್ಲಿಯೂ ಸಿಗುವದಿಲ್ಲ. ಕಾಲಾಂತರದಲ್ಲಿ ಬೌದ್ಧ ಧರ್ಮವು ವಿಶ್ವಧರ್ಮವಾಯಿತು. ಆದರೆ ಜೈನಧರ್ಮವು ಅಷ್ಟು ಎಂದೂ ಬೆಳೆಯಲಿಲ್ಲ. ಬೌದ್ಧಧರ್ಮೀಯರಂತೆ ಜೈನರಲ್ಲಿ ಮತಪ್ರಸಾರದ ಉತ್ಸಾಹ ಕಂಡುಬರುವದಿಲ್ಲ. ಭಾರತದ ಹೊರಗೆ ಜೈನಧರ್ಮ ಇಲ್ಲವೆಂದರೂ ಸರಿ. ಇಂದು ಭಾರತದಲ್ಲಿ ಬೌದ್ಧಧರ್ಮದ ಉಚ್ಚಾಟನೆಯಾದುದು ಕಾಣುತ್ತದೆ. ಆದರೆ ಜೈನಧರ್ಮವು ಸ್ಥಿರವಾಗಿದೆ. ಕ್ರಿ. ಪೂ. ನಾಲ್ಕನೆಯ ಶತಕದಲ್ಲಿ ಜೈನಧರ್ಮವು ದಕ್ಷಿಣದಲ್ಲಿ ಪ್ರಸಾರವಾಯಿತು. ಮೌರ್ಯ ಸಾಮ್ರಾಟ್ ಚಂದ್ರಗುಪ್ತನು ಜೈನಧರ್ಮವನ್ನು ಸ್ವೀಕರಿಸಿದಂತೆ ಜೈನ ದಂತಕಥೆಗಳಿಂದ ಕಂಡುಬರುತ್ತದೆ. ಆದರೆ ಅದಕ್ಕೆ ಅಷ್ಟೊಂದು ಆಧಾರವಿಲ್ಲ. ಕಾಲಾಂತರದಿಂದ ಜೈನರಲ್ಲಿ ಶ್ವೇತಾಂಬರ ಮತ್ತು ದಿಗಂಬರ ಎಂಬ ಪಂಥಗಳುಂಟಾದವು. ಆದರೆ ಅದರಿಂದ ಜೈನಧರ್ಮದ ಪ್ರಸಾರಕ್ಕೆ ಅಷ್ಟೊಂದು ಆತಂಕವಾಗಲಿಲ್ಲ.

**ಹಿಂದು–ಬೌದ್ಧ–ಜೈನ ಧರ್ಮಗಳು :** ಹಿಂದೂ ಧರ್ಮೀಯರಿಗಿಂತ ಬೌದ್ಧ ಮತ್ತು ಜೈನರ ಭಿನ್ನತೆಯು ಮೋಕ್ಷವನ್ನು ಪಡೆಯುವ ಮಾರ್ಗದಲ್ಲಿದೆ. ಹಿಂದೂ ಧರ್ಮದಲ್ಲಿಯ ಈಶ್ವರನ ಅಸ್ತಿತ್ವ, ಯಜ್ಞೀಯ ಹಿಂಸೆ, ವರ್ಣಭೇದ, ಜಾತಿಭೇದಗಳು, ವೇದಪ್ರಾಮಾಣ್ಯ ಇತ್ಯಾದಿ ಮಾತುಗಳನ್ನು ಜೈನರೂ ಬೌದ್ಧರೂ ಒಪ್ಪುವದಿಲ್ಲ. ಆದರೂ ಪುನರ್ಜನ್ಮ, ಕರ್ಮವಿಪಾಕ ಮತ್ತು ಸಂನ್ಯಾಸಧರ್ಮ ಇವುಗಳಲ್ಲಿ ನಂಬಿಗೆಯಿದೆ. ಬೌದ್ಧರ ಸಮಾನತೆಯ ತತ್ತ್ವವು ಪಾರಮಾರ್ಥಿಕ ಕ್ಷೇತ್ರದಲ್ಲಿ ಹಿಂದುಗಳಿಗೆ ಮಾನ್ಯವಾಗಿತ್ತು. ಮುಂದೆ ಕ್ರಿ. ಶ. ಎರಡನೆಯ ಶತಕದಲ್ಲಿ ಭಕ್ತಿ ಪಂಥದವರು ಅದಕ್ಕೆ ಹೆಚ್ಚಾಗಿ ಪ್ರಾಧಾನ್ಯವಿತ್ತರು. ಐಹಿಕ ಜೀವನದಲ್ಲಿ ಸಮಾನತೆಗಾಗಿ ಹಿಂದೂ ಧರ್ಮೀಯರು ಆಗ್ರಹ ಪಟ್ಟಂತೆ ಕಾಣುವುದಿಲ್ಲ. ಒಟ್ಟಾರೆ ಉಪವಾಸ–

ನೆಯ ವಿಷಯವೊಂದನ್ನು ಬಿಟ್ಟರೆ, ಭಾಷೆ, ಇರುವಿಕೆ, ವ್ಯವಹಾರ, ಉಡಿಗೆ ತೊಡಿಗೆ ಪರಮತಸಹಿಷ್ಣುತೆ, ತ್ಯಾಗವೃತ್ತಿಯ ಹಿರಿಮೆ– ಈ ವಿಷಯಗಳಲ್ಲಿ ಈ ಮೂರೂ ಧರ್ಮಗಳ ಜನರು ಒಂದೇ ಆಗಿದ್ದಾರೆ. ಆದುದರಿಂದ ಹಿಂದು, ಬೌದ್ಧ ಮತ್ತು ಜೈನರಿಗೆ ಒಬ್ಬರಿಗೊಬ್ಬರು ಸಮೀಪದವರೆಂದು ಎನಿಸುತ್ತದೆ. ಬೌದ್ಧ ಮತ್ತು ಜೈನ ಧರ್ಮಗಳ ಸಂಸ್ಥಾಪಕರು ಹಿಂದೂ ಧರ್ಮದ ಸುಧಾರಕರೆಂದು ಮುಂದೆ ಬಂದರಲ್ಲದೆ ಆಕ್ರಮಣಕಾರರಾಗಿ ಬರಲಿಲ್ಲ. ಬೌದ್ಧರಾಗಲಿ ಜೈನರಾಗಲಿ ತಮ್ಮ ಧರ್ಮವನ್ನು ಸ್ವೀಕರಿಸುವುದಕ್ಕೆ ಹಿಂದುಗಳ ಮೇಲೆ ಕಡ್ಡಾಯ ಮಾಡಲಿಲ್ಲ; ಹಿಂದುಗಳು ಕೂಡ ಈ ಹೊಸ ಧರ್ಮಪ್ರಚಾರಕರನ್ನು ಅವರ ಭಿನ್ನ-ಮತದ ಕಾರಣಗಳಿಂದ ಎಂದೂ ಪೀಡಿಸಲಿಲ್ಲ. ರಾಜನು ಯಾವ ಧರ್ಮದವನಿದ್ದರೂ ಪ್ರಜೆಗಳಿಗೆ-ಅನ್ಯ ಧರ್ಮೀಯರಿಗೂ-ಪೂರ್ಣ ಮತಸ್ವಾತಂತ್ರ್ಯವಿತ್ತು. ಧಾರ್ಮಿಕ ಸಹಿಷ್ಣುತೆಯ ವೃತ್ತಿ ಈ ಮೂರೂ ಧರ್ಮೀಯರ ಸ್ಥಾಯಿಭಾವವಾಗಿದೆ.

### ಪ್ರಶ್ನೆಗಳು.

೧. ಗೌತಮ ಬುದ್ಧನ ಚರಿತ್ರೆಯ ಮತ್ತು ಆತನ ಉಪದೇಶದ ಪರಿಚಯ ಮಾಡಿಕೊಡಿರಿ.
೨. ಹಿಂದುಸ್ತಾನದಲ್ಲಿ ಬೌದ್ಧಧರ್ಮವು ಏಕೆ ಹ್ರಾಸವಾಯಿತು?
೩. ಹಿಂದುಗಳಿಗೆ ಬೌದ್ಧರೂ ಜೈನರೂ ಸಮೀಪದವರೆನಿಸಲು ಕಾರಣಗಳೇನು?
೪. ಜೈನಧರ್ಮದ ಮುಖ್ಯ ತತ್ವಗಳು ಯಾವವು?
೫. ಬೌದ್ಧ ಮತ್ತು ಜೈನ ಧರ್ಮಗಳಲ್ಲಿರುವ ಸಾಮ್ಯ ವೈಷಮ್ಯಗಳನ್ನು ಹೇಳಿರಿ.

## ೩. ಚೀನದಲ್ಲಿ ಕಾನ್‌ಫ್ಯೂಶಿಯಸ್ ಮತ್ತು ಲಾಒತ್ಸೇ ಇವರ ಉದಯ

**ಪುರಾತನ ಚೀನ :** ಭಾರದಂತೆಯೇ ತನ್ನ ಪರಂಪರೆಯನ್ನು ಅಬಾಧಿತವಾಗಿ ನಡೆಸಿಕೊಂಡು ಬಂದ ಚೀನವು ಬಹಳ ಪ್ರಾಚೀನ ದೇಶವಾಗಿದೆ. ಇಜಿಪ್ತ, ಬಾಬಿಲೋನಿಯಾ ಪ್ರದೇಶಗಳಲ್ಲಿಯ ಪ್ರಾಚೀನ ಸಂಸ್ಕೃತಿ ನಷ್ಟವಾಗಿ ಇಂದು ಆ ಸ್ಥಳದಲ್ಲಿ ಹೊಸ (ಇಸ್ಲಾಮಿ) ಸಂಸ್ಕೃತಿಯ ವರ್ಚಸ್ಸು ಪ್ರಸ್ಥಾಪಿತವಾಗಿದೆ. ಆದರೆ ಭಾರತ ಚೀನದೇಶಗಳಗಲ್ಲಿ ಪ್ರಾಚೀನ ಕಾಲದಿಂದ ಸಂಸ್ಕೃತಿಯ ಎಳೆ ಕಟಕರಿಸದೆ ಯಾವಾಗಲೂ ಗಟ್ಟಿಯಾಗಿ ಉಳಿದಿದೆ. ಈ ಸಂಸ್ಕೃತಿಗಳಲ್ಲಿ ಕಾಲಮಾನಕ್ಕನುಸರಿಸಿ ವ್ಯತ್ಯಾಸವಾಗುತ್ತ ಬಂದಿದೆ. ಆದರೆ ಪ್ರಾಚೀನ ಕಾಲದ ಪೂಜ್ಯ ಸ್ಥಾನಗಳೂ ಪವಿತ್ರ ಗ್ರಂಥಗಳೂ ಚೀನ-ಭಾರತಗಳೆರಡರಲ್ಲಿಯೂ ಇಂದಿಗೂ ಆದರಣೀಯವೆನಿಸಿವೆ. ಭಾರತ-ಚೀನಗಳಲ್ಲಿಯ ಜನರಿಗೆ ತಮ್ಮ ಸಂಸ್ಕೃತಿಯ ಪ್ರಾಚೀನ ಪರಂಪರೆಯ ಬಗ್ಗೆ ಅಭಿ

ಮಾನವೆನಿಸುವಂತಹ ಸಂಗತಿಯಿದು. ಚೀನವು ಭಾರತಕ್ಕಿಂತ ಎರಡೂವರೆ ಪಟ್ಟಿಗಿಂತಲೂ ದೊಡ್ಡದು; ಅದರ ಜನಸಂಖ್ಯೆ ಅರವತ್ತು ಕೋಟಿಯಿದೆ.

**ಕಾನ್‌ಫ್ಯೂಶಿಯಸ್ :** ಸುಮಾರು ಎರಡೂವರೆ ಸಾವಿರ ವರುಷಗಳ ಹಿಂದೆ ಕಾನ್‌ಫ್ಯೂಸಿಯಸ್ ಎಂಬ ದೊಡ್ಡ ಪುರುಷನು ಚೀನದಲ್ಲಿ ಆಗಿಹೋದನು ( ಕ್ರಿ. ಪೂ. ೫೫೧ರಿಂದ ೪೭೮ ). ಈತನು ಆ ದೇಶದಲ್ಲಿಯ ಪ್ರಮುಖ ಧರ್ಮಸಂಸ್ಥಾಪಕನು. ಇವನು ಗೌತಮ ಬುದ್ಧನ ಸಮಕಾಲೀನನು. " ಜಗತ್ತನ್ನು ಸುಧಾರಿಸುವುದಕ್ಕೆ ಧಾವಿಸುವುದಕ್ಕಿಂತ ಮೊದಲು ನಿಮ್ಮನ್ನು ನೀವು ಸುಧಾರಿಸಿಕೊಳ್ಳಿರಿ; ಎಂದರೆ, ಯಕ್ಷಿಣಿಯ ಕಡ್ಡಿಯನ್ನಾಡಿಸಿದಂತೆ ಎಲ್ಲವೂ ತನ್ನಿಂತಾನೇ ಸುಧಾರಿಸುವುದು " ಎಂಬುದು ಅವನ ಉಪದೇಶವಾಗಿತ್ತು. ತನ್ನನ್ನು ಸುಧಾರಿಸಿಕೊಳ್ಳುವುದೆಂದರೆ ತನ್ನ ಅಂತಃಕರಣ ಸಾಕ್ಷಿಯಾಗಿ ತನ್ನ ವಿಚಾರಗಳನ್ನು ಪವಿತ್ರಗೊಳಿಸುವುದು. ಅದಕ್ಕಾಗಿ ಮನುಷ್ಯನು ಸತತವೂ ಜ್ಞಾನದ ಜೋಡು ಪಡೆಯಬೇಕು—ಎಂದು ಕಾನ್‌ಫ್ಯೂಸಿಯಸ್ಸನ ಅಭಿಪ್ರಾಯವಾಗಿತ್ತು. ಈತನಿಗೆ ಚೀನೀ ಭಾಷೆಯಲ್ಲಿ ಕುಂಗ್—ಫ್ಯೂ—ತ್ಸೆ ಎನ್ನುವರು. ಅವನ ಗ್ರಂಥಗಳು ಚೀನೀ ಜನರಿಗೆ ಧರ್ಮಗ್ರಂಥಗಳಂತೆ ಪೂಜ್ಯವಾಗಿರುವುವು. ತನ್ನ ೨೨ನೆಯ ವಯಸ್ಸಿನಿಂದ ಮೊದಲ್ಗೊಂಡು ಅವನು ಊರೂರಿಗೆ ಹೋಗಿ ಉನ್ಯಾಸವೀಯುತ್ತಿದ್ದನು, ಉಪದೇಶಿಸುತ್ತಿದ್ದನು. ಅವನು ಉಪದೇಶಿಸಿದ ಧರ್ಮದಲ್ಲಿ ಆಚಾರಗಳ ಅಥವಾ ವ್ರತವೈಕಲ್ಯಗಳ ಜಂಜಾಟವಿಲ್ಲ; ಅತಿ ಗೂಢವಾದ, ಅಜ್ಞಾತವಾದ ವಸ್ತುವಿಷಯಗಳ ಶೋಧದ ತಾತ್ತ್ವಿಕ ವಿಚಾರವೂ ಅದರಲ್ಲಿಲ್ಲ. ಕುಂಗ್-ಫ್ಯೂ-ತ್ಸೆಯ ಧರ್ಮವೆಂದರೆ ಸರಳ ಸಾದಾ ಮಾನವೀಯ ನೀತಿಧರ್ಮ; ಮನುಷ್ಯರು ಪರಸ್ಪರ ಸಭ್ಯತೆಯಿಂದ ವರ್ತಿಸಬೇಕು; ತಮ್ಮ ಮನಸ್ಸಿನ ದೊಡ್ಡತನವನ್ನು ಕಳೆದುಕೊಳ್ಳಲಾಗದು; ಹೀಗೆ ಅವನ ಬೋಧೆ ಪ್ರತಿಷ್ಠಿತ ಕುಲೀನತೆಗೆ ಶೋಭಿಸುವಂತಹದಾಗಿತ್ತು. ದುರ್ಗುಣಿಗಳನ್ನು ಸುಧಾರಿಸುವ ಕಾರ್ಯವು ಅವರನ್ನು ದಂಡಿಸುವುದರಿಂದ ಎಂದಿಗೂ ಈಡೇರಲಾರದು; ಸದ್ಗುಣಗಳ ಮಹತ್ವವನ್ನು ಕುರಿತು ದೊಡ್ಡ ದೊಡ್ಡ ಪ್ರವಚನ ಮಾಡಿದರೂ ಅದಾಗುವದಿಲ್ಲ. ತಾವು ಸದ್ಗುಣಿಗಳಾಗಿ ನಡೆದುಕೊಂಡು ಜಗತ್ತಿನ ಮುಂದೆ ಮಾದರಿಯನ್ನಿಡುವುದೊಂದೇ ಜನರನ್ನು ಸುಧಾರಿಸುವ ಪರಿಣಾಮಕಾರಿಯಾದ ಮಾರ್ಗವೆಂದು ಅವನ ಅಭಿಪ್ರಾಯವಾಗಿತ್ತು.


ಕಾನ್‌ಫ್ಯೂಶಿಯಸ್

**ಕುಂಗ್‌–ಫ್ಯೂ–ತ್ಸೆ** ತನ್ನ ಗ್ರಂಥದಲ್ಲಿ ಆದರ್ಶ ರಾಜನ ವರ್ಣನೆ ಮಾಡಿದ್ದಾನೆ. ಪ್ರಜೆಗಳ ಮೇಲಿರುವ ರಾಜವರ್ಚಸ್ಸು ಸತ್ತೆಯ ಬಲವನ್ನು ಅವಲಂಬಿಸಿಲ್ಲ, ರಾಜನ ಸತ್ಪ್ರವೃತ್ತಿ ಸತ್ಕೃತ್ಯಗಳನ್ನು ಅವಲಂಬಿಸಿರುವುದು. ಆದರ್ಶರಾಜನು ಪ್ರಜೆಗಳ ಸರ್ವಾಂಗೀಣ ಉನ್ನತಿಯನ್ನು ಸಾಧಿಸಿ ಅವರ ಪ್ರೇಮವನ್ನು ಸಂಪಾದಿಸುತ್ತಾನೆ. ಅಧಿಕಾರದ ಮುಂಗೈ ಕಸುವಿನಿಂದ ರಾಜ್ಯವಾಳುವ ಒಬ್ಬ ದಬ್ಬಾಳಿಕೆಯ ರಾಜನೊಡನೆ ಅವನನ್ನು ತುಲನೆಮಾಡುವುದೇ ಸಾಧ್ಯವಿಲ್ಲ. ಕುಂಗ್–ಫ್ಯೂ–ತ್ಸೆಯ ಅಭಿಪ್ರಾಯದಂತೆ, ಸಮಾಜವೆಂಬುದು ಒಂದು ಕುಟುಂಬವಾಗಿದೆ; ಮತ್ತು ಆದರ್ಶರಾಜನು ಆ ಕುಟುಂಬದ ಕರ್ತೃಪುರುಷನಾಗಿದ್ದಾನೆ. ಕುಟುಂಬದಲ್ಲಿಯ ಸಾಮ್ಯವೃತ್ತಿ ಸಮಾಜದಲ್ಲಿಯೂ ನಿರ್ಮಾಣವಾಗಬೇಕೆಂದು ಅವನು ಚೀನಕ್ಕೆ ಬೋಧಿಸಿದನು. ಇದೊಂದು ಆ ದೇಶಕ್ಕೆ ಅವನಿಂದಾದ ಮಹೋಪಕಾರ.

**ಲಾಒತ್ಸೆ** : ಚೀನದ ಎರಡನೇಯ ಧರ್ಮ ಸಂಸ್ಥಾಪಕನು ಲಾಒತ್ಸೆ. ಅವನು ಚೀನಕ್ಕೆ ಸಂನ್ಯಾಸವೃತ್ತಿಯನ್ನೂ ಸಾದಾತನವನ್ನೂ ಕಲಿಸಿದನು. ಅವನ ಧರ್ಮಕ್ಕೆ ತಾಓಯಿಜಮ್ ಎಂದು ಹೆಸರು. ಆ ಧರ್ಮದಲ್ಲಿ ಧರ್ಮಗುರು, ಪುರೋಹಿತ, ಧಾರ್ಮಿಕ ಆಚಾರ ಇವುಗಳಿಗೆ ಬಹಳ ಪ್ರಾಧಾನ್ಯವಿದೆ. ಅವನ ಉಪದೇಶವು ಕೆಲಮಟ್ಟಿಗೆ ಅನುಭಾವಮಯವಾಗಿದೆ. " ಈ ವಿಶ್ವದಲ್ಲಿ ಧನ, ಋಣ ಎಂಬ ಎರಡು ಶಕ್ತಿಗಳಿವೆ; ಅವೆರಡರಲ್ಲಿಯೂ ಸತತವಾಗಿ ಹೋರಾಟದ ಮಧ್ಯದಲ್ಲಿ ಮಾನವೀಯ ಜೀವನವು ನಿರಂತರವಾಗಿ ಮುಂಬರಿಯುತ್ತಿದೆ. ಈ ಹೋರಾಟದಲ್ಲಿ ಮನುಷ್ಯನು ಬುದ್ಧಿಬಲದಿಂದ ಎದುರೊಡ್ಡಿ ತಡೆಯುಂಟು ಮಾಡುವುದು ಹುಚ್ಚುತನ:— ಧನ, ಋಣಗಳ ಜಗಳವು ಮನುಷ್ಯನ ಆಳವನ್ನು ಮೀರಿದುದಾಗಿದೆ; ಆ ಶಕ್ತಿಗಳನ್ನು ಬುದ್ಧಿಬಲದಿಂದ ಅರಿತುಕೊಂಡು, ಅದರಲ್ಲಿ ತನ್ನ ಸ್ಥಾನ ಯಾವುದೆಂದು ತಿಳಿದುಕೊಂಡು ನಡೆಯಬೇಕು; ಇದರಲ್ಲಿಯೇ ಮಾನವನ ಕಲ್ಯಾಣವಿದೆ," ಎಂಬುದು ಲಾಒತ್ಸೆಯ ಮತ. ಒಂದರ್ಥದಿಂದ ಅವನ ಹೇಳಿಕೆ ಕೆಲಮಟ್ಟಿಗೆ ನಿವೃತ್ತಿಪರವಾದದ್ದು, ಮತ್ತು ನಿಷ್ಕ್ರಿಯಾತ್ಮಕವಾದದ್ದು ಎಂದು ಹೇಳಬಹುದು. ಈ ಬೋಧೆಯಿಂದ ಮನುಷ್ಯನು ಚಿಂತನಶೀಲನಾಗಬಹುದು, ಕಾರ್ಯಪ್ರವೃತ್ತನಾಗಲಾರನು. ಹೀಗಾಗಿ ಲಾಒತ್ಸೆ ಪ್ರತಿಪಾದಿಸಿದ ಧರ್ಮವು ನವಸಮಾಜವನ್ನು ನಿರ್ಮಿಸುವದಕ್ಕೆ ಅಸಮರ್ಥವಾಯಿತು ಆದರೂ ಚೀನದಲ್ಲಿ ವಿಶೇಷವಾಗಿ ನಾನ್‌ಕಿನ್ನಿನ ಸುತ್ತಮುತ್ತು ದಕ್ಷಿಣ ಭಾಗದಲ್ಲಿ—ಲಾಒತ್ಸೆನು ಬೋಧಿಸಿದ ಧರ್ಮವು ಹೆಚ್ಚು ಜನಪ್ರಿಯವಾಗಿದೆ. ಅಲ್ಲಿಯ ಜನರು ಅನುಭಾವಿಗಳಾಗಿದ್ದು, ಸಾಂಕೇತಿಕ ಕಲಾಕೃತಿಗಳ ನಿರ್ಮಾಣದಲ್ಲಿ ಪ್ರೀತಿಯುಳ್ಳವರಾಗಿದ್ದಾರೆ. ಚೀನದ ಉತ್ತರ ಭಾಗದಲ್ಲಿ ಮಾತ್ರ ಕುಂಗ್ ಫ್ಯೂತ್ಸೆಯ ಮತವು ಜನಪ್ರಿಯವಾಗಿದ್ದು, ಆ ಜನರು ಏಕಮಾರ್ಗದ ಸರಳವೃತ್ತಿಯವರೂ, ಉದಾರ ಪ್ರವೃತ್ತಿಯವರೂ, ನೀತಿವಂತರೂ ಆಗಿದ್ದಾರೆ.

ಕ್ರಿ. ಶ. ಎರಡನೆಯ ಶತಕದಲ್ಲಿ ಚೀನದಲ್ಲಿ ಬೌದ್ಧ ಧರ್ಮದ ಪ್ರಸಾರವಾಯಿತು. ಅದೇ ಇಂದು ಆ ದೇಶದ ರಾಷ್ಟ್ರಧರ್ಮವಾಗಿದೆ. ಆದರೆ ಕುಂಗ್‌ಫ್ಯೂತ್ಸೆಯ

ಅಥವಾ ಲಾಓತ್ಸೆಯ ಧರ್ಮಗಳು ನಷ್ಟವಾಗಿವೆ ಎಂದು ಇದರ ಅರ್ಥವಲ್ಲ. ಈ ಇಬ್ಬರು ಪ್ರಾಚೀನ ಉಪದೇಶಕರು ತಮ್ಮ ಬೋಧೆಯಿಂದ ಚೀನೀಯರ ಮನಃಪಿಂಡವನ್ನು ಸಿದ್ಧಗೊಳಿಸಿದರು. ಬೌದ್ಧ ಧರ್ಮವು ಅವೆರಡನ್ನೂ ಸಮನ್ವಯಿಸುವ ಆವರಣವಾಗಿದೆ ಎಂದು ಹೇಳಬಹುದು. ಅರ್ವಾಚೀನ ಕಾಲದಲ್ಲಿ ಕ್ರಿಶ್ಚನರು ಚೀನಕ್ಕೆ ಬಂದು ತಮ್ಮ ಧರ್ಮವನ್ನು ಪ್ರಚುರಪಡಿಸಿದರು. ಆದರೆ ಚೀನೀಯರಲ್ಲಿ ಧರ್ಮವಿಷಯಕವಾದ ಜಗಳ ತಂಟೆಗಳು ಎಂದೂ ಆಗಲಿಲ್ಲ. ಗಂಡ ಕ್ರಿಶ್ಚನ್‌ನಾಗಿದ್ದು ಹೆಂಡತಿ ಬೌದ್ಧಳಾಗಿರ ಬಹುದು; ಇಂತಹ ಅನೇಕ ಉದಾಹರಣೆಗಳನ್ನು ಚೀನದಲ್ಲಿ ಇಂದಿಗೂ ಕಾಣಬಹುದು.

**ಚೀನದ ಸಾಮಾನ್ಯ ಪರಿಚಯ**: ಚೀನದಲ್ಲಿ ಕ್ರಿ. ಪೂ. ಮೂರನೆಯ ಶತಕದಲ್ಲಿ ಶೀ-ವಾಂಗ್-ಟಿ ಎಂಬ ರಾಜನು ಆಗಿಹೋದನು. ಉತ್ತರದ ಕಡೆಯಿಂದ ಬರುವ ಹೂಣರ ಉಪಟಳವನ್ನು ತಡೆಯುವುದಕ್ಕಾಗಿ ಆ ಗಡಿಯಲ್ಲಿ ಒಂದು ದೊಡ್ಡ ಗೋಡೆಯನ್ನು ಕಟ್ಟಿಸಿದನು. ಆ ಗೋಡೆ ೧೪೦೦ ಮೈಲು ಉದ್ದವಾಗಿದೆ; ಎತ್ತರ ೨೨ ಫೂಟು, ದಪ್ಪ ೨೦ ಫೂಟು! ಇಷ್ಟೊಂದು ಪ್ರತಿಬಂಧ ಮಾಡಿಯೂ ಹೂಣರ ಕಾಟ ತಪ್ಪಲಿಲ್ಲ. ಕೊನೆಗೆ ಕಪ್ಪವನ್ನು ಕೊಟ್ಟು ಬಗೆಹರಿಸಿಕೊಳ್ಳಬೇಕಾಯಿತು. ಚೀನೀ



ಚೀನದ ಪ್ರಸಿದ್ಧ ಗೊಡೆ ೨೫೦ ಮೈಲು ಉದ್ದ ೧೫ ರಿಂದ ೨೦ ಫೂಟು ಅಗಲ

ಯರು ಸ್ವಭಾವದಿಂದ ಶಾಂತವೃತ್ತಿಯವರು, ಸಹಿಷ್ಣುಗಳು. ಅವರಲ್ಲಿ ಲೇಖಕರು, ಒಕ್ಕಲಿಗರು, ಕೆಲಸಗಾರರು, ವ್ಯಾಪಾರಿಗಳು ಎಂದು ನಾಲ್ಕು ವರ್ಗಗಳಿವೆ. ಕ್ಷತ್ರಿಯ ವರ್ಗ ಅಲ್ಲಿಲ್ಲ. ಚೀನದಲ್ಲಿಯ ಸಮಾಜವು ಕುಂಗ್-ಫ್ಯೂ-ತ್ಸೆಯ 'ಕೌಟುಂಬಿಕ ಸಾಮ್ಯವಾದ' ದ ತಳಹದಿಯ ಮೇಲೆ ಕಟ್ಟಿದುದಾಗಿದೆ. ಇಪ್ಪತ್ತನೆಯ ಶತಕದಲ್ಲಿ ಮಾರ್ಕ್ಸ್, ಲೆನಿನ್ ಪ್ರಭೃತಿಗಳ ಉಪದೇಶದಂತೆ ರಶಿಯದಲ್ಲಿ ನಿರ್ಮಿತವಾಗಿರುವ ಸಾಮ್ಯವಾದವು ಚೀನದಲ್ಲಿಯ ಸಾಮ್ಯವಾದಕ್ಕಿಂತ ಭಿನ್ನವಾಗಿದೆ. ರಶಿಯದ ಸಾಮ್ಯ

ವಾದಕ್ಕೆ ಗಿರಣಿ ಕೂಲಿಕಾರ ವರ್ಗದ ಸಂಘಟನೆಯು ತಳಹದಿಯಾಗಿದೆ, ಆದರೆ ಚೀನದಲ್ಲಿ ಹಾಗಿಲ್ಲ. ಮಧ್ಯಂತರದಲ್ಲಿ ಔದ್ಯೋಗಿಕ ಕ್ರಾಂತಿಯಿಂದ ಕೆಲಕಾಲ ರಾಷ್ಟ್ರೀಯತ್ವದ ವಿಚಾರವು ಪ್ರಬಲವಾಗಿತ್ತಾದರೂ ಅದು ಚೀನದ ಸ್ಥಿರಭಾವವಲ್ಲ. ಚೀನದ ಸಾಮ್ಯವಾದೀ ಪ್ರವೃತ್ತಿಯ ಬೇರುಗಳು ಅದರ ಪ್ರಾಚೀನ ಪರಂಪರೆಯಲ್ಲಿ ಬಹು ಆಳದಲ್ಲಿ ಇಳಿದಿದೆ. ಭಾರತದ ಸ್ಥಿತಿಯು ಹಾಗಿದೆಯೋ ಇಲ್ಲವೋ ಎಂಬುದನ್ನು ಅಭ್ಯಾಸದಿಂದ ತಿಳಿಯಬೇಕಾದ ವಿಷಯವಾಗಿದೆ.

**ವಿಚಿತ್ರ ತಿಳಿವಳಿಕೆಗಳು :** ಪುರಾಣ ಮತವಾದಿಗಳಾದ ಚೀನೀಯರಲ್ಲಿ ಅನೇಕ ವಿಚಿತ್ರವಾದ ತಿಳಿವಳಿಕೆಗಳಿವೆ. ಮನುಷ್ಯನು ಮಹಡಿಯ ಮೇಲೆ ತೀರಿಕೊಂಡರೆ, ಶವವನ್ನು ಮೆಟ್ಟಿಲಮೇಲಿಂದ ಕೆಳಗೆ ತರದೆ ಕಿಡಿಕಿಯ ಮಾರ್ಗವಾಗಿ ಕೆಳಗಿಳಿಸುವ ರೂಢಿ ಅಲ್ಲಿದೆಯೆಂದು ಹೇಳುತ್ತಾರೆ. ಮೃತನ ವಾಸನಾ ರೂಪ-ಜೀವವು ತಾನು ಹೊರಟುಹೋದ ಮಾರ್ಗದಿಂದ ಮರಳಿ ಬಂದು ಮನೆಯಲ್ಲಿ ಸೇರಿಕೊಳ್ಳುವುದೆಂಬ ಭೀತಿಯೆ ಇದಕ್ಕೆ ಕಾರಣವಂತೆ ಈ ವಾಸನಾರೂಪ ಜೀವವನ್ನು ಓಡಿಸುವುದಕ್ಕಾಗಿ ಪಟಾಕಿ ಹಾರಿಸುವ ರೂಢಿ ಚೀನದಲ್ಲಿತ್ತು.



೧೭ನೆಯ ಶತಮಾನದ ಚೀನೀ ನೇಕಾರರು

**ಚೀನೀ ಲಿಪಿ :** ಚೀನೀಯರ ಲಿಪಿಯು ವಿಚಿತ್ರವಾದುದು. ಮೇಲಿಂದ ಕೆಳಗೆ ಸಾಲಾಗಿ, ಬಲದಿಂದ ಎಡಕ್ಕೆ ಅವರು ಬರೆಯುತ್ತಾರೆ. ಅವರ ಅಕ್ಷರಗಳ ಸಂಖ್ಯೆ ಸುಮಾರು ೮೦೦೦! ಅವೆಲ್ಲವನ್ನು ನೆನಪಿನಲ್ಲಿಡುವುದಕ್ಕೇ ಜನರಿಗೆ ಸಾಕುಬೇಕಾಗುತ್ತದೆ. ಇದರಿಂದಾಗಿಯೇ ಚೀನದಲ್ಲಿ ಮೊನ್ನೆ ಮೊನ್ನೆಯ ತನಕ ನೂರಕ್ಕೆ ೯೫ ಜನ ಅಶಿಕ್ಷಿತರಾಗಿಯೇ ಇದ್ದರು. ಈಚೆಗೆ ಚೀನೀಯರು ಲಿಪಿ ಸುಧಾರಣೆಗೆ ಕೈಹಾಕಿದ್ದಾರೆ. ಚೀನೀ ಭಾಷೆಯಲ್ಲಿ ಹೆಚ್ಚು ಅಕ್ಷರಗಳೂ, ಕಡಿಮೆ ಉಚ್ಚಾರಗಳೂ ಇರುವುದರಿಂದ

ಮಾತನಾಡುವಾಗ ಬಹಳ ಗೊಂದಲವುಂಟಾಗುತ್ತದೆ. ಏಕೆಂದರೆ, ಉಚ್ಚಾರದಿಂದ ತೋರುವ ಶಬ್ದವು ನಿಶ್ಚಿತವಾಗಿ ಯಾವುದೆಂದು ತಿಳಿಯುವುದು ಬಲು ಕಷ್ಟ. ಆ ದೇಶ ದಲ್ಲಿಯ ಶಿಕ್ಷಣ ಪ್ರಸಾರಕ್ಕೆ ಇದು ಒಂದು ತೊಂದರೆಯಾಗಿದೆ.

**ಶೋಧಕ ಬುದ್ಧಿ** :— ಹೀಗಿದ್ದರೂ ಚೀನದ ಜನ ಒಳ್ಳೇ ಶೋಧಕರು, ಉದ್ಯೋಗಿಗಳು, ಸಹನಶೀಲರು ಚೀನದಲ್ಲಿ ಜನಗಳ ಸಂಖ್ಯೆ ಹೆಚ್ಚು, ದನಗಳ ಸಂಖ್ಯೆ ಕಡಿಮೆ. ಆದುದರಿಂದ ಅಲ್ಲಿಯ ಜನರು ನೇಗಿಲಿಗೆ ದನದ ಬದಲು ತಮ್ಮನ್ನೇ ಹೂಡಿ ಕೊಳ್ಳುವುದಕ್ಕೆ ಹಿಂಜರಿಯುವುದಿಲ್ಲ. ಚೀನಿಯರು ಕಾಗದ, ಮುದ್ರಣ ಮತ್ತು ಬಂದೂ ಕಿನ ಮದ್ದುಗಳನ್ನು ಶೋಧಿಸಿ ಜಗತ್ತಿಗೆ ದೊಡ್ಡ ಉಪಕಾರ ಮಾಡಿದ್ದಾರೆ. ರೇಶಿಮೆಯು ಮೊದಲು ಚೀನದಿಂದಲೇ ಎಲ್ಲೆಡೆಗೆ ಹರಡಿತು. ಅನೇಕ ರಾಜ್ಯಗಳನ್ನೂ ರಾಜ್ಯಕ್ರಾಂತಿ ಗಳನ್ನೂ ಚೀನವು ಕಂಡಿತು. ಆದರೆ ಅವೆಲ್ಲವುಗಳನ್ನೂ ಎದುರಿಸಿ ಸ್ವತಂತ್ರವಾಗಿ ಉಳಿಯಿತು.

## ಪ್ರಶ್ನೆಗಳು

೧. ಟಿಪ್ಪಣಿ ಬರೆಯಿರಿ
   (೧) ಕಾನ್ಫ್ಯೂಸಿಯಸ್, (೨) ಲಾಒತ್ಸೆ.
೨. ಮುಂದಿನ ವಿಷಯಗಳನ್ನು ಕುರಿತು ಮೂರು ಮೂರು ವಾಕ್ಯಗಳನ್ನು ಬರೆಯಿರಿ:
   (೧) ಚೀನೀಯರ ವಿಚಿತ್ರ ತಿಳುವಳಿಕೆ (೨) ಚೀನೀಲಿಪಿ (೩) ಚೀನೀಯರು ಜಗತ್ತಿಗೆ ಮಾಡಿದ ಉಪಕಾರ.

# ಚತುರ್ಥಖಂಡ

## ಪ್ರಾಚೀನ ವೈಭವಶಾಲಿ ಗ್ರೀಸ್

**ಗ್ರೀಸದ ಉದಯ** : ಭಾರತದಲ್ಲಿ ಬುದ್ಧ–ಮಹಾವೀರರ ಉದಯದಿಂದ ಉಂಟಾದ ಧಾರ್ಮಿಕ ಆಂದೋಲನವು ನಡೆದಿರುವಾಗ, ಪಶ್ಚಿಮದಲ್ಲಿ ಗ್ರೀಸವು ಉದಯ ಹೊಂದುತ್ತಲಿತ್ತು. ಜಗತ್ತಿನ ಇತಿಹಾಸದಲ್ಲಿ ಗ್ರೀಸಕ್ಕೆ ಮಹತ್ವದ ಸ್ಥಾನವಿದೆ. ಏಕೆಂದರೆ, ಈ ಗ್ರೀಕ ಸಂಸ್ಕೃತಿಯ ಅಸ್ತಿಭಾರದ ಮೇಲೆಯೇ ಮುಂದೆ ಆಧುನಿಕ ಯುರೋಪಿನ ನಿರ್ಮಿತಿಯಾಯಿತು; ಮತ್ತು ಯುರೋಪಿನ ಇತಿಹಾಸಕ್ಕೆ ಬೇರೆ ರೂಪು ಬಂದಿತು. ಗ್ರೀಸದ ದಕ್ಷಿಣೋತ್ತರ ಉದ್ದವು ೨೫೦ ಮೈಲು, ಅಗಲ ೧೮೦ ಮೈಲು ಇದೆ. ಆಕಾರದಿಂದ ಅದು ಅಷ್ಟು ದೊಡ್ಡ ದೇಶವಲ್ಲ. ಗ್ರೀಸದ ನಕಾಶ ವನ್ನು ನೋಡಿದರೆ, ಭೂಮಿಯ ತುದಿಗಳು ಅಲ್ಲಲ್ಲಿ ಸಮುದ್ರದಲ್ಲಿ ಒಳಸೇರಿರುವು

ದನ್ನು ಕಾಣಬಹುದು. ಸರಳವಾದ ದಂಡೆ ಎಲ್ಲಿಯೂ ಇಲ್ಲ. ಆದುದರಿಂದ ಗ್ರೀಸದ ಕ್ಷೇತ್ರಫಲ ಪೋರ್ತುಗಾಲದಷ್ಟು ಇಲ್ಲ. ಅಲ್ಲದೆ, ಗ್ರೀಸದ ವೈಭವ ಕಾಲದಲ್ಲಿ ಇಡೀ ದೇಶವು ಏಕಛತ್ರಾಧಿಪತ್ಯಕ್ಕೆ ಎಂದೂ ಒಳಪಟ್ಟಿರಲಿಲ್ಲ. ಸ್ಪಾರ್ಟಾ, ಅಥೆನ್ಸ್, ಥೀಬ್ಸ್‌ಗಳಂತಹ ನಗರರಾಜ್ಯಗಳು ಮಾತ್ರ ಇದ್ದವು. ‘ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು’ ಎಂಬ ನಾಣ್ನುಡಿ ನಮ್ಮಲ್ಲಿದೆ. ಈ ಮಾತು ಇತರ ಯಾವ ದೇಶಕ್ಕಿಂತಲೂ ಪ್ರಾಚೀನ ಗ್ರೀಸಕ್ಕೆ ಚೆನ್ನಾಗಿ ಅನ್ವಯಿಸುತ್ತದೆ. ಗ್ರೀಸವು ಇಂದು ವೈಭವಶಾಲಿಯಾಗದಿದ್ದರೂ ಪ್ರಾಚೀನ ಗ್ರೀಸವು ಗಳಿಸಿಟ್ಟ ಸಾಂಸ್ಕೃತಿಕ ಸಂಪತ್ತಿಯನ್ನು ಯುರೋಪು ಅನುಭವಿಸುತ್ತದೆ. ಇಂದು ಜಗತ್ತಿನೊಳಗಿನ ಬೇರೆ ಬೇರೆ ದೇಶಗಳು ಒಂದಕ್ಕೊಂದು ಹತ್ತಿರ ಬರುತ್ತಿರುವ ಸಮಯದಲ್ಲಿ, ಭೂಮಂಡಲದ ಜನರೆಲ್ಲ ಪ್ರಾಚೀನ ಗ್ರೀಸದ ಸರ್ವಾಂಗೀಣ ಪ್ರಗತಿಯತ್ತ ಆದರದಿಂದ ನೋಡುತ್ತಿದ್ದಾರೆ.

**ಗ್ರೀಸ-ಪೂರ್ವಕಾಲೀನ ಸಂಸ್ಕೃತಿ :** ಗ್ರೀಕರು ಮೂಲತಃ ಆರ್ಯರೇ ಮಧ್ಯ ಆಶಿಯದಿಂದ ಹೊರಟ ಆರ್ಯರ ಒಂದು ಗುಂಪು ಇರಾಣದ ಮಾರ್ಗವಾಗಿ ಭಾರತಕ್ಕೆ ಬಂದಿತು. ಇನ್ನೊಂದು ಗುಂಪು ಗ್ರೀಸ ರೋಮಗಳನ್ನು ವ್ಯಾಪಿಸಿತು. ಎಂದು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. ಸಹ್ಯಾದ್ರಿಯ ತಲೆಯ ಮೇಲೆ ಸುರಿದ ನೀರಿನ ಒಂದು ಪ್ರವಾಹ ಪಶ್ಚಿಮಕ್ಕೆ ಹರಿದು ಅರಬೀ ಸಮುದ್ರಕ್ಕೂ ಒಂದು ಪ್ರವಾಹ ಪೂರ್ವಾಭಿಮುಖವಾಗಿ ಹರಿದು ಬಂಗಾಲ ಉಪಸಾಗರಕ್ಕೂ ಕೂಡಿದ ಹಾಗೆ ಈ ಸಂಗತಿಯಿದೆ. ಗ್ರೀಸದ ಉದಯಕ್ಕೆ ಮುಂಚೆ ಆ ದೇಶದ ದಕ್ಷಿಣದಲ್ಲಿ ಕ್ರೀಟದಲ್ಲಿ ಮಾಯನೋವಾ ನಾಗರ ಸಂಸ್ಕೃತಿ ಅಸ್ತಿತ್ವದಲ್ಲಿತ್ತು. ಹಾಗೆಯೆ ಗ್ರೀಸದ ಪೂರ್ವದಲ್ಲಿ ಆಶಿಯವು ಎಚ್ಚತ್ತಿತ್ತು; ಅಲ್ಲಿಯ ಆಶಿಯಾ ಸಂಸ್ಕೃತಿಯ ಅವಶೇಷಗಳು ಗ್ರೀಸದ ವರೆಗೆ ಪಸರಿಸಿದ್ದವು. ದಕ್ಷಿಣದಲ್ಲಿ ಕ್ರೀಟದಿಂದ, ಪೂರ್ವದಲ್ಲಿ ಆಶಿಯಾಮಾಯನರದಿಂದ ಬಂದ ಸಂಸ್ಕೃತಿಗಳ ಸಂಮಿಶ್ರ ಸಂಸ್ಕೃತಿಯೊಂದು ಅಲ್ಲಿ ಗ್ರೀಕಪೂರ್ವಕಾಲದಲ್ಲಿ ನೆಲಸಿತ್ತೆಂದು ಉತ್ಖನನದಲ್ಲಿ ದೊರೆತ ಪ್ರಮಾಣಗಳಿಂದ ಕಂಡುಬಂದಿದೆ. ಭಾರತದ ಇತಿಹಾಸದಲ್ಲಿ ವೇದಪೂರ್ವ ಕಾಲದ ಮೊಹೆಂಜೊದಡೊ ಸಂಸ್ಕೃತಿಯ ಶೋಧವಾದಂತೆಯೇ, ಕೆಲಮಟ್ಟಿಗೆ ಗ್ರೀಕಪೂರ್ವಕಾಲೀನ ನಾಗರೀ ಸಂಸ್ಕೃತಿಯ ಕಥೆಯಿದೆ. ಆ ಜನರ ಮೇಲೆ ಗ್ರೀಕರ ತಂಡಗಳು ದಾಳಿ ಮಾಡಿ ಅಲ್ಲಿದ್ದ ಸಂಸ್ಕೃತಿಯನ್ನು ಅಂಗೀಕರಿಸಿ, ತಮ್ಮದೇ ಆದ ಹೊಸದೊಂದು ಸಂಸ್ಕೃತಿ ಅಲ್ಲಿದ್ದ ಸಂಸ್ಕೃತಿಯನ್ನು ಅಂಗೀಕರಿಸಿ, ತಮ್ಮದೇ ಆದ ಹೊಸದೊಂದು ಸಂಸ್ಕೃತಿ ಯನ್ನು ಬೆಳಸಿಕೊಂಡರು ಸಿಂಧು ಸಂಸ್ಕೃತಿ ಮತ್ತು ವೈದಿಕ ಸಂಸ್ಕೃತಿಗಳು ಭಾರತದಲ್ಲಿ ಗುರುತು ಹತ್ತದಂತೆ ಬೆರೆತುಕೊಂಡ ಹಾಗೆ ಅಲ್ಲಿಯೂ ಆಗಿರುವುದನ್ನು ಕಾಣಬಹುದು.

**ಭೌಗೋಲಿಕ ಪರಿಸ್ಥಿತಿ :**—ಗ್ರೀಸದ ಬಹುಭಾಗವು ಗುಡ್ಡಗಳುಳ್ಳದ್ದಾಗಿದೆ. ಸಾಕಷ್ಟು ಕಡಲು ದಂಡೆಯೂ ಆ ದೇಶಕ್ಕಿದೆ. ಗ್ರೀಸವು ಆಶಿಯದ ಪಶ್ಚಿಮಕ್ಕೂ

ಈಜಿಪ್ತದ ಉತ್ತರಕ್ಕೂ ಇದೆ. ಗ್ರೀಸದ ಈ ಭೌಗೋಲಿಕ ರಚನೆಯೂ ಸ್ಥಾನವೂ ಅದರ ಇತಿಹಾಸದ ಮೇಲೆ ವಿಶೇಷ ಪ್ರಭಾವ ಬೀರಿದೆ. ಗುಡ್ಡಗಳು ತುಂಬಿದ್ದರಿಂದ ಆ ದೇಶದಲ್ಲಿ ಅಖಂಡ ಒಂದೇ ಸಾಮ್ರಾಜ್ಯವುಂಟಾಗಲಿಲ್ಲ. ಸಣ್ಣ ಸಣ್ಣ ನಗರರಾಜ್ಯಗಳು ಹುಟ್ಟಿದವು; ಆ ರಾಜ್ಯಗಳಲ್ಲಿ ಆಗಾಗ ಯಾದವೀ ಕಲಹಗಳಾಗುತ್ತಿದ್ದವು. ಕಡಲಕರೆಯ ಅನುಕೂಲದಿಂದ ಗ್ರೀಸದ ಜನರು ಜಲಪರ್ಯಟನದಲ್ಲಿ ಒಳ್ಳೇ ಪಟುಗಳಾದರು. ಸಮುದ್ರ ಸತ್ತೆಯ ಬಲದಿಂದ ತಮಗಿಂತ ಎಷ್ಟೋ ಪ್ರಬಲವಾದ ಇರಾಣ ರಾಜಸತ್ತೆಯನ್ನು ಗ್ರೀಕರು ಎದುರಿಸಿ, ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಂಡರು. ಗ್ರೀಸ ಮತ್ತು ಆಶಿಯಾ ಮೈನರ್ ದೇಶಗಳಲ್ಲಿಯ ಸಮುದ್ರದಲ್ಲಿದ್ದ ನಡಗಡ್ಡೆಗಳೆಲ್ಲ ತಮ್ಮ ಸ್ವಾತಂತ್ರ್ಯರಕ್ಷಣೆಗಾಗಿ ಸಂಘ ಕಟ್ಟಿಕೊಂಡವು. ಅಂತರ್ಗತ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವದಕ್ಕಾಗಿ ಸಂಘರಾಜ್ಯವನ್ನು ಕಟ್ಟುವ ಕಲ್ಪನೆ ಹುಟ್ಟಿದ್ದು ಗ್ರೀಸದಲ್ಲಿಯೇ ಆಧುನಿಕ ಕಾಲದಲ್ಲಿ ಅಮೇರಿಕೆಯಲ್ಲಿ ಆ ಕಲ್ಪನೆಯ ವಿಕಾಸವಾಯಿತು; ಇಪ್ಪತ್ತನೆಯ ಶತಕದ ಭಾರತದ ಘಟನೆಯ ಬುಡದಲ್ಲಿಯೂ ಕೆಲಮಟ್ಟಿಗೆ ಆ ತತ್ವಗಳೇ ಇವೆ. ಗ್ರೀಸವು ಆಶಿಯಾ ಮತ್ತು ಈಜಿಪ್ತಗಳಿಗೆ ಹತ್ತಿರವಿದ್ದುದರಿಂದ ಆ ಎರಡೂ ಕಡೆಗಳಲ್ಲಿಯ ಜಾಗೃತಿಯ ಲಾಭವು ಮೊದಲು ಗ್ರೀಸಕ್ಕೆ ದೊರಕಿತು. ಮುಂದೆ ಗ್ರೀಸದ ಮೂಲಕ ಯುರೋಪಿನಲ್ಲಿ ಮಾನವೀ ಸಂಸ್ಕೃತಿ ಮೈದೋರಿತು. ಅದಕ್ಕೂ ಮೊದಲು ಯುರೋಪು ಅತ್ಯಂತ ಕಾಡು ಅವಸ್ಥೆಯಲ್ಲಿತ್ತು.

**ರಾಜ್ಯಗಳು ಹಲವು, ಸಂಸ್ಕೃತಿ ಒಂದು.** ಪ್ರಾಚೀನ ಗ್ರೀಕ್ ನಗರ ರಾಜ್ಯಗಳೂ ತಮ್ಮತಮ್ಮಲ್ಲಿ ಬಡಿದಾಡುತ್ತಿದ್ದವೆಂದು ಮೇಲೆ ಹೇಳಿದೆ. ಆದರೆ ಅವರೆಲ್ಲರಿಗೂ ತಾವು ಗ್ರೀಕರು, ಇತರರಿಗಿಂತ ತಾವು ಬೇರೆ ಎಂಬ ಅರಿವು ಇದ್ದಿತು. ಆದುದರಿಂದ ಅಲ್ಲಿ ಹಲವು ರಾಜ್ಯಗಳಿದ್ದೂ ಸಂಸ್ಕೃತಿ ಮಾತ್ರ ಒಂದೇ ಇದ್ದಿತು. ಕ್ರಿ. ಪೂ. ಎಂಟನೆಯ ಶತಕದಲ್ಲಿ ಹೋಮರ್ ಎಂಬ ದೊಡ್ಡ ಕವಿ ಆಗಿಹೋದನು ಅವನು ಗ್ರೀಸದ ರಾಷ್ಟ್ರೀಯ ಕವಿ. ಆತನ 'ಇಲಿಯಡ್' ಎಂಬ ಮಹಾಕಾವ್ಯವು ರಾಮಾಯಣವನ್ನು ನೆನಪಿಗೆ ತರುತ್ತದೆ. ಆದರೆ ರಾಮಾಯಣದಲ್ಲಿ ಶಾಂತರಸ ಮತ್ತು ಸಾತ್ವಿಕ ಭಾವಗಳ ಪರಿಪೋಷಣೆ ಮಾತ್ರ ಇಲಿಯಡ್ಡಿನಲ್ಲಿಲ್ಲ. ಅದು ಅದ್ಭುತ ಮತ್ತು ವೀರ ರಸಗಳಿಂದ ತುಂಬಿದೆ. ಭಾರತದಲ್ಲಿ ದಕ್ಷಿಣದ ಮದುರೆಯಿಂದ ಉತ್ತರದ ಹರಿದ್ವಾರದ ವರೆಗೆ, ಪಶ್ಚಿಮದ ದ್ವಾರಕೆಯಿಂದ ಪೂರ್ವದ ಕಲಕತ್ತೆಯ ವರೆಗೆ ವಿವಿಧ ಮಾತೃ ಭಾಷೆಯವರಿಗೆಲ್ಲರಿಗೂ ರಾಮಾಯಣ ಮಹಾಭಾರತಗಳು ಆದರಣೀಯವಾಗಿರುವಂತೆ, ಗ್ರೀಸದ ನಗರರಾಜ್ಯಗಳಲ್ಲಿ ಹೋಮರನ ಕಾವ್ಯಕ್ಕೆ ಆದರವಿತ್ತು. ಅಪೋಲೋ ಎಂಬವನು ಗ್ರೀಕರ ದೇವರು. ಎಲ್ಲರೂ ಆತನನ್ನು ಪೂಜಿಸುತ್ತಿದ್ದರು. ಡೆಲ್ಫಿ ಎಂಬಲ್ಲಿ ಅಪೊಲೊ ಗುಡಿಯಿತ್ತು. ಆ ಗುಡಿಗೆ ಎಲ್ಲ ಗ್ರೀಕರೂ ಉತ್ಸುಕತೆಯಿಂದ ಹೋಗುತ್ತಿದ್ದರು. ಅಲ್ಲಿ ಪ್ರಶ್ನೆ ಕೇಳುತ್ತಿದ್ದರು, ಅಲ್ಲಿಯ ಪೂಜಾರಿಯ ಮೆಯ್ಯಲ್ಲಿ ದೇವರು ಬಂದು ಪ್ರಶ್ನೆಗಳಿಗೆ ಉತ್ತರ ಕೊಡುತ್ತಿದ್ದನು. ಅತ್ತ ಎರಡು

ರಾಜ್ಯಗಳಲ್ಲಿ ಕಾಳಗ ನಡೆದಿರುವಾಗ ಆ ಎರಡೂ ರಾಜ್ಯಗಳ ಜನರು ಈ ದೇವಾಲಯದಲ್ಲಿ ನೆರೆದು ತಮ್ಮ ತಮ್ಮ ಪ್ರಶ್ನೆಗಳಿಗೆ ಉತ್ತರ ಪಡೆದು ತಮ್ಮ ತಮ್ಮ ಊರಿಗೆ ತೆರಳುತ್ತಿದ್ದರು. ಪೂಜಾರಿಯ ಮುಖದಿಂದ ಬರುವ ಉತ್ತರಗಳು ಅತ್ಯಂತ ಸಂದಿಗ್ಧವಾಗಿರುತ್ತಿದ್ದವು. ಆದರೆ ಅದರಲ್ಲಿ ಜನರಿಗೆ ತುಂಬಾ ನಂಬಿಕೆಯಿತ್ತು. ಗ್ರೀಕರ ಈ ಸಾಂಸ್ಕೃತಿಕ ಐಕ್ಯವು ಮುಂದೆ ಇನ್ನೂ ಒಂದು ಕಾರಣದಿಂದ ಇನ್ನಷ್ಟು ದೃಢವಾಯಿತು.

**ಒಲಿಂಪಿಕ್ ಮೇಲಾಟ :** ಕ್ರಿ. ಪೂ. ಎಂಟನೆಯ ಶತಕದಲ್ಲಿ ಒಲಿಂಪಿಯ ಎಂಬಲ್ಲಿ ಸಾಮುದಾಯಿಕ ಆಟಗಳ ಮೇಲಾಟವನ್ನು ಜರುಗಿಸಲು ಆರಂಭಿಸಿದರು. ಈ ಮೇಲಾಟವು ಈಗ ಯುರೋಪಿನಲ್ಲಿ 'ಒಲಿಂಪಿಕ್ ಗೇಮ್ಸ್' ಎಂಬ ಹೆಸರಿನಿಂದ ರೂಢಿಯಲ್ಲಿದೆ; ಈಗ ಅದಕ್ಕೆ ಅಂತರರಾಷ್ಟ್ರೀಯ ಸ್ವರೂಪವು ಪ್ರಾಪ್ತವಾಗಿದೆ. ಈ ಆಟಗಳು ನಾಲ್ಕು ವರುಷಗಳಿಗೊಮ್ಮೆ ನಡೆಯುತ್ತಿದ್ದವು. ಆ ಸಮಯದಲ್ಲಿ ನಗರರಾಜ್ಯಗಳಲ್ಲಿ ಯುದ್ಧವಾಗುತ್ತಲಿದ್ದರೂ ಯುದ್ಧವನ್ನು ನಿಲ್ಲಿಸಿ, ಎಲ್ಲರೂ ಉತ್ಸಾಹದಿಂದ ಮೇಲಾಟಗಳಲ್ಲಿ ಭಾಗವಹಿಸಿ ಆಡುತ್ತಿದ್ದರು. ಇಂತಹ ಪ್ರಸಂಗದಲ್ಲಿ ಅವರಿಗೆ ಸಹಜವಾಗಿಯೆ ತಮ್ಮತಮ್ಮೊಳಗಿನ ಹಗೆತನದ ಮರೆವಾಗುತ್ತಿತ್ತು. ಅವರು ಆಟದಲ್ಲಿಯ ನಿರ್ಮಲ ಆನಂದವನ್ನು ಅನುಭವಿಸುತ್ತಿದ್ದರು. ಈ ಬಗೆಯಾಗಿ ಗ್ರೀಕ ಸಂಸ್ಕೃತಿಯ ಮೂಲಭೂತ ಐಕ್ಯವು ರಾಜಕೀಯ ಭೇದವನ್ನು ಜಯಿಸಿದ್ದಿತೆಂದು ಹೇಳಬಹುದಾಗಿದೆ.

**ಸ್ಪಾರ್ಟಾ :** ಸ್ಪಾರ್ಟಾ ಎಂಬುದು ಗ್ರೀಕ ನಗರರಾಜ್ಯಗಳಲ್ಲೊಂದು. ನಿಕರವಾದ ಸೈನ್ಯಸಂಘಟನೆಯಲ್ಲಿ ಅದು ಹೆಸರಾಗಿತ್ತು. ಕ್ರಿ. ಪೂ. ೮ನೆಯ ಶತಕದಲ್ಲಿ ಅಲ್ಲಿ ಲಾಯಕರಗಸ್ ಎಂಬವನು ಆಗಿಹೋದನು. ಹುಡುಗರಿಗೆ ವಯಸ್ಸಿನ ಮೂರನೆಯ ವರ್ಷದಿಂದಲೇ ಸಾಮುದಾಯಿಕ ನಡೆವಳಿಯ ಮತ್ತು ಸೈನಿಕ ಶಿಸ್ತಿನ ಶಿಕ್ಷಣ ಕೊಡಬೇಕು, ಗಂಡಸರು ಮೂವತ್ತು ವಯಸ್ಸಾಗುವ ವರೆಗೂ ಹೆಂಗಸರು ಇಪ್ಪತ್ತು ವಯಸ್ಸಾಗುವ ವರೆಗೂ ಮದುವೆಯಾಗಕೂಡದು, ಎಲ್ಲರೂ ಬಯಲೊಳಗಾಡುವ ಆಟಗಳನ್ನು ಆಡಬೇಕು, ಯಾರಾದರೂ ತಪ್ಪು ಮಾಡಿದುದು ಕಂಡುಬಂದರೆ ಕಠಿಣವಾಗಿ ಶಿಕ್ಷಿಸಬೇಕು—ಎಂಬುದಾಗಿ ಅವನು ನಿಯಮ ಮಾಡಿದನು.

ಸಾಹಿತ್ಯ ಮತ್ತು ಲಲಿತಕಲೆಗಳಿಂದ ಎರಡು ಮೊಳ ದೂರವೇ ಇರಬೇಕು ಎಂದು ಲಾಯಕರಸನು ಹೇಳುತ್ತಿದ್ದನು. ಏಕೆಂದರೆ ಮನುಷ್ಯನು ಎಷ್ಟೆಷ್ಟು ಸಾಹಿತ್ಯಕನಾಗುವನೋ ಅಷ್ಟಷ್ಟು ಭಾವನಾಶೀಲನೂ ದುರ್ಬಲನೂ ಆಗುವನೆಂದು ಅವನ ಅಭಿಪ್ರಾಯವಾಗಿತ್ತು. ಎಲ್ಲರೂ ಸಾದಾ ಆಹಾರ ಸೇವಿಸಬೇಕು; ಮಿಷ್ಟಾನ್ನ ಪಕ್ವಾನ್ನಗಳನ್ನು ತಿನ್ನಲಾಗದು; ಏಕೆಂದರೆ ಅದರಿಂದ ಮನುಷ್ಯನು ವಿಲಾಸಿಯಾಗುತ್ತಾನೆಂದು ಅವನ ಮತ. ಗಂಡಸಾಗಲಿ ಹೆಂಗಸೇ ಆಗಲಿ ಅಲಂಕಾರಗಳನ್ನು ಧರಿಸಲಾಗದು; ಇಷ್ಟೇ ಏಕೆ, ಕೊಡಕೊಳ್ಳುವ ವ್ಯವಹಾರದಲ್ಲಿ ಕೂಡ ಚಿನ್ನ-ಬೆಳ್ಳಿಯ ನಾಣ್ಯಗಳ ಬದಲು ಕಬ್ಬಿಣ ನಾಣ್ಯಗಳನ್ನು ಬಳಸಬೇಕೆಂದು ಅವನ-

ಅಪ್ಪಣೆಯಿತ್ತು. ಅಶಕ್ತ ಮಗು ಹುಟ್ಟಿದರೆ ತಂದೆ ಹವೆಯಲ್ಲಿ ಬರಿಮೈಲೆ ಒಯ್ದು, ಅದರಲ್ಲಿ ಬದುಕಿದರೆ ಅದನ್ನು ಪೋಷಿಸಬೇಕು; ಬೇನೆಕೊಳಕ, ಬಡಕಲು ಕೂಸುಗಳನ್ನು ಬುದ್ಧಿಪೂರ್ವಕವಾಗಿ ದುರ್ಲಕ್ಷಿಸಬೇಕು; ಎಂದು ಅವನು ಹೇಳುತ್ತಿದ್ದನು.

**ಸ್ಪಾರ್ಟನ್ ಸ್ತ್ರೀಯರು :** ಆ ಕಾಲದ ಸ್ಪಾರ್ಟನ್ ಸ್ತ್ರೀಯರು ಶೂರರಾಗಿದ್ದರು. ಅವರ ಶೌರ್ಯದ ವರ್ಣನೆಯನ್ನು ಓದಿದರೆ ಭಾರತದ ರಾಜಪುತ ವೀರಾಂಗನೆಯರು ನೆನಪಾಗುತ್ತಾರೆ. ಸ್ಪಾರ್ಟನ್ ಸ್ತ್ರೀಯರು ಗಂಡಸರ ಮೇಲೆ ತುಂಬಾ ವರ್ಚಸ್ಸುಳ್ಳವರಾಗಿದ್ದರು. ತಮ್ಮ ಗಂಡು ಮಕ್ಕಳಿಗೆ ಸಾಹಸದ ಕಾರ್ಯಗಳನ್ನು ಕೈಕೊಳ್ಳಲು ಅವರು ಉತ್ತೇಜನವೀಯುತ್ತಿದ್ದರು ಒಮ್ಮೆ ಕೆಲ ಸ್ಪಾರ್ಟನ್ ಸ್ತ್ರೀಯರೂ ಅಥೆನ್ಸದಲ್ಲಿಯ ಸ್ತ್ರೀಯರೂ ಒತ್ತಟ್ಟಿಗೆ ಸೇರಿದ್ದರು. ಆಗ ಅಥೆನ್ಸದ ಒಬ್ಬ ಸರದಾರನ ಹೆಂಡತಿ ಸ್ಪಾರ್ಟನ್ ಸ್ತ್ರೀಗೆ ಉಪರೋಧದಿಂದ ಹೀಗೆಂದಳು: 'ಸ್ಪಾರ್ಟಾದಲ್ಲಿ ಗಂಡಸರ ರಾಜ್ಯವಿಲ್ಲ; ಹೆಂಗಸರೇ ಗಂಡಸರ ಮೇಲೆ ಅಧಿಕಾರ ನಡೆಸುತ್ತಾರೆ ಅಲ್ಲಿ.' ಈ ಮಾತಿನಲ್ಲಿಯ ಉಪರೋಧವನ್ನು ತಿಳಿದುಕೊಂಡು ಸ್ಪಾರ್ಟಾ ಮಹಿಳೆ ಉತ್ತರವಿತ್ತಳು. 'ಹೌದು ಅದು ನಿಜ. ಆದರೆ ಗಂಡಸೆಂಬ ಹೆಸರಿಗೆ ಒಪ್ಪುವಂತಹ ಪ್ರಾಣಿ ಸ್ಪಾರ್ಟಾ ಸ್ತ್ರೀಯ ಗರ್ಭದಿಂದಲೇ ಹುಟ್ಟುವುದೆಂಬುದನ್ನು ಮರೆಯಬೇಡಿರಿ.' ರಾಷ್ಟ್ರದ ಕಣ್ಮುಂದೆ ಒಂದು ಗುರಿಯಿದ್ದರೆ ಅದನ್ನು ಸಾಧಿಸಲು ಕೇವಲ ಘಟನೆಯಿಂದ ಉಪಯೋಗವಿಲ್ಲ. ಸಮಾಜದಲ್ಲಿಯ ಸ್ತ್ರೀ ಪುರುಷರಿಗೆ ಅನುರೂಪ ಶಿಕ್ಷಣವನ್ನು ಕೊಡಬೇಕು; ಅವರ ನಿತ್ಯದ ನಡೆವಳಿ ಕೂಡ ಆ ಧ್ಯೇಯಕ್ಕೆ ಅನುರೂಪವಾದುದಿರಬೇಕು ಎಂಬುದನ್ನು ಬಗೆದು ಲಾಯಕರಸನು. ಸ್ಪಾರ್ಟಾವನ್ನು ಸೈನಿಕರಾಷ್ಟ್ರವನ್ನಾಗಿ ಸಜ್ಜುಗೊಳಿಸುವುದಕ್ಕೆ ತಕ್ಕಂತಹ ಶಿಕ್ಷಣವನ್ನೂ ನಡೆನುಡಿಗಳನ್ನೂ ಸ್ಪಾರ್ಟಾಕ್ಕೆ ಕಲಿಸಿದನು. ಮುಂದಿನ ಕಾಲದಲ್ಲಿ ಇರಾಣದ ಸಮ್ರಾಟರು ಗ್ರೀಸದ ಮೇಲೆ ದಾಳಿ ಮಾಡಿದರು. ಆಗ ಅದಕ್ಕೆ ಎದೆಗೊಟ್ಟು ಮಾತೃಭೂಮಿಯನ್ನು ರಕ್ಷಿಸಿದ ಕಡುಗಲಿಗಳಲ್ಲಿ ಸ್ಪಾರ್ಟನರು ಪ್ರಮುಖರಾಗಿದ್ದರು.



ಸ್ಪಾರ್ಟನ್ ಕುಮಾರಿ

**ಅಥೆನ್ಸ :** ಅಥೆನ್ಸಿನ ಜೀವನದ ಸ್ವರೂಪವು ಸ್ಪಾರ್ಟಾಕ್ಕಿಂತ ಬೇರೆಯಾಗಿತ್ತು. ಅಲ್ಲಿ ಮಾದರಿಯ ಪ್ರಜಾಪ್ರಭುತ್ವದ ರಾಜ್ಯಘಟನೆ ಉದಯಹೊಂದಿತು. ಲೋಕಸಭೆ, ಶಿಷ್ಟಸಭೆ, ಲೋಕನಿಯುಕ್ತ ಮಂತ್ರಿಮಂಡಲ ಇವುಗಳ ಮೂಲಕ ಅಲ್ಲಿಯ ರಾಜ್ಯಾಡಳಿತ ನಡೆಯುತ್ತಿತ್ತು. ಲೋಕಸಭೆಯ ಚರ್ಚೆಗಳು ಬಯಲಿನಲ್ಲಿ ಹಗಲುರಾತ್ರಿ ನಡೆಯುತ್ತಿದ್ದವು. ಅದರಲ್ಲಿ ಭಾಗವಹಿಸಲು ಎಲ್ಲ ವಯಸ್ಕರಿಗೂ ಮುಕ್ತದ್ವಾರವಿತ್ತು.

**ಸೋಲೋನನ ಸುಧಾರಣೆ**: ಕ್ರಿ. ಪೂ. ಆರನೆಯ ಶತಕದಲ್ಲಿ ಸೋಲೋನನೆಂಬವನು ಗ್ರೀಕ ಪ್ರಜಾಪ್ರಭುತ್ವದ ತಳಹದಿಯನ್ನು ಹಾಕಿದನು. ಸ್ಪಾರ್ಟಾಕ್ಕೆ ಲಾಯಕರಗಿಸನಿದ್ದಂತೆ ಅಥೆನ್ಸಿಗೆ ಸೋಲೋನನಿದ್ದನು. ಮಂತ್ರಿಮಂಡಲದ ಮೇಲೆ ಲೋಕಸಭೆಯ ನಿಯಂತ್ರಣವಿರಬೇಕೆಂದು ಬಗೆದು, ಲೋಕಸಭೆಯ ಅಧಿವೇಶನಗಳು ವರ್ಷದಲ್ಲಿ ಹತ್ತುಸಲ ಸೇರಬೇಕೆಂದೂ ಮಂತ್ರಿಮಂಡಲವು ಎರಡು ಮೂರು ಜನರದಿರದೆ ಒಂಬತ್ತು ಜನರದಿರಬೇಕೆಂದೂ ಅವನು ನಿಯಮ ಮಾಡಿದನು. ಗ್ರೀಕರು ಅಲ್ಲಲ್ಲಿ ಗುಲಾಮರಾಗಿ ಕೆಲಸಮಾಡುತ್ತಿದ್ದರು ಸೋಲೋನನು ಹಣ ತೆತ್ತುಅವರನ್ನು ಬಿಡುಗಡೆಮಾಡಿದನು ಸಾಲಗಾರರಾದ ಒಕ್ಕಲಿಗರ ಒತ್ತೆಕಾಗದಗಳನ್ನು ರದ್ದುಗೊಳಿಸಿ ಅವರನ್ನು ಋಣಮುಕ್ತ ಮಾಡಿದನು. ಸಂಪತ್ತಿನ ವಿಭಜನೆ ವಿಷಮವಾಗಬಾರದೆಂದು ಒಬ್ಬೊಬ್ಬನಿಗೆ ಹೆಚ್ಚೆಂದರೆ ಇಂತಿಷ್ಟೇ ಭೂಮಿಯಿರಬೇಕೆಂದು ನಿಶ್ಚಿತಪಡಿಸಿದನು ಹೀಗೆ ರಾಜಕೀಯ ಪ್ರಜಾಪ್ರಭುತ್ವವನ್ನು ಯಶಸ್ವಿಗೊಳಿಸುವದಕ್ಕಾಗಿ ಅದಕ್ಕೆ ತಕ್ಕ ಆರ್ಥಿಕ ಸುಧಾರಣೆಗಳನ್ನು ಅವನು ಮಾಡಿದನು. ಜನರ ಶಿಕ್ಷಣಕ್ಕೂ ಸೋಲೋನನು ಮನಸ್ಸಿಗೊಟ್ಟನು. ತಂದೆ ಮಗನ ಶಿಕ್ಷಣದ ಬಗ್ಗೆ ತಾತ್ಸಾರ ಮಾಡಿದರೆ, ಮುಪ್ಪಿನ ತಂದೆಯ ಜೋಪಾನದ ಹೊಣೆ ಮಗನ ಮೇಲೆ ಇಲ್ಲ ಎಂದು ಅವನು ಸಾರಿದನು. ಪ್ರಜಾಪ್ರಭುತ್ವದ ಪರಂಪರೆಯ ನಿರ್ಮಾಣಕ್ಕಾಗಿ ಸುಧಾರಣೆಗಳನ್ನು ಮಾಡುತ್ತಲೇ ಯಾರೂ ತಮ್ಮ ಪೂರ್ವಜರನ್ನು ಹಳಿಯಕೂಡದೆಂದು ಕಟ್ಟಪ್ಪಣೆಯನ್ನೂ ಅವನು ವಿಧಿಸಿದನು. ಒಟ್ಟಾರೆ ಪೂರ್ವಜರ ಬಗ್ಗೆ ಆದರವುಳ್ಳವರಾಗಿ, ಪರಂಪರೆಯಲ್ಲಿಯ ಗುಟ್ಟನ್ನರಿತು ಕೊಂಡು ಸುಧಾರಣೆಗಳನ್ನು ಮಾಡುತ್ತಹೋದರೆ ದೇಶದಲ್ಲಿ ಸಹಸಾ ಕ್ರಾಂತಿಯ ವಾತಾವರಣವುಂಟಾಗಲಾರದೆಂಬುದನ್ನು ಅವನು ಅರಿತಿದ್ದನು.

**ಆಜ್ಞಾಪ್ರಭುತ್ವಕ್ಕೆ ನಿರ್ಬಂಧ**: ಸೋಲೋನನು ಇಷ್ಟೊಂದು ಸುಧಾರಣೆಗಳನ್ನು ಮಾಡಿದರೂ ಅಥೆನ್ಸಿನ ಪ್ರಜಾಪ್ರಭುತ್ವದಲ್ಲಿ ಕಾಲಾಂತರದಿಂದ ದೋಷಗಳು ಉಂಟಾಗಿ ಅಲ್ಲಿ ಕಟ್ಟಾಜ್ಞೆಯ ಶಾಸನವು ತಲೆಯೆತ್ತಿತು. ಈ ಆಜ್ಞಾಪ್ರಭುತ್ವವನ್ನು ಪ್ರತಿಬಂಧಿಸಿದವನು ಕ್ಲೀಸ್ಥೇನೀಸ್ ಎಂಬವನು. ಗ್ರೀಕ ಗಣರಾಜ್ಯದಲ್ಲಿ ಎರಡು ಸುಧಾರಣೆಗಳನ್ನು ರೂಢಿಗೆ ತಂದನು. ರಾಜ್ಯದಲ್ಲಿ ಕಟ್ಟಾಜ್ಞೆಯ ಆಳಿಕೆಯ ಭೀತಿಯುಂಟಾದರೆ, ಪ್ರತಿಯೊಬ್ಬ ವಯಸ್ಕ ನಾಗರಿಕನು ಗುಪ್ತಮತದಾನ ಪದ್ಧತಿಯಿಂದ ಪ್ರಜಾಪ್ರಭುತ್ವಕ್ಕೆ ವಿಘಾತಕರಾದವರ ಹೆಸರನ್ನು ಬರೆಯಬೇಕು; ಕೊನೆಗೆ ಮತಗಳನ್ನೆಣಿಸಿ, ೬೦೦೦ ಚೀಟಿಗಳಲ್ಲಿದ್ದ ಹೆಸರಿನವನನ್ನು ಪ್ರಜಾಪ್ರಭುತ್ವ ಶತ್ರುವೆಂದು ತಿಳಿಯಬೇಕು; ಅಂಥವನು ಹತ್ತುವರ್ಷಕಾಲ ದೇಶಭ್ರಷ್ಟನಾಗಿರಬೇಕು ಎಂದು ಅವನು ನಿಯಮ ಮಾಡಿದನು. ಈ ವಿಧಾನಕ್ಕೆ ಇಂಗ್ಲಿಷಿನಲ್ಲಿ ಒಸ್ಟ್ರಾಸಿಜಮ್ (ostacism) ಎನ್ನುತ್ತಾರೆ. ಇವಲ್ಲದೆ ಕ್ಲಿಸ್ಥೇನೀಸನು ಅಥೆನ್ಸ್ ನಗರದಲ್ಲಿ ಹತ್ತುಭಾಗಗಳನ್ನಾಗಿಮಾಡಿ, ಪ್ರತಿಯೊಂದು ಭಾಗಕ್ಕೆ ಅಂತರ್ಗತ ಸ್ವರಾಜ್ಯವನ್ನು ಕೊಟ್ಟನು. ಇಂಥ ವಿಭಾಗಕ್ಕೆ ಗ್ರೀಕಭಾಷೆಯಲ್ಲಿ 'ಡೆಮಸ್' ಎನ್ನುತ್ತಾರೆ. ಈ ಶಬ್ದದಿಂದಲೇ ಪ್ರಜಾಪ್ರಭುತ್ವಕ್ಕೆ ಡೆಮಾಕ್ರಸಿ ಎಂಬ ಇಂಗ್ಲಿಷ್ ಹೆಸರು ಬಂದಿತು. ರಾಜ್ಯವು ಸಣ್ಣದಿದ್ದಷ್ಟು

ಆಡಳಿತದ ಮೇಲೆ ಜನರ ನಿಯಂತ್ರಣ ಕಟ್ಟುನಿಟ್ಟಾಗಿರುವದೆಂದು ಮತ್ತು ಪ್ರಜಾಪ್ರಭುತ್ವವು ತಾಳುವುದು ಎಂಬುದು ಕ್ಲಿಸ್ಥೆನೀಸನ ಸುಧಾರಣೆಯ ಮರ್ಮವಾಗಿದೆ.

**ಥೆಮಿಸ್ಟೊಕ್ಲಿಸ್ :** ಕ್ಲಿಸ್ಥೆನೀಸನ ತರುವಾಯ ಕ್ರಿ. ಪೂ. ಐದನೆಯ ಶತಮಾನದಲ್ಲಿ ಥೆಮಿಸ್ಟೊಕ್ಲಿಸ್‌ನೆಂಬ ಕರ್ತೃತ್ವಶಾಲಿಯು ಉದಯಕ್ಕೆ ಬಂದನು. ಈ ಕಾಲದಲ್ಲಿ ಇರಾಣದ ಸಮ್ರಾಟರಾದ ದಾರಿಯಸ್ ಮತ್ತು ಝರ್ಕ್ಸಿಸ್ ಎಂಬವರು ಗ್ರೀಸದ ಮೇಲೆ ನಾಗಿಬಂದರು. ಥೆಮಿಸ್ಟೊಕ್ಲಿಸನು ತಮ್ಮೊಳಗಿನ ಮತಭೇದವನ್ನು ಮರೆತು ಅಥೆನ್ಸ್ ಮತ್ತು ಸ್ಪಾರ್ಟಾಗಳಲ್ಲಿ ಒಕ್ಕಟ್ಟನ್ನುಂಟುಮಾಡಿದನು. ಮರಥಾನ್ ಮತ್ತು ಥರ್ಮಾಪಿಲಿಗಳಲ್ಲಿಯ ಪ್ರಸಿದ್ಧವಾದ ಹೋರಾಟಗಳು, ಈ ಇರಾಣ ಗ್ರೀಸ್‌ಸಂಗ್ರಾಮದಲ್ಲಿ ಜರುಗಿದವು. ಅವುಗಳಲ್ಲಿ ಗ್ರೀಕರು ಪರಮಾವಧಿ ಶೌರ್ಯವನ್ನೂ ತ್ಯಾಗವನ್ನೂ ತೋರಿದರು; ತಮ್ಮ ತಾಯ್ನಾಡನ್ನು ರಕ್ಷಿಸಿಕೊಂಡರು. ಇದೇ ಕಾಲದಲ್ಲಿ ಅಥೆನ್ಸಿನ ನೌಕಾದಲದ ಸಾಮರ್ಥ್ಯವನ್ನೂ ಥೆಮಿಸ್ಟಾಕ್ಲಿಸನು ಹೆಚ್ಚಿಸಿದನು. ಅದರ ಬಲದಿಂದ ಗ್ರೀಸವು, ಇರಾಣದ ಮೇಲೆ ವಿಜಯವನ್ನು ಸಂಪಾದಿಸಿತು. ಬದಲಾದ ಪರಿಸ್ಥಿತಿಯಲ್ಲಿ ತೀವ್ರವಾದ ಜೀವನ ಕಲಹದಲ್ಲಿ ಗ್ರೀಕ ರಾಜ್ಯಗಳು ಬಿಡಿಬಿಡಿಯಾಗಿದ್ದು ಸ್ವತಂತ್ರವಾಗಿ ಬದುಕಲಾರವೆಂದರಿತು ಎಲ್ಲ ರಾಜ್ಯಗಳ ಒಕ್ಕೂಟವನ್ನು ಸ್ಥಾಪಿಸಿದ ಶ್ರೇಯವೂ ಥೆಮಿಸ್ಟೊಕ್ಲಿಸ್ಸಗೆ ಸೇರಿದ್ದು.

**ಮತ್ತೆ ಕಲಹ:** ಗ್ರೀಕರಿಗಿದ್ದ ಇರಾಣದ ದಾಳಿಯ ಸಂಕಟವು ದೂರಾಯಿತು. ಆದರೆ ಮುಂದೆ ದುರ್ದೈವದಿಂದ ಅಥೆನ್ಸ ಮತ್ತು ಸ್ಪಾರ್ಟಾ ರಾಜ್ಯಗಳಲ್ಲಿ ಜಗಳ ಹುಟ್ಟಿಕೊಂಡಿತು. ಈ ಯುದ್ಧವು ಸುಮಾರು ಅರ್ಧಶತಕದಷ್ಟು ಕಾಲ ನಡೆಯಿತು. ಇದರೊಳಗೆ ಪ್ರಾರಂಭಕಾಲದಲ್ಲಿ ಥೆಮಿಸ್ಟೊಕ್ಲಿಸನು ಅಥೆನ್ಸಿನ ಪಕ್ಷವನ್ನು ಯಶಸ್ವಿಯಾಗಿ ಕಾಪಾಡಿಕೊಂಡನು.



ಪೆರಿಕ್ಲಿಸ್

**ಪೆರಿಕ್ಲಿಸ್ :—** ಥೆಮಿಸ್ಟೊಕ್ಲಿಸನ ತರುವಾಯ ಪೆರಿಕ್ಲಿಸ್ ಎಂಬ ಮಹಾಪುರುಷನು ಉದಯಕ್ಕೆ ಬಂದನು. ಅವನು ಗ್ರೀಕ ಪ್ರಜಾಸತ್ತೆಯನ್ನು ಉತ್ಕರ್ಷಕ್ಕೆ ತಂದನು. ತಮ್ಮ ರಾಜ್ಯವೆಂದರೆ ತಮ್ಮ ಕುಟುಂಬ, ಅದರಲ್ಲಿ ಏನಾದರೂ ಕುಂದು ಕೊರತೆಯಿದ್ದರೆ ತಮಗೆ ಕುಂದು, ರಾಜ್ಯಕ್ಕೆ ಒದಗಿದ ಸಂಕಟಗಳು ತಮ್ಮ ಸಂಕಟಗಳು, ಎಂಬ ಭಾವನೆಯನ್ನು ಅಥೆನ್ಸಿನಲ್ಲಿ ಅವನು ಉಂಟುಮಾಡಿದನು. ಅಥೆನ್ಸ್—ಸ್ಪಾರ್ಟಾ ಯುದ್ಧ ಇನ್ನೂ ನಡೆದಿತ್ತು. ಆ ಸಮಯದಲ್ಲಿ ಪೆರಿಕ್ಲಿಸನ ಸ್ಫೂರ್ತಿಯಿಂದ ಯಾವ ಬಗೆಯ ತ್ಯಾಗಕ್ಕೂ ಜನರು ನಾನು-ತಾನೆಂದು ಮುಂದೆ ಬರುತ್ತಿದ್ದರು. ಯುದ್ಧ

ಕ್ಕಾಗಿ ಹೆಚ್ಚಿನ ತೆರಿಗೆ ಹೇರಿ ಕಡ್ಡಾಯದಿಂದ ಎತ್ತುವ ಪ್ರಸಂಗವೇ ಬರಲಿಲ್ಲ. ಅಥೆನ್ಸಿನ ಉತ್ಕರ್ಷದಲ್ಲಿ ಆನಂದಿಸುವ ಭಾವನೆ, ಅಥೆನ್ಸಿನ ವೈಭವಕ್ಕಾಗಿ ತಮ್ಮಲ್ಲಿದ್ದ ಗುಣವನ್ನು ವಿನಿಯೋಗಿಸುವ ಪ್ರವೃತ್ತಿ, ಅಥೆನ್ಸನ್ನು ಸರ್ವಾಂಗೀಣವಾಗಿ ಮೆರೆಸಬೇಕೆಂಬ ಹಂಬಲ ಹೀಗೆ ಎಲ್ಲೆಲ್ಲಿಯೂ ಉತ್ಸಾಹದ ಮತ್ತು ಸ್ವಾತಂತ್ರ್ಯಾಭಿಲಾಷೆಯ ವಾತಾವರಣವೇ ಇದ್ದಿತು.

**ಅವನ ಸುಧಾರಣೆಗಳು:** ಪೆರಿಕ್ಲಿಸನು ಇರುವ ವರೆಗೂ ಅವನ ನೇತೃತ್ವದಲ್ಲಿ ಅಥೆನ್ಸಿನವರು ಸೈನಿಕ ಶಿಸ್ತಿನ ಸ್ಪಾರ್ಟನ್ ಜನರನ್ನು ಯಶಸ್ವಿಯಾಗಿ ಎದುರಿಸಿದರು. ಪೆರಿಕ್ಲಿಸನು ರಾಜ್ಯದಲ್ಲಿ ಅನೇಕ ಮಹತ್ವದ ಸುಧಾರಣೆಗಳನ್ನು ಮಾಡಿದನು. ಅಥೆನ್ಸಿನ ಸಂಸ್ಕೃತಿಯನ್ನು ಪ್ರಚುರಪಡಿಸುವದಕ್ಕಾಗಿ ಅಥೆನ್ಸ್ ಜನರು ಅಲ್ಲಲ್ಲಿ ಸಂಘರಾಜ್ಯದಲ್ಲಿ ಹೋಗಿ ನೆಲಸಬೇಕು. ಅದರಿಂದ ಸಂಘರಾಜ್ಯದಲ್ಲಿ ಅಥೆನ್ಸ್ ಸಂಸ್ಕೃತಿಯ ಬಗ್ಗೆ ಅಭಿರುಚಿ ಹುಟ್ಟಿ ಅಭಿಮಾನಪಡುವಂತಾಗುವುದೆಂದು ಪೆರಿಕ್ಲಿಸನ ನಂಬುಗೆ. ಅವನ ಮುಂದಾಳ್ತನದಲ್ಲಿ ಸಾರ್ವಜನಿಕ ಕಾರ್ಯ ಮಾಡುವುದಕ್ಕೆ ಜನರು ನಿಸ್ವಾರ್ಥ ಬುದ್ಧಿಯಿಂದ ಮುಂದೆ ಬರುತ್ತಿದ್ದರು ನಿಜ. ಆದರೂ ಪೆರಿಕ್ಲಿಸನು ಯಾವ ಸಾರ್ವಜನಿಕ ಕಾರ್ಯವನ್ನೂ ಜನರು ಉಚಿತವಾಗಿ ಮಾಡುವುದು ಬೇಡ. ಆ ಬಗ್ಗೆ ಅವರಿಗೆ ನಿರ್ವಾಹದ ಮಟ್ಟಿಗೆ ಪ್ರತಿಫಲ ದೊರೆಯಲೇ ಬೇಕು; ಆದರೆ ಅತಿಯಾಗಿರಕೂಡದು ಎಂದು ನಿಯಮ ಮಾಡಿದನು.




ಮಹಾರಾಷ್ಟ್ರ ಗ್ರೀಸ

**ಪ್ರಜಾಪ್ರಭುತ್ವದ ಕೊನೆ:** ಮನದಿಂದ ಪವಿತ್ರನಾಗಿ, ಶಾರೀರಿಕ ಕಷ್ಟಗಳನ್ನು ಎಣಿಸದವನಾಗಿ ಹಗಲಿರುಳೂ ಸಮಾಜಕ್ಕೆ ಸೇವೆ ಸಲ್ಲಿಸಿದ ಪೆರಿಕ್ಲಿಸನಂತಹ ಮನುಷ್ಯನು ಗ್ರೀಸದಲ್ಲಿ ಯಾರೂ ಆಗಿಲ್ಲ. ಆದರೆ ದುರ್ದೈವದಿಂದ ಇಂತಹ ಏಕನಿಷ್ಠ

ವೃತ್ತಿಯ ಪೆರಿಕ್ಲಿಸನ ಮೇಲೆಯೂ ಲೋಕಸಭೆಯಲ್ಲಿ ಟೀಕೆ ಬಂದಿತು; ಅವನ ಬಗ್ಗೆ ಸಂದೇಹದ ವಾತಾವರಣವುಂಟಾಯಿತು. ಅದನ್ನು ಕಂಡು ಅವನಿಗೆ ಅತೀವ ದುಃಖವಾಯಿತು. ಕೊನೆಗೆ, ಈ ದುಃಖದಲ್ಲಿಯೆ ಅವನು ಸತ್ತನು. ಪೆರಿಕ್ಲಿಸನ ತರುವಾಯ ಅಥೆನ್ಸಿಗೆ ಯೋಗ್ಯನಾದ ನಾಯಕರೇ ದೊರಕಲಿಲ್ಲ. ಇಂತಹ ಸ್ಥಿತಿಯಿರುವಾಗ ಅಥೆನ್ಸ್-ಸ್ಪಾರ್ಟಾ ಯುದ್ಧದಲ್ಲಿ ಸ್ಪಾರ್ಟಾ ಗೆದ್ದಿತು. ಎಲ್ಲ ಕಡೆಗೂ ಸ್ಪಾರ್ಟಾದ ಆಳಿಕೆ ಆರಂಭವಾಯಿತು. ಸ್ಪಾರ್ಟಾದ ಈ ವರ್ಚಸ್ಸು ಸುಮಾರು ೮೦ ವರುಷ ಬಾಳಿತು; ಮುಂದೆ ಅದೂ ನಷ್ಟವಾಯಿತು. ಆಗ ಥೀಬ್ಸ್ ರಾಜ್ಯವು ಅದರ ಸ್ಥಾನವನ್ನು ಪಡೆಯಿತು. ಥೀಬ್ಸಿನ ತರುವಾಯ ಮಾಸಿಡೋನಿಯದ ಪರಾಕ್ರಮಿಯಾದ ಪಿಲಿಪ್ಪನು ಸಮಗ್ರ ಗ್ರೀಸವನ್ನು ಪಾದಾಕ್ರಾಂತಮಾಡಿ ಅಲ್ಲಿಯ ಪ್ರಜಾರಾಜ್ಯವನ್ನು ನಷ್ಟಗೊಳಿಸಿದನು. ಹೀಗೆ ಜಗತ್ತಿನ ಇತಿಹಾಸದಲ್ಲಿಯೆ ಮೊದಲನೆಯದಾದ ಪ್ರಯೋಗವು ಒಳಜಗಳದಿಂದ ಅಯಶಸ್ವಿಯಾಯಿತು.

**ಅಲೆಕ್ಝಾಂಡರನ ಉದಯ :** ಫಿಲಿಪ್ಪನ ತರುವಾಯ ಅಲೆಕ್ಝಾಂಡರ್ ಅಥವಾ ಸಿಕಂದರನು ಪಟ್ಟವೇರಿದನು. ಪ್ರಾಚೀನ ಭಾರತದ ಮೇಲೆ ದಾಳಿಮಾಡಿದ ಜಗತ್ಪ್ರಸಿದ್ಧ ಸಿಕಂದರ ಬಾದಶಾಹನು ಈತನೇ. ಅವನಿಗೆ ದೊರೆತ ಆಯುಷ್ಯವೇ ಮೂವತ್ತೆರಡು ವರುಷ ಆದರೆ, ಅಷ್ಟರಲ್ಲಿಯೇ ಅವನು ತೋರಿದ ಪರಾಕ್ರಮವು ಎಲ್ಲರನ್ನೂ ಬೆರಗುಗೊಳಿಸುವಂತಿದೆ. ಹೆಸರಾದ ತತ್ವಜ್ಞಾನಿ ಅರಿಸ್ಟಾಟಲನ ಗರಡಿಯಲ್ಲಿ ತಯಾರಾದವನು. ಅಲೆಕ್ಝಾಂಡರ್ ದೊರೆಯಾದ ಮೇಲೆ ರಾಜ್ಯದ ಬೇರೆ ಬೇರೆ ಭಾಗಗಳಿಗೆ ತನ್ನ ಸರದಾರರನ್ನು ಅಧಿಕಾರಿಗಳನ್ನಾಗಿ ನಿಯಮಿಸಿದನು. ಅವನ್ನು ಅವರಿಗೊಪ್ಪಿಸಿ ಕೊಟ್ಟು ತಾನು ಇರಾಣದ ಮೇಲೆ ಏರಿಹೋದನು. ಸುಮಾರು ಎರಡು ಶತಕಗಳ ಹಿಂದೆ ದಾರಿಯಸ್ ಮತ್ತು ಝರ್ಕ್ಸಿಸರು ಇರಾಣದಿಂದ ಗ್ರೀಸದ ಮೇಲೆ ಯಾವ ಮಾರ್ಗದಿಂದ ದಾಳಿ ತಂದಿದ್ದರೋ ಆ ಮಾರ್ಗದಲ್ಲಿಯೇ ಇವನು ಇರಾಣದ ಮೇಲೆ ಸಾಗಿದನು. ದಾರಿಯಲ್ಲಿ ಟ್ರೈನಗರವನ್ನು ವಶಪಡಿಸಿಕೊಂಡು, ಗ್ರಾನಿಕಸ್ ಎಂಬಲ್ಲಿ ಇರಾಣ ಸೈನ್ಯವನ್ನು ಮೊದಲ ಬಾರಿ ಎದುರಿಸಿದನು. ಅದರಲ್ಲಿ ಅವರನ್ನು ಸೋಲಿಸಿ ಅವನು ಇಜಿಪ್ತದತ್ತ ಸಾಗಿದನು. ಅಲ್ಲಿ ತನ್ನ ವರ್ಚಸ್ಸನ್ನು ಪ್ರಸ್ಥಾಪಿಸಿ, ನೈಲ್ ನದಿಯ ಮುಖದ ಬಳಿ ಅಲೆಕ್ಝಾಂಡ್ರಿಯಾ ಎಂಬ ನಗರವನ್ನು ಸ್ಥಾಪಿಸಿದನು ಅಲ್ಲಿಂದ ಅಲೆಕ್ಝಾಂಡರನು ಸಿರಿಯದ ಮಾರ್ಗವಾಗಿ ಉತ್ತರಕ್ಕೆ ಹೊರಟನು. ದಾರಿಯಲ್ಲಿ ಇಶ್ಯಸ್ ಎಂಬಲ್ಲಿ ಇರಾಣ ಸೇನೆಯನ್ನು ಎರಡನೆಯ ಸಲ ಸೋಲಿಸಿ, ಅವನು ಪೂರ್ವಕ್ಕೆ ಬಾಬಿಲೋನಿಯದ ಕಡೆ ತೆರಳಿದನು. ಅಲ್ಲಿ ಅರ್ಬೆಲಾ ಎಂಬಲ್ಲಿ ಇರಾಣಿಗಳಿಗೂ ಗ್ರೀಕರಿಗೂ ನಿಕರವಾದ ಕಾಳಗ ನಡೆಯಿತು. ಇರಾಣದ ದೊರೆ ಕಾಳಗದ ಕಣದಲ್ಲಿ ಬಿದ್ದನು; ವಿಜಯಮಾಲೆ ಸಿಕಂದರನ ಕೊರಳಿಗೆ ಬಿದ್ದಿತು. ಇಷ್ಟರಿಂದ ಸಿಕಂದರನು ತಣಿಯಲಿಲ್ಲ. ಭಾರತದ ಕಡೆಗೆ ದಾಳಿಗೆ ಹೊರಟನು. ಈ ವಿಷಯವು ಬೇರೆ ಕಡೆಗೆ ವಿಸ್ತಾರವಾಗಿ ಬಂದಿದೆ. ( ಆರಸಿಯ ಖಂಡ ನೋಡಿರಿ ).

**ಡಾಯೋಜಿನಿಸನ ಕಥೆ:** ಅಲೆಕ್ಝಾಂಡರನ ಪರಾಕ್ರಮದ ಬಗ್ಗೆ, ಅವನ ಜಾಣತನದ ಬಗ್ಗೆ ಅನೇಕ ಮನೋರಂಜಕ ಕತೆಗಳು ಪ್ರಚಲಿತವಾಗಿವೆ. ಮಾದರಿಗಾಗಿ ಇಲ್ಲಿ ಒಂದನ್ನೇ ಹೇಳುತ್ತೇವೆ. ಒಮ್ಮೆ ಸಾಯನೋಪ್ ನಗರಕ್ಕೆ ಅವನು ಹೋಗಿದ್ದನು. ಅಲ್ಲಿಯ ಹತ್ತಿರದ ಡಾಯೋಜಿನಿಸನೆಂಬ ಅಡವಿಯಲ್ಲಿ ಒಬ್ಬ ವಿರಾಗಿಯಿದ್ದಾನೆಂದು ಅವನಿಗೆ ಗೊತ್ತಾಯಿತು. ಆತನು ತನ್ನಲ್ಲಿಗೆ ಬಂದು ಕಾಣಬೇಕೆಂದು ಸಿಕಂದರನು ಮೊದಲು ಪ್ರಯತ್ನಿಸಿದನು. ಆದರೆ, ಡಾಯೋಜಿನಿಸನು ಬರುವಂತೆ ಕಾಣಲಿಲ್ಲ. ತಾನೇ ಅವನಲ್ಲಿಗೆ ಹೊರಟನು. ಬೆಳಗಿನ ವೇಳೆ ಡಾಯೋಜಿನಿಸ್ ಗುಡಿಸಲ ಮುಂದೆ ಬಿಸಿಲು ಕಾಯಿಸುತ್ತ ಕುಳಿತಿದ್ದನು. ಅಲೆಕ್ಝಾಂಡರನೂ ಅವನ ಸರದಾರರೂ ಹತ್ತಿರ ಹೋದಾಗ, ಅವರ ಉದ್ದವಾದ ನೆರಳು ಅಲ್ಲಿಯವರೆಗೂ ಪಸರಿಸಿದವು. ವೈರಾಗಿ ಮುಖವೆತ್ತಿ ನೋಡಲಿಲ್ಲ. ಆಗ ಅಲೆಕ್ಝಾಂಡರನು ತನ್ನ ಅಭಿಮಾನವನ್ನು ಬದಿಗಿರಿಸಿ, "ಯೋಗಿಶ್ವರರೇ, ತಮ್ಮ ಇಚ್ಛೆಯೇನುಂಟೋ ಬೇಡಿರಿ, ಅದನ್ನು ಕೊಡಲು ನಾನು ಸಿದ್ಧನಿದ್ದೇನೆ, ಸಮರ್ಥನೂ ಇದ್ದೇನೆ" ಎಂದನು. ಆಗ ಯೋಗೀಶ್ವರನು ಶಾಂತವಾಗಿ ಮೊಗವೆತ್ತಿದನು. "ಹೀಗೋ! ಹಾಗಾದರೆ ನಿನ್ನ ನೆರಳು ನನ್ನ ಮೇಲೆ ಬಿದ್ದಿದೆ, ದಯವಿಟ್ಟು ಕೊಂಚ ಸೋಳಾಗು, ನನಗೆ ಬಿಸಿಲನ್ನು ಕಾಯಿಸಗೊಡು." ಅವನ ವಿರಕ್ತ ಉತ್ತರವನ್ನು ಕೇಳಿ ಸಿಕಂದರನು ತಣ್ಣಗಾದನು. ತನ್ನ ಸರದಾರರನ್ನು ಕುರಿತು "ನೋಡಿದಿರಾ, ಎಂತಹ ಮಹಾಪುರುಷನೀತ! ನಾನು ಅಲೆಕ್ಝಾಂಡರನಾಗಿರದಿದ್ದರೆ ಡಾಯೋಜಿನೀಸನೇ ಆಗುತ್ತಿದೆ." ಈ ಪ್ರಸಂಗಾವಧಾನದ ಉದ್ಗಾರದಿಂದ ಸಿಕಂದರನು ತನ್ನ ಹಿರಿಮೆಯನ್ನು ಉಳಿಸಿಕೊಂಡು ಆ ಪ್ರಸಂಗದಿಂದ ಪಾರಾದನು.

**ಸಮ್ರಾಟನ ಮೃತ್ಯು:** ಪಶ್ಚಿಮ ಜಗತ್ತಿನಲ್ಲಿ ಅಲೆಕ್ಝಾಂಡರನು ಮೊದಲನೆಯ ಪರಾಕ್ರಮಿ ಸಮ್ರಾಟನು. ಅವನು ತರುಣನಾಗಿದ್ದನು. ಅವನಿಗೆ ಒಂದೇ ಸವನೆ ಗೆಲವಾಗುತ್ತ ಹೋದುದರಿಂದ ಅವನು ಉನ್ಮತ್ತನಾದನು. ಅವನಿಗೆ ಮದ್ಯಪಾನದ ಚಟ ಅಂಟಿಕೊಂಡಿತು. ಇಂತಹ ಸ್ಥಿತಿಯಲ್ಲಿ ಅವನಿಗೆ ಮರಣವೊದಗಿತು. ಅಲೆಕ್ಝಾಂಡರನ ತರುವಾಯ ಗ್ರೀಸದ ಇತಿಹಾಸದ ಅಂಕಪರದೆ ಬಿದ್ದಂತಾಯಿತು. ಮಾನವೀಕರ್ತೃತ್ವದ ಕಿಡಿಗಳು ರೋಮದಲ್ಲಿ ಪ್ರಕಟವಾಗತೊಡಗಿದವು; ಮತ್ತು ಮುಂದಿನ ಸಾವಿರ ಹನ್ನೆರಡನೂರು ವರುಷಗಳಲ್ಲಿ—ಎಂದರೆ, ಕ್ರಿ. ಪೂ. ದ ನಾಲ್ಕನೆಯ ಶತಕದಿಂದ ಕ್ರಿ. ವ. ಐದನೆಯ ಶತಕದವರೆಗೆ—ಪಶ್ಚಿಮ ಜಗತ್ತಿನಲ್ಲಿ ರೋಮ ಸಾಮ್ರಾಜ್ಯದ ಪ್ರಭುತ್ವವುಂಟಾಯಿತು.

**ಗ್ರೀಕ ಸಂಸ್ಕೃತಿಯು ಅಮೂಲ್ಯನಿಧಿ:** ಪ್ರಾಚೀನ ಗ್ರೀಸದಲ್ಲಿ ಮಾನವೀಯ ಕರ್ತೃತ್ವದ ಅನೇಕ ರೂಪಗಳಿಂದ ಪ್ರಕಟವಾಯಿತು. ಪ್ರಜಾಪ್ರಭುತ್ವದ ಪ್ರಯೋಗವು, ಮಾನವತೆಗೆ ಗ್ರೀಸವು ಸಲ್ಲಿಸಿದ ಮಹತ್ವದ ಕಾಣಿಕೆಯಾಗಿದೆ. ಪ್ರಜಾಸತ್ತೆಯ ನಿರ್ಭಯ—ಸ್ವತಂತ್ರ ವಾತಾವರಣದಲ್ಲಿ ಕಾವ್ಯ, ಇತಿಹಾಸ, ತತ್ತ್ವಜ್ಞಾನ, ರಾಜಕಾರಣ, ಶಿಲ್ಪ, ಚಿತ್ರಕಲೆ ಮತ್ತು ಭೌತಿಕ ಶಾಸ್ತ್ರ—ಹೀಗೆ ಜ್ಞಾನದ ವಿವಿಧ ಶಾಖೆ

ಗಳು ಚಿಗಿತು ಬೆಳೆದವು. ಮತ್ತು, ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲರಂತಹ ತತ್ತ್ವಜ್ಞಾನಿಗಳ ಗುರುಶಿಷ್ಯ ಪರಂಪರೆ ಆರಂಭವಾಯಿತು.

**ಸಾಕ್ರೆಟಿಸ್ :** ಈ ಪರಂಪರೆಯಲ್ಲಿ ಸಾಕ್ರೆಟಿಸನ ಯೋಗ್ಯತೆ ದೊಡ್ಡದು. ಕ್ರಿ. ಪೂ. ೪೬೯ರಲ್ಲಿ ಈತನ ಜನನವಾಯಿತು. ಅವನ ತಂದೆ ಮೂರ್ತಿಶಿಲ್ಪಿ. ಸಾಕ್ರೆಟಿಸ್ ಪ್ರಕೃತಿಯಿಂದ ಗಟ್ಟಿ, ವೃತ್ತಿಯಿಂದ ಶಾಂತ; ನೋಡುವುದಕ್ಕೆ ಕುರೂಪಿ. ಝಾಂಟಿಪಿ ಎಂಬವಳು ಈತನ ಹೆಂಡತಿ. ಈ ಗಂಡಹೆಂಡಿರ ಜೋಡಿ, ಮಹಾರಾಷ್ಟ್ರದ ತುಕಾರಾಮ-ಜಿಜಾಬಾಯಿಯರಂತೆ ಗ್ರೀಸೇತಿಹಾಸದಲ್ಲಿ ಹೆಸರಾಗಿದೆ. ಒಮ್ಮೆ ಝಾಂಟಿಪಿ ನೀರಿಗೆ ಹೋಗಿದ್ದಳು; ಒಲೆಯ ಕಡೆಗೆ ನೋಡಿರೆಂದು ಸಾಕ್ರೆಟಿಸನಿಗೆ ಹೇಳಿದ್ದಳು; ಈ ಮುನಿ ತನ್ನ ವಿಚಾರ ಸಮಾಧಿಯಲ್ಲಿಯೆ ಇದ್ದನು,—ಆ ಕೆಲಸದ ಕಡೆ ದುರ್ಲಕ್ಷವಾಯಿತು; ಒಲೆಯ ಮೇಲಿನ ಅಡಿಗೆ ಹೊತ್ತಿತು; ಝಾಂಟಿಪೆ ಮರಳಿ ಬಂದು ನೋಡಿದಳು; ಗಂಡನಮೇಲೆ ಸಿಟ್ಟಿನಿಂದ ಒದರಾಡಿದಳು; ಎಷ್ಟೆಂದರೂ ಸಾಕ್ರೆಟಿಸ್ ಶಾಂತನಾಗಿದ್ದನು,–ಸಿಟ್ಟಿನ್ನಲಿಲ್ಲ. ಇದರಿಂದ ಝಾಂಟಿಪಿ ಮತ್ತಷ್ಟು ರೇಗಿದಳು. ಅದೇ ತಂದ ಕೊಡತುಂಬ ನೀರನ್ನು ಗಂಡನ ಮೇಲೆ ಸುರಿದುಬಿಟ್ಟಳು. ಆಗಲೂ ಸಾಕ್ರೆಟಿಸ್ ನಸುನಕ್ಕು ಎಂದುದು ಇಷ್ಟೆ: "ಚೆನ್ನಾಯಿತು. ಇಷ್ಟೊಂದು ಗುಡುಗಿದ ಮೇಲೆ ಮಳೆ ಬರುವುದು ಸಹಜವೆ!' ಸಾಕ್ರೆಟಿಸನ ಈ ಕತೆ ಆತನ ಶಾಂತ ಮತ್ತು ಚಿಂತನಶೀಲ ವೃತ್ತಿಗೆ ಸಾಕ್ಷಿಯಾಗಿದೆ. ಒಮ್ಮೆ ಡೆಲ್ಫೀದೇವಾಲಯದಲ್ಲಿ 'ಅಥೆನ್ಸಿನಲ್ಲಿ ಎಲ್ಲರಿಗಿಂತ ಬುದ್ಧಿಶಾಲಿ ಯಾರು ?' ಎಂದು ಕೇಳಿದ ಪ್ರಶ್ನೆಗೆ 'ಸಾಕ್ರೆಟಿಸ್' ಎಂದು ಉತ್ತರ ದೊರೆಯಿತು. ಈ ಸಂಗತಿ ಸಾಕ್ರೇಟೀಸನ ಕಿವಿ ವರೆಗೆ ಹೋದಾಗ ಅವನಿಗೆ ಅತ್ಯಂತ ಆಶ್ಚರ್ಯವಾಯಿತು. ಏಕೆಂದರೆ ತನ್ನ ಜ್ಞಾನ ಎಷ್ಟು ಅಲ್ಪ ಎಂಬುದು ಅವನಿಗೆ ಗೊತ್ತಿತ್ತು. ಬಹಳ ವಿಚಾರ ಮಾಡಿದ ಮೇಲೆ ಆ ದೈವೀ ಉತ್ತರದ ಸುಸಂಗತಿ ಸ್ವಲ್ಪ ಹೊಳೆಯಿತು. ಜಗತ್ತಿನಲ್ಲಿ ಬಹು ಜನರು ಅಲ್ಪಜ್ಞರಿರುತ್ತಾರೆ; ಆದರೆ ಎಷ್ಟೋ ಜನರಿಗೆ ತನಗೆ 'ಪೂರ್ಣ ತಿಳಿದಿಲ್ಲ' ಎಂಬುದೇ ತಿಳಿಯುವದಿಲ್ಲ. ಸಾಕ್ರೆಟೀಸನಿಗೆ ಮಾತ್ರ ತಾನು ಪೂರ್ಣ ತಿಳಿದವನಲ್ಲ ಎಂಬುಸು ತಿಳಿಯುತ್ತಿತ್ತು ಇದೇ ಅವನ ಬುದ್ಧಿವಂತಿಕೆಯ ಕುರುಹು.


ಸಾಕ್ರೆಟಿಸ್

**ಸಾಕ್ರೆಟಿಸನ ವಿಚಾರಣೆ :** ಸಾಕ್ರೇಟಿಸನು ಪುಸ್ತಕಗಿಸ್ತಕ ಬರೆದಿಲ್ಲ ಅವನು ಅನೇಕರೊಡನೆ ಸಂಭಾಷಣೆ ಮಾಡುತ್ತಿದ್ದನು. ಬೀದಿ ಬೀದಿ ಅಲೆಯುತ್ತ ಅನೇಕ ಪ್ರಶ್ನೆಗಳನ್ನು ಕೇಳುತ್ತಿದ್ದನು. ಅದರಿಂದ ಜನರು ಕುಂಠಿತರಾಗುತ್ತಿದ್ದರು, ಅಂತರ್ಮುಖರಾಗಿ ವಿಚಾರಕ್ಕೆ ತೊಡಗುತ್ತಿದ್ದರು. ಇದರಿಂದ ಅಥೆನ್ಸಿನ ತರುಣರ ಶೋಧಕ

ಬುದ್ಧಿಗೆ ಚಾಲನೆ ದೊರೆತು, ಅವರು ಬೇಕುಬೇಕಾದಲ್ಲಿ 'ಅದು ಏಕೆ, ಇದು ಹೇಗೆ' ಎಂದು ಹಿರಿಯರನ್ನೂ ಅಧಿಕಾರಿಗಳನ್ನೂ ವಿಚಾರಿಸತೊಡಗಿದರು. ತಮ್ಮ ಪ್ರಶ್ನೆಗೆ ಸಮಾಧಾನಕಾರಕ ಉತ್ತರ ದೊರೆಯದಿದ್ದರೆ, ಅಧಿಕಾರಿಗಳ ಅಪ್ಪಣೆಯನ್ನು ಅವರು ನಡೆಸದಾದರು. ಆದುದರಿಂದ, "ಸಾಕ್ರೆಟಿಸನು ಬಂಡುಗಾರನು, ರಾಜಸತ್ತೆಯ ವಿರುದ್ಧ ತರುಣರ ಮನವನ್ನು ಕೆಡಿಸುತ್ತಿದ್ದಾನೆಂ"ದು ಅವನ ಮೇಲೆ ಆರೋಪವಿಡಲಾಯಿತು. ನ್ಯಾಯಾಲಯದಲ್ಲಿ ವಿಚಾರಣೆ ನಡೆಯಿತು. ಸಾಕ್ರೇಟಿಸನು ತಾನು ಅಪರಾಧಿಯಲ್ಲ ವೆಂದನು. "ಬೌದ್ಧಿಕ ಸ್ವಾತಂತ್ರ್ಯವನ್ನು ಸಂಪಾದಿಸುವುದೂ ಧೈರ್ಯದಿಂದ ಅದನ್ನು ಉಪಯೋಗಿಸಿಕೊಳ್ಳುವುದೂ ಪ್ರಗತಿಯ ಮೂಲ" ಎಂದು ಅವನು ಪ್ರತಿಪಾದಿಸಿದನು. ಅವನ ಈ ಹೇಳಿಕೆ ನ್ಯಾಯಾಲಯದಲ್ಲಿ ಸ್ವೀಕೃತವಾಗಲಿಲ್ಲ. ಅವನಿಗೆ ವಿಷಪ್ರಾಶನದ ಮೂಲಕ ದೇಹಾಂತ ಶಿಕ್ಷೆ ವಿಧಿಸಲಾಯಿತು. ಸಾಕ್ರೇಟಿಸನು ಶಾಂತನಾಗಿ ಆ ತೀರ್ಪನ್ನು ಕೇಳಿಕೊಂಡನು.

**ಕೊನೆಯ ದಿವ್ಯ ಸಂದೇಶ :** ಈ ತೀರ್ಪಾದ ಬಳಿಕ ಸಾಕ್ರೆಟೀಸನು ಸುಮಾರು ಒಂದು ತಿಂಗಳು ಜೀವಿಸಿದ್ದನು. ಏಕೆಂದರೆ ಅವನಿಗೆ ಶಿಕ್ಷೆಯಾದ ತಿಂಗಳು, ಗ್ರೀಸದಲ್ಲಿ ಯಾರನ್ನೂ ಕೊಲ್ಲುವುದಕ್ಕೆ ನಿಷಿದ್ಧವಾದ ತಿಂಗಳಾಗಿತ್ತು. ಈ ಕಾಲದಲ್ಲಿ ಸಾಕ್ರೆ ಟಿಸನು ನಿರ್ಭಯವಾಗಿ 'ಆತ್ಮನಿಗೆ ಸಾವಿಲ್ಲ' ಎಂಬ ವಿಷಯವಾಗಿ ಪ್ರವಚನ ಮಾಡು ತ್ತಿದ್ದನು. ಅವನಿಗೆ ಸೆರೆಮನೆಯಿಂದ ಓಡಿಹೋಗಲು, ಆಸ್ಪದವಿತ್ತು; ಹಾಗೆ ಮಾಡು ಎಂದು ಬಲುಮಂದಿ ಹೇಳಿದರು; ಸಾಕ್ರೆಟಿಸ್ ಅದನ್ನೊಪ್ಪಲಿಲ್ಲ. 'ನ್ಯಾಯಾಲಯಕ್ಕೂ ನನಗೂ ಮತಭೇದವಿದೆ; ಆದರೆ ನ್ಯಾಯಾಲಯದ ಗೌರವವನ್ನು ಕಾಯುವುದು ನನ್ನ ಕರ್ತವ್ಯವಾಗಿದೆ; ನಾನು ಓಡಿ ಹೋಗಿ ಪ್ರಸ್ಥಾಪಿತ ರಾಜಸತ್ತೆಯನ್ನು ಅವಮಾನಪಡಿ ಸಿದರೆ ಸಮಾಜಸ್ಥೈರ್ಯದ ಬುಡಕ್ಕೇ ಕೊಡಲಿಯಿಟ್ಟಂತಾಗುವುದು. " ಎಂದು ಅವನು ಹೇಳಿದನು. ಈ ದಿವ್ಯ ಸಂದೇಶವನ್ನಿತ್ತು, ಶಾಂತಚಿತ್ತದಿಂದ ವಿಷ ಕುಡಿದು ಆ ಮಹಾ ಪುರುಷನು ಮರಣಹೊಂದಿದನು (ಕ್ರಿ. ಪೂ. ೩೯೯.... ನಿರ್ಭಯ ವ್ಯಕ್ತಿ. ತರ್ಕಶುದ್ಧ ವಿಚಾರ, ಪ್ರತಿಪಕ್ಷದ ಭಿನ್ನಮತದ ಬಗ್ಗೆ ಆದರ ಇವುಗಳ ಮೂಲಕ ಮಾನವೀಯ ಇತಿಹಾಸದ ಪ್ರಗತಿಯಾಗಿದೆ. ಸಾಕ್ರೆಟಿಸನು ತನ್ನ ಆಚಾರವಿಚಾರಗಳಿಂದ ಈ ಗುಣ ಗಳನ್ನೇ ಆರಾಧಿಸಿದನು. ಜಗತ್ತಿನ ಮಹಾಪುರುಷರೊಳಗೆ ಸಾಕ್ರೇಟೀಸನಿಗೆ ಬಹಳ ಮೇಲಿನ ಸ್ಥಾನ ಸಲ್ಲಬೇಕು. ಪ್ಲೇಟೊ ಅವನ ಶಿಷ್ಯನು; ಅರಿಸ್ಟಾಟಲನು ಶಿಷ್ಯನು. ಅರಿಸ್ಟಾಟಲನು ಪ್ಲೇಟೋವಿನ ಶಿಷ್ಯನು. ಅರಿಸ್ಟಾಟಲನ ತತ್ತ್ವಜ್ಞಾನ ಮತ್ತು ಸಾಹಿತ್ಯವಿಷಯಕವಾದ ಗ್ರಂಥಗಳು ವಿದ್ಯಾಪೀಠಗಳಲ್ಲಿ ಈಗಲೂ ಓದಲ್ಪಡುತ್ತವೆ. ಮೇಲೆ ಬಣ್ಣಿಸಿದ ಅಲೆಕ್ಝಾಂಡರನು ಅರಿಸ್ಟಾಟಲನ ಶಿಷ್ಯನು.

**ಜ್ಞಾನದ ಇತರ ಶಾಖೆಗಳು :** ಈ ಎಲ್ಲ ತತ್ತ್ವಜ್ಞರ ಹೊರತಾಗಿ ಡೆಮೊಸ್ಥೆ ನೀಸ್ ಎಂಬ ಉಪನ್ಯಾಸಕ, ಹಿರೋಡೋಟಸ್ ಮತ್ತು ಥ್ಯೂಸಿಡಾಯ್ಡಿಸ್ ಎಂಬ ಇತಿಹಾಸಕಾರರು, ಹೋಮರ್ ಮತ್ತು ಪಿಂಡಾರ್ ಎಂಬ ಕವಿಗಳು, ಫಿಡಿಯಸ್ ಎಂಬ ಶಿಲ್ಪಿ, ಪ್ರಾಕ್ಸಿಟೀಲಿಸ್ ಎಂಬ ಚಿತ್ರಕಾರ-ಇವರು ಬೇರೆ ಬೇರೆ ಕಾಲದಲ್ಲಿ

ಗ್ರೀಸದಲ್ಲಿ ಆಗಿಹೋದರು. ಆ ಕಾಲದ ಗ್ರೀಕ ಶಿಲ್ಪಕಾರರು ರೂಪಿಸಿದ ಮೂರ್ತಿಗಳು ಭವ್ಯವಾಗಿಯೂ ಅಂದವಾಗಿಯೂ ಇರುವವು; ಇಜಿಪ್ತದಲ್ಲಿಯ ಆಕೃತಿಗಳಂತೆ ಅದ್ಭುತವಾದುವಲ್ಲ. ಪ್ರಾಕ್ಸಿಟೇಲಿಸ್ ತೆಗೆದು ದ್ರಾಕ್ಷಿಯ ಬಳ್ಳಿಯ ಚಿತ್ರಕ್ಕೆ ಹಕ್ಕಿಗಳು ಹಣ್ಣು ತಿನ್ನಲು ಎರಗುತ್ತಿದ್ದವೆಂದು ಹೇಳುತ್ತಾರೆ;–ಅಷ್ಟು ತದ್ರೂಪ ಅವನ ಕಲಾಕೃತಿ. ಮೆಸಿಡೋನಿಯದ ದೊರೆಯಾದ ಅಲೆಕ್ಝಾಂಡರನು ಪ್ರಜಾಪ್ರಭುತ್ವ ರಾಜ್ಯಗಳನ್ನು ಮಣ್ಣುಗೂಡಿಸಿ ಸಾಮ್ರಾಜ್ಯ ಕಟ್ಟಿದುದನ್ನು ಹಿಂದೆಯೇ ಹೇಳಿದೆ. ಅವನ ಮೃತ್ಯುವಿನ ಬಳಿಕ ಆ ಸಾಮ್ರಾಜ್ಯವು ತುಂಡುತುಂಡಾಯಿತು. ಇಜಿಪ್ತದಲ್ಲಿ ಟೊಲೆಮಿರಾಜನ ಆಳಿಯಲ್ಲಿ ಅಲೆಕ್ಝಾಂಡ್ರಿಯಾ ನಗರದಲ್ಲಿ ವಿದ್ಯಾಪೀಠವು ಸ್ಥಾಪಿತವಾಗಿ ಅಲ್ಲಿ ಗ್ರೀಕ ವಿದ್ಯಾಕಲೆಗಳ ಉಪಾಸನೆ ಮುಂದುವರಿಯಿತು. ಪ್ರಸಿದ್ಧ ಭೂಮಿಕಾರ ಯುಕ್ಲಿಡ್, ಪದಾರ್ಥವಿಜ್ಞಾನಶಾಸ್ತ್ರಜ್ಞ ಆರ್ಕಿಮಿಡಿಸ್, ಮತ್ತು ಪೃಥ್ವಿಯ ವ್ಯಾಸವು ೮೦೦೦ ಮೈಲಿದೆಯೆಂದು ಲೆಕ್ಕಮಾಡಿ ಹೇಳಿದ ಎರಟೋಸನೀಸ್ ಇವರೆಲ್ಲರೂ ಈ ವಿದ್ಯಾಪೀಠದಲ್ಲಿಯ ಸಂಶೋಧಕರು. ಇಲ್ಲಿಯ ಹೀರೊ ಎಂಬ ಶಾಸ್ತ್ರಜ್ಞನು ತನ್ನ ಪ್ರಯೋಗ ಶಾಲೆಯಲ್ಲಿ ಪ್ರತ್ಯಕ್ಷ ಉಗಿಯ ಯಂತ್ರವನ್ನು ಶೋಧಿಸಿದನೆಂದೂ ಅವನ ಪ್ರಯೋಗಕ್ಕೆ ರಚನಾ ಕುಶಲರ ಕೊರತೆಯಿಂದ ದೊಡ್ಡ ಪ್ರಮಾಣದಲ್ಲಿ ಎಂಜಿನುಗಳು ಹೊರಡಲಿಲ್ಲವೆಂದೂ ಆದ್ದರಿಂದ ೧೮ನೆಯ ಶತಕದವರೆಗೂ ಮಾನವ ಜೀವನಕ್ಕೆ ಉಗಿಯ ಯಂತ್ರದ ಉಪಯೋಗವು ತಿಳಿಯದೆ ಹೋಯಿತೆಂದೂ ಹೇಳಲಾಗುತ್ತದೆ.

**ಸಮಾರೋಪ** : ಮೇಲಿನ ತ್ರೋಟಕ ವಿವರಣೆಯಿಂದ ಜಗತ್ತಿನ ಇತಿಹಾಸದಲ್ಲಿ ಗ್ರೀಸದ ಕಾರ್ಯವೇನು ಎಂಬುದು ತಿಳಿಯುವುದು. ಪ್ರಜಾಪ್ರಭುತ್ವದ ಘಟನೆ, ಸ್ವತಂತ್ರ ಮತ್ತು ನಿರ್ಭಯ ವಾತಾವರಣ, ಜ್ಞಾನದ ಆರಾಧನೆ ತರ್ಕಶುದ್ಧ ವಿಚಾರ ಸರಣಿ ಮತ್ತು ಶಾಸ್ತ್ರೀಯ ದೃಷ್ಟಿ—ಈ ಗುಣಗಳು ಗ್ರೀಸದಲ್ಲಿ ಪೋಷಣೆ ಹೊಂದಿದವು. ಮುಂದಿನ ಕಾಲದಲ್ಲಿ ನಡುನಡುವೆ ಜನರಿಗೆ ಇವುಗಳ ಮರೆವಾದರೂ ಕೊನೆಯಲ್ಲಿ ಈ ಗುಣಗಳ ಆಧಾರದ ಮೇಲೆಯೇ ಮಾನವನು ಪ್ರಗತಿಯ ಹೆಜ್ಜೆ ಇಡುತ್ತಿದ್ದಾನೆ.

## ಪ್ರಶ್ನೆಗಳು

೧. ಸಂಕ್ಷೇಪವಾಗಿ ಸಂಗತಿಗಳನ್ನು ಬರೆಯಿರಿ : ೧) ಲಾಯಕರಗಸ್ ೨) ಸೊಲೋನ್, ೩) ಪೆರಿಕ್ಲಿಸ್.

೨. ಗ್ರೀಕ ಸಂಸ್ಕೃತಿಗೆ ಏಕೆ ಪ್ರಾಶಸ್ತ್ಯ ಕೊಡಲಾಗುತ್ತದೆ ?

೩. ಪ್ರಜಾಪ್ರಭುತ್ವದ ಬಗ್ಗೆ ಮಾಹಿತಿ ಬರೆಯಿರಿ.

೪. ಸಾಕ್ರೆಟೀಸನ ಯೋಗ್ಯತೆಯನ್ನು ತಿಳಿಸಿರಿ.

ಪಂಚಮ ಖಂಡ

# ರೋಮದ ಹುಟ್ಟು, ಬೆಳಿಗೆ ಮತ್ತು ಕೊನೆ:

# ಯುರೋಪಿಗೆ ರೋಮದ ಕಾಣಿಕೆ

**ರೋಮದ ಮಹತ್ವ :** ಪಾಶ್ಚಾತ್ಯ ಜಗತ್ತಿನ ಇತಿಹಾಸದಲ್ಲಿ' ಗ್ರೀಸ ಮತ್ತು ರೋಮಗಳ ಮಹತ್ವ ಬಹಳ ಹಿರಿದು. ಯುರೋಪಿನ ಸಂಸ್ಕೃತಿ ಗ್ರೀಸ-ರೋಮ ಗಳು ಹಾಕಿಕೊಟ್ಟ ಪರಂಪರೆಯಲ್ಲಿಯೇ ಜನ್ಮವೆತ್ತಿತು. ಗ್ರೀಸ ರೋಮಗಳು ಒಂದರ್ಥದಲ್ಲಿ ಪರಸ್ಪರ ಪೂರಕವಾಗಿವೆ. ಪ್ರಯೋಗಶಾಲೆಯಲ್ಲಿ ಕಂಡ ಶೋಧವು ಕಾರಖಾನೆಗಳ ಉಪಯೋಗಕ್ಕೆ ಬಂದು, ಅಲ್ಲಿ ಸರಕುಗಳು ಹುಟ್ಟಿ ಹೊರಬೀಳುತ್ತವೆ. ಹಾಗೆಯೇ ಗ್ರೀಸದ ಪ್ರಯೋಗಶಾಲೆಯಲ್ಲಿ ಆದ ಶೋಧಗಳು ರೋಮ ರಾಜ್ಯದಲ್ಲಿ ಸಂಸ್ಥೆಯ ರೂಪದಲ್ಲಿ ಕಾಣಿಸಿಕೊಂಡವು. ಯುರೋಪು ತನ್ನ ಉತ್ಕರ್ಷಕ್ಕಾಗಿ ಅವುಗಳನ್ನು ಯಥೇಷ್ಟವಾಗಿ ಬಳಸಿಕೊಂಡಿತು. ನಮ್ಮಲ್ಲಿ ರಾಮಾಯಣ ಮಹಾ-ಭಾರತದ ಕಥೆಗಳು ಹೇಗೋ ಹಾಗೆ, ಯುರೋಪಿನಲ್ಲಿ ಗ್ರೀಸ-ರೋಮಗಳ ಕಥೆಗಳು ಸಕಲರಿಗೂ ಸುಪರಿಚಿತವಾಗಿವೆ. ಜುಲೈ ಮತ್ತು ಅಗಷ್ಟ ಈ ಆಂಗ್ಲ ಮಾಸಗಳ ಹೆಸರುಗಳು ರೋಮದ ಜೂಲಿಯಸ್ ಸೀಝರ್ ಮತ್ತು ಆಗಸ್ಟಸ್ ಸೀಝರರ ಹೆಸರುಗಳಿಂದ ಬಂದಿವೆ. ಯುರೋಪಿನಲ್ಲಿ ಝಾರ್ ಮತ್ತು ಕೈಸರ್ ಎಂಬ ಸರ್ವಾಧಿ ಕಾರಿ ಉಪಪದಗಳು ಸೀಝರ್ ಎಂಬುದರಿಂದ ಉಂಟಾಗಿವೆ. ರೋಮಕ್ಕೆ ಸಂಬಂಧ ಪಟ್ಟ ಎಷ್ಟೋ ನಾಣ್ಣುಡಿಗಳು ಆಂಗ್ಲ ಭಾಷೆಯಲ್ಲಿ ಹುಟ್ಟಿವೆ. "ರೋಮವೇನೂ ಒಂದೇ ದಿನದಲ್ಲಿ ಕಟ್ಟಲ್ಪಡಲಿಲ್ಲ," "ರೋಮಕ್ಕೆ ಹೋದಾಗ ರೋಮನಂತೆ ನಡೆ" "ಈ ಕಡೆ ಉರಿಯುತ್ತಿತ್ತು, ಆ ಕಡೆ ರೋಮನ್ ಚಕ್ರವರ್ತಿ ನೀರೋ ಫಿಡ್ಲ ಬಾರಿ ಸುತ್ತ ಕುಳಿತ," "ಎಲ್ಲ ದಾರಿಗಳೂ ಕೊನೆಮುಟ್ಟುವದು ರೋಮಕ್ಕೇ" ........ ಇಂತಹ ನಾಣ್ಣುಡಿಗಳನ್ನು ಎಷ್ಟೋ ಹೇಳಬಹುದು.

**ರೋಮದ ಪ್ರಜಾರಾಜ್ಯ :** ಕ್ರಿ. ಪೂ. ೭೫೩ನೆಯ ವರುಷ ರೊಮಿಲಸ್ ಎಂಬ ರಾಜನು ಟಾಯಬರ್ ಹೊಳೆಯ ದಂಡೆಯಲ್ಲಿ ರೋಮವನ್ನು ಸ್ಥಾಪಿಸಿದನು.

ಅಂದಿನಿಂದ ರೋಮದ ಇತಿಹಾಸ ಮೊದಲಾಯಿತು. ಕ್ರಿ. ಪೂ. ೬ನೆಯ ಶತಕದಲ್ಲಿ ದಕ್ಷಿಣ ಕಡೆಯ ಲ್ಯಾಟಿನ್ ಜನರು ರೋಮವನ್ನು ಮುತ್ತಿ ವಶಪಡಿಸಿಕೊಂಡರು. ಲ್ಯಾಟಿನರು ಆರ್ಯವಂಶಜರು. ಭಾರತದಲ್ಲಿ ಆರ್ಯಸಂಸ್ಕೃತಿ ಮತ್ತು ಸಂಸ್ಥೆಗಳು ವರ್ಚಸ್ವಿಯಾದಂತೆ ಅವರ ಆಳಿಕೆಯಲ್ಲಿ ರೋಮವು ಸಂಪೂರ್ಣ ಲಾಟಿನ್‌ಮಯ ವಾಯಿತು. ಅವರು ಪ್ರಜಾಸತ್ತೆಯನ್ನು ಪ್ರೀತಿಸುವವರಾಗಿದ್ದರು. ಗ್ರೀಕರಂತೆ ಇವರೂ ವಿಚಾರವಿನಿಮಯಕ್ಕಾಗಿ ಲೋಕಸಭೆ ಮತ್ತು ಉಚ್ಚವರ್ಗೀಯರ ಸಭೆ ಗಳನ್ನು ಸ್ಥಾಪಿಸಿ ರಾಜ್ಯಕಾರಭಾರ ಸಾಗಿಸುವುದಕ್ಕೆ ಕೌನ್ಸಿಲನ್ನು ಆರಿಸಿದರು ಆದರೆ, ಇಷ್ಟಕ್ಕೇ ನಿಲ್ಲಲಿಲ್ಲ. ಸಾಮಾನ್ಯರಿಗೂ ಉಚ್ಚವರ್ಗೀಯರಿಗೂ ಮೇಲಿಂದ ಮೇಲೆ ಜಗಳಗಳಾಗುತ್ತಿದ್ದವು. ಅವರೆಲ್ಲರನ್ನು ನಿಯಂತ್ರಣದಲ್ಲಿಡುವುದಕ್ಕಾಗಿ ಲೋಕಸಭೆ ಕಟ್ಟಳೆ ಮಾಡಿತು. ಈ ಕಾಯದೆ ಎಲ್ಲರಿಗೂ ಗೊತ್ತಿರುತ್ತಿರಲಿಲ್ಲ.



ರೋಮನ್ ಚಿತ್ರಕಲೆಯ ಮಾದರಿ

ಆದುದರಿಂದ ಜಗಳವನ್ನು ತೀರ್ಮಾನಿಸಲಿಕ್ಕೆ ತೊಂದರೆಯಾಗುತ್ತಿತ್ತು ಅದನ್ನು ನಿವಾರಿಸಲು ಸಾರ್ವಜನಿಕ ಸ್ಥಳಗಳಲ್ಲಿ ಹನ್ನೆರಡು ದೊಡ್ಡ ಮೇಜುಗಳನ್ನಿರಿಸಿ ಅವುಗಳ ಮೇಲೆ ಕಾಯದೆಗಳನ್ನೆಲ್ಲ ಕೊರೆಸಿದ್ದರು. ಹೀಗೆ ಕಾಯದೆ ಜ್ಞಾನವನ್ನು ಜನರಲ್ಲಿ ಪ್ರಚಾರಪಡಿಸಿ, ಕಾಯದೆಗಳನ್ನು ಆಧರಿಸಿದ ರಾಜ್ಯವನ್ನು ಸುಸ್ಥಿರಪಡಿಸಲು ಯತ್ನಿ ಸಿದರು. ಸಾಮಾನ್ಯರಿಗೆ ಪ್ಲೀಬಿಯನ್ ಎಂದೂ ಉಚ್ಚವರ್ಣೀಯರಿಗೆ ಪೆಟ್ರೀಸಿಯನ್

ಎಂದೂ ಹೆಸರುಗಳಿದ್ದವು. ಕಾಯಿದೆ ಮಾಡಿದರೂ ಕೋರ್ಟಿನಲ್ಲಿ ಸಾಮಾನ್ಯರ ಮೊರೆ ನಾಟುತ್ತಿರಲಿಲ್ಲ. ಈ ನ್ಯೂನತೆಯನ್ನು ಹೋಗಲಾಡಿಸಿ ಲ್ಯಾಟಿನರ



ರೋಮನಗರದ ಚಾವಡಿ ( ಫೋರಮ್ )

ಇಂತಹ ದೂರುಗಳ ವಿಚಾರಣೆಯಾಗಬೇಕೆಂದು ಸಾಮಾನ್ಯ ಜನರ ನ್ಯಾಯಾಲಯಗಳು ಹುಟ್ಟಿದವು. ಇದರ ಪರಿಣಾಮವಾಗಿ ಸ್ವಲ್ಪ ಕಾಲದಲ್ಲಿಯೇ ಉಚ್ಚವರ್ಗೀಯ ಮತ್ತು ಸಾಮಾನ್ಯ ಜನರೊಳಗೆ ನಾಗರಿಕತ್ವದ ಹಕ್ಕುಗಳ ಬಗ್ಗೆ ಮತಭೇದ ಉಳಿಯಲಿಲ್ಲ. ಅಲ್ಲದೆ, ಜನರು ಕಾಯದೆಯ ಕಕ್ಷೆಗಳಲ್ಲಿರುವಂತೆ, ದುರ್ವರ್ತನೆ ಮಾಡದಂತೆ ನೋಡಿಕೊಳ್ಳುವದಕ್ಕೆ ನಿರೀಕ್ಷಕರನ್ನು ( ಸೆನ್ಸಾರರನ್ನು ) ರೋಮನರು ನಿಯಮಿಸಿದರು. ನಿರೀಕ್ಷಕರ ಕೆಲಸಗಳು ವಿವಿಧವಾಗಿದ್ದವು. ಜನರು ತಮ್ಮ ಹೊಲಗಳ ನಾಗುವಳಿಯಲ್ಲಿ ವೈಗಳ್ಳರಾದರೆ, ಧಾರ್ಮಿಕ ಪ್ರಸಂಗಗಳಲ್ಲಿ ಹೆಚ್ಚು ವೆಚ್ಚ ಮಾಡಿದರೆ, ಸಾರ್ವಜನಿಕ ಸ್ಥಳಗಳಲ್ಲಿ ಸಲ್ಲದ ಕೆಲಸ ಮಾಡಿದರೆ ಇವೆಲ್ಲವನ್ನೂ ಈ ನಿರೀಕ್ಷರು ನೋಡುತ್ತಿದ್ದರು. ಅಂತಹ ಜನರು ಶಿಕ್ಷೆಗೆ ಗುರಿಯಾಗುತ್ತಿದ್ದರು. ಮುಂದೆ ಮುಂದಂತೂ ಜಮೀನದಾರರ ವಶದಲ್ಲಿ ಹೆಚ್ಚೆಂದರೆ ಎಷ್ಟು ಭೂಮಿಯಿರಬೇಕೆಂಬುದನ್ನೂ ನಿಯಂತ್ರಿಸತೊಡಗಿದರು. ನಿರೀಕ್ಷಕರ ಯೋಜನೆಯಿಂದ ಎಲ್ಲರಿಗೆ ವಿಶೇಷವಾಗಿ ಉಚ್ಚವರ್ಗೀಯರಿಗೆ ಒಳ್ಳೇ ಬಿಗಿತವುಂಟಾಯಿತು. ಒಟ್ಟಾರೆ, ರೋಮದಲ್ಲಿಯ ಜೀವನಕ್ರಮವು ಸುಸೂತ್ರವಾಗಿ ಸಾಗತೊಡಗಿತು. ರಾಜ್ಯವು ವ್ಯವಸ್ಥಿತವಾಗಿ ನಡೆಯುವದಕ್ಕೆ ಬರಿ ಕಾಯಿದೆಗಳಾದರೆ, ಅಥವಾ ಪ್ರಜಾಸತ್ತೆಯ ಘಟನೆ

ಇದ್ದುದಷ್ಟೇ ಸಾಲದು. ಅದಕ್ಕಾಗಿ ಕೆಲವೊಂದು ಅನುರೂಪ ತಂತ್ರಗಳನ್ನು ರಚಿಸ ಬೇಕಾಗುತ್ತದೆ. ಮೇಲೆ ಹೇಳಿದಂತೆ ಅವುಗಳನ್ನು ನಿರ್ಮಿಸುವಲ್ಲಿ ರೋಮನರು ಪಡೆದ ಯಶಸ್ಸು ಸುತ್ತಲಿನ ಪ್ರಪಂಚದಲ್ಲಿ ಪ್ರಶಂಸೆ ಪಡೆಯಿತು. ಹೊರಗಿನ ಜಗತ್ತಿನ ಜನರು ಸುಸೂತ್ರ ಜೀವನಕ್ಕಾಗಿ ರೋಮರಾಜ್ಯದಲ್ಲಿ ಸೇರಲು ಬಯಸು ವಂತಾಯಿತು. ಒಟ್ಟಾರೆ, ರೋಮವು ಇತರ ದೇಶಗಳನ್ನು ಗೆಲ್ಲುವುದಕ್ಕೆ ಪ್ರತಿ ಯಾಗಿ ಆ ದೇಶಗಳಿಗೇ ರೋಮನ್ ಸತ್ತೆಯ ಬಗ್ಗೆ ಉತ್ಸುಕತೆಯುಂಟಾಗಿ, ರೋಮನ್ ಪ್ರಭುತ್ವ ಹಬ್ಬಿತು. ರಾಜ್ಯವಿಸ್ತಾರದ ಇಂತಹ ಉದಾಹರಣೆಗೆ ಜಗ ತ್ತಿನ ಇತಿಹಾಸದಲ್ಲಿ ಇನ್ನೊಂದಿಲ್ಲ.

**ಸಂಕಟ ಪ್ರಸಂಗದಲ್ಲಿ ಆಜ್ಞೆಸತ್ತೆ :** ಆಕಸ್ಮಿಕ ಸಂಕಟಗಳನ್ನು ಎದುರಿಸುವ ದಕ್ಕಾಗಿ ರೋಮಗಣರಾಜ್ಯವು ಒಂದು ಹಂಚಿಕೆಯನ್ನು ಯೋಚಿಸಿತು. ಸಂಕಟ ಸಮಯದಲ್ಲಿ ಲೋಕಸಭೆಯನ್ನು ಸೇರಿಸಿ ವಿಚಾರವಿನಿಮಯ ಮಾಡುವುದು ಅಶಕ್ಯ ವಾಗುತ್ತದೆ. ಆಗ 'ರೋಮಕ್ಕೆ ಸಂಕಟ ಸಮಯ ಬಂದಿದೆ' ಎಂದು ಸಾರಿ ಎಲ್ಲ ಅಧಿಕಾರಗಳನ್ನು ಒಬ್ಬನೇ ಸರ್ವಾಧಿಕಾರಿಯ ಕೈಗೆ ಕೊಡುತ್ತಿದ್ದರು. ಇಂಥ ಆಜ್ಞಾ ಪ್ರಭುತ್ವ ಆರುತಿಂಗಳು ಮಾತ್ರ ಇರತಕ್ಕದ್ದು. ಅಗತ್ಯವಿದ್ದರೆ ಆ ಅವಧಿಯನ್ನು ಹೆಚ್ಚಿಸುತ್ತಿದ್ದರು. ಆದರೆ ಗಣರಾಜ್ಯದ ಆರಂಭಕಾಲದಲ್ಲಿ ಹೀಗೆ ಸಹಸಾ ಆಗು ತ್ತಿರಲಿಲ್ಲ. ರೋಮದ ಕಲ್ಪನೆಗಳು ರೀತಿ–ನೀತಿ, ಪರಂಪರೆಗಳು ಜನರಿಗೆ ತಿಳಿಯ ಬೇಕೆಂದು ಸೇವಾನಿವೃತ್ತ ರೋಮನ್ ಶಿಪಾಯಿಗಳು ರೋಮದಲ್ಲಿಯೇ ಇರದೆ, ದೂರ ದೂರ ನೆಲಸಲು ಹೋಗುತ್ತಿದ್ದರು. ಸರಕಾರವು ಅವರಿಗೆ ಅಲ್ಲಿಯ ನಿರ್ವಾಹಕ್ಕಾಗಿ ಹೊಲಗಳನ್ನು ಉಚಿತವಾಗಿ ಕೊಡಿಸುತ್ತಿದ್ದಿತು. ಈ ಹೊರನಾಡಿನಲ್ಲಿ ನೆಲಸಿದವರು ಅಲ್ಲಿಯ ಜನರಲ್ಲಿ ರೋಮನ್ ಸಂಸ್ಕೃತಿಯ ಬಗ್ಗೆ ಆಸಕ್ತಿಯನ್ನು ಹುಟ್ಟಿಸಿ ರೋಮದ ಬಗ್ಗೆ ದೃಢನಿಷ್ಠೆಯನ್ನು ಉಂಟುಮಾಡಿದರು.

**ರೋಮ–ಕಾರ್ಥೇಜ್ ಯುದ್ಧ :** ರೋಮದ ಗಣರಾಜ್ಯವು ದಿನದಿನಕ್ಕೆ ಅಭಿವೃದ್ಧಿ ಹೊಂದುತ್ತಿರುವಾಗ ಅದಕ್ಕೆ ಯುದ್ಧಸಂಕಟವು ಪ್ರಾಪ್ತವಾಯಿತು. ರೋಮದ ದಕ್ಷಿಣಕ್ಕೆ, ಭೂಮಧ್ಯ ಸಮುದ್ರದ ಆಚೆ, ಆಫ್ರಿಕೆಯ ಉತ್ತರ ತೀರದಲ್ಲಿ ಫಿನಿಸಿಯನ್ನರು ಕಾರ್ಥೆಜ್ ಎಂಬಲ್ಲಿ ಸ್ವತಂತ್ರರಾಜ್ಯವನ್ನು ಕಟ್ಟಿದರು. ಈ ಫಿನಿಸಿ- ಯನ್ನರು ಸೆಮಿಟಿಕ್ ವಂಶದವರು. ಅವರು ಪರಾಕ್ರಮದಿಂದ ಸುಮಾರಾಗಿ ಆಫ್ರಿ ಕೆಯ ಉತ್ತರ ತೀರವನ್ನೆಲ್ಲ ವ್ಯಾಪಿಸಿ, ಭೂಮಧ್ಯ ಸಮುದ್ರದಲ್ಲಿಯ ಚಾರ್ಸಿಕಾ– ಸಾರ್ಡಿನಿಯಾ ದ್ವೀಪಗಳನ್ನು ಆಕ್ರಮಿಸಿ ಸಿಸಿಲಿಯಮೇಲೆ ದಾಳಿ ಮಾಡಿದರು. ಸಿಸಿಲಿ ಯೆಂದರೆ ರೋಮದ ಮರ್ಮಸ್ಥಾನವೇ ಸರಿ. ರೋಮನರು ಎಚ್ಚತ್ತು ಯುದ್ಧಕ್ಕೆ ಸಿದ್ಧರಾಗಿ ಕಾರ್ಥೆಜಿಯನ್ನರನ್ನು ಹೊಡೆದಟ್ಟಿ ಸಿಸಿಲಿಯನ್ನು ವಶಪಡಿಸಿಕೊಂಡರು. (ಕ್ರಿ. ಪೂ. ೨೪೧). ಕಾರ್ಥೆಜಿಯನ್ನರು ಸೋಲಿನಿಂದ ನಿರಾಶರಾಗದೆ ಮತ್ತೆ



ಯುರೋಪ

ಯುದ್ಧ ಸಿದ್ಧತೆಗೆ ತೊಡಗಿದರು. ಅವರಿಗಾಗ ಹಾನಿಬಾಲ್ ಎಂಬ ಧೀರ ನಾಯಕನೂ ದೊರಕಿದನು. ಜಗತ್ತಿನ ಇತಿಹಾಸದಲ್ಲಿ ಅಲೆಕ್ಝಾಂಡರನ ತರವಾಯ ಅವನೇ ಎರಡನೆಯ ಶ್ರೇಷ್ಠ ಸೇನಾಪತಿಯೆಂದು ಎಣಿಸಲಾಗುತ್ತದೆ. ಉತ್ತರ ಆಫ್ರಿಕೆಯ ದಂಡೆಯಿಂದ ಪಶ್ಚಿಮಕ್ಕೆ ಜಿಬ್ರಾಲ್ಟರಿನ ವರೆಗೆ ಹೋಗಿ, ಅಲ್ಲಿಂದ ಸ್ಪೇನ್, ಮುಂದೆ ಪಿರಿನೀಜ್ ಪರ್ವತವನ್ನು ದಾಟಿ, ಫ್ರಾನ್ಸಿನ ಆಗ್ನೇಯ ದಿಕ್ಕಿನಿಂದ ಆಲ್ಪ್ಸ ಪರ್ವತ ದಾಟಿಗೆ ಕಾಲುಚಾಚಬೇಕೆಂಬ ಮಹತ್ವಾಕಾಂಕ್ಷೆಯನ್ನು ಅವನಿಟ್ಟುಕೊಂಡಿದ್ದನು. ಹಾಗೆ ಆಲ್ಪ್ಸ ಪರ್ವತವನ್ನು ದಾಟಿದ ಮೊದಲನೆಯ ವೀರನು ಹಾನಿಬಾಲನೇ. ಅವನು ರೋಮದ ಸಮೀಪಕ್ಕೆ ಬಂದನು. ಇಲ್ಲಿಯ ವರೆಗೆ ಅವನು ಬಂದನೆಂಬ ಸುದ್ದಿಯ ಮೇಲೆ ರೋಮನರಿಗೆ ನಂಬಿಗೆಯೇ ಆಗಲಿಲ್ಲ. ಅದು ನಿಜವೆಂದಾಗಲು ರೋಮನರು ಗಡಬಡಿಸಿ ಸೈನ್ಯವನ್ನು ಕೂಡಿಸಿ ಹಾನಿಬಾಲನನ್ನು ಎದುರಿಸಿದರು. ಅದರಲ್ಲಿ ಅವರು ಸೋತರು. ಹಾನಿಬಾಲ್ ರೋಮದ ಕೋಟೆಯ ವರೆಗೆ ಬಂದನು. ಕೋಟೆ ಭದ್ರವಾದದ್ದು ನಿಜ. ಆದರೆ ಒದಗಿದ ಸಂಕಟ ಹೆಚ್ಚು ಭಯಂಕರವಾಗಿತ್ತು. ಆಗ ಕ್ವಿಂಟ್ಸ್ ಫೆಬಿಯಸ್ ಎಂಬ ರೋಮನ್ ಸೇನಾಪತಿ ಅತಿ ಚಾತುರ್ಯದಿಂದ ಅದನ್ನು ಎದುರಿಸಿದನು. ಹಾನಿಬಾಲನಿಗೆ ಎದುರು ನಿಂತು ಕಾದದೆ ಅವನ ಸಾಧನ ಸಾಮಗ್ರಿಗಳ ಪೂರೈಕೆ ಪ್ರತಿಬಂಧವನ್ನೊಡ್ಡಿದನು. ಹಾನಿಬಾಲ್ ಸಮರದಲ್ಲಿ ಗೆದ್ದನೇನೋ ನಿಜ; ಆದರೆ ಜನರೆಲ್ಲ ರೋಮನಿಷ್ಠೆಯುಳ್ಳವರಾಗಿದ್ದರು; ಎಲ್ಲಿಯೂ ಒಡಕು ಛಿದ್ರ ಇರಲಿಲ್ಲ. ತಾನು ಎಲ್ಲಿಯೋ ಪರಕೀಯ ಪ್ರದೇಶದಲ್ಲಿ ಬಂದು ಬಿದ್ದಂತೆ ಹಾನಿಬಾಲನಿಗಾಯಿತು. ಈ ಸ್ಥಿತಿಯಲ್ಲಿಯೇ ಹನ್ನೆರಡು ವರುಷ ಕಳೆದನು. ಏಕೆಂದರೆ, ಕೋಟೆಯ ಮೇಲೆ ಹಲ್ಲೆ ಮಾಡುವದಕ್ಕೆ ತಕ್ಕ ಸಾಧನ ಸಾಮಗ್ರಿ ಕಾರ್ಥೆಜಿನಿಂದ ಒದಗಲೇ ಇಲ್ಲ. ಕೊನೆಗೆ ರೋಮನರೇ ಕಾರ್ಥೆಜಿನ ಮೇಲೆ ಪ್ರತಿದಾಳಿ ಮಾಡಲು ನಿರ್ಧರಿಸಿದರು; ಸಿಪಿಓ ಎಂಬ ಸೇನಾಪತಿ ಅತ್ತ ನಾಗಿದನು. ಆ ದಾಳಿಯ ಪರಿಣಾಮವಾಗಿ ಹಾನಿಬಾಲನು ರೋಮದ ಮುತ್ತಿಗೆಯನ್ನು ಕಿತ್ತಿಕೊಂಡು ಹೋಗಬೇಕಾಯಿತು. ರೋಮನರು ಕಾರ್ಥೆಜರನ್ನು ಗೆದ್ದು ಆ ಜನರನ್ನು ಕೈಯೆತ್ತದಂತೆ ಮಾಡಿದರು. ಮುಂದೆ ಕಾರ್ಥೆಜಿಯನ್ನರು ವ್ಯಾಪಾರದಲ್ಲಿ ತೊಡಗಿ ಅಭಿವೃದ್ಧಿ ಹೊಂದಿದರು. ಸ್ವಲ್ಪ ಕಾಲದಲ್ಲಿಯೇ ಕಾರ್ಥೆಜ್ ವೈಭವಸಂಪನ್ನವಾಯಿತು. ಈ ಉತ್ಕರ್ಷವನ್ನು ರೋಮ್ ಸೈರಿಸಲಿಲ್ಲ. ಏನೋ ನೆವ ಹುಡುಕಿ ರೋಮನರು ಕಾರ್ಥೆಜಿನ ಮೇಲೆ ದಾಳಿ ಮಾಡಿದರು. ಕಾರ್ಥೆಜ ರಾಜ್ಯವನ್ನು ಪೂರ್ಣ ಹಾಳು ಮಾಡಿ ಆ ವೈಭವಸಂಪನ್ನ ನಗರದ ಮೇಲೆ ರಂಟೆ ಹೊಡೆಸಿಬಿಟ್ಟರು. ಒಂದು ಕಾಲದಲ್ಲಿ ಗುಣವಂತರದಾಗಿದ್ದ ರೋಮ ಗಣರಾಜ್ಯವು ದುರ್ದೈವದಿಂದ ಸೊಕ್ಕಿ ವಿಜಯೋನ್ಮಾದದಿಂದ ಪ್ರತಿಪಕ್ಷವನ್ನು ನಾಶಮಾಡಿತು.

**ರೋಮದಲ್ಲಿಯ ಅವ್ಯವಸ್ಥೆ :** ಒಂದರ್ಥದಿಂದ ರೋಮದ ಅವನತಿ

ಇಲ್ಲಿಯೇ ಆರಂಭವಾಯಿತು. ವೈಭವಶಾಲಿ ರೋಮಕ್ಕೆ ಜಗತ್ತಿನಲ್ಲಿ ಯಾವ ಎದು ರಾಳಿಯೂ ಉಳಿಯಲಿಲ್ಲ; ಆದರೆ ಇಷ್ಟು ದೊಡ್ಡ ರಾಜ್ಯವನ್ನು ನಡೆಸುವುದಕ್ಕಾಗಿ ಅಲ್ಲಲ್ಲಿ ನಿಯಮಿಸಿದ ಅಧಿಕಾರಿಗಳು ಸುಖಲೋಲುಪರಾಗಿ ಲಂಚಗುಳಿಗಳಾದರು. ಸಿಸಿಲಿಯ ವ್ಹೇರಸ್ ಎಂಬ ಅಧಿಕಾರಿಯ ಅತಿಸಂಪಾದನೆಯಂತೂ ಎಲ್ಲ ಕಡೆಗೂ ಬೊಬ್ಬೆಯೆಬ್ಬಿಸಿತು. ಲೋಕಸಭೆಯಲ್ಲಿ ಅದರ ಚರ್ಚೆಯಾಯಿತು. ವ್ಹೇರಸ್ ಸಭಾಸದರ ಕೈಯನ್ನು ಭಾರಿ ಬೆಚ್ಚಗೆ ಮಾಡಿದ್ದರಿಂದ ಅವನ ಮೇಲಿ ಆರೋಪವು ಸಿದ್ಧವಾಗದೆ ಹೋಯಿತು. ಅವನ ಮೇಲಿ ಧೈರ್ಯದಿಂದ ಪ್ರಕಟವಾಗಿ ದೋಷಾ ರೋಪ ಮಾಡಿದ ಸಿಸಿರೋವಿನ ವಕ್ತೃತ್ವವು ಲಂಚಬಡಕ ಲೋಕಸಭೆಯ ಮುಂದೆ ಬೋರ್ಗಲ್ಲಮೇಲಿನ ಮಳೆಯಾಯಿತು. ಹೀಗೆಯೆ ದಿನಗಳು ಸಾಗಿದ್ದವು. ಇದರಲ್ಲಿ ಸುಧಾರಣೆಯಾಗಬೇಕೆಂದು ಬಹಳ ಜನರಿಗೆ ಎನಿಸುತ್ತಿತ್ತು; ಆದರೆ ಯಾರಾದರೂ ಸುಧಾರಣೆ ಮಾಡಹೋದರೆ, ಸ್ವಾರ್ಥಲೋಲುಪರು ಅವರನ್ನು ಒಳಗೊಳಗೇ ಹಿಸುಕಿ ಹಾಕುತ್ತಿದ್ದರು. ಟಾಯಬೇರಿಯಸ್ ಗ್ರಕಸ್ ಮತ್ತು ಕಾಯಸ್‌ಗ್ರಾಕಸ್ ಎಂಬ ಸೋದರರು ಸುಧಾರಣೆ ಮಾಡುತ್ತಮಾಡುತ್ತ ತಮ್ಮ ಜೀವ ಕೊಟ್ಟರು: ಸುಧಾರಣೆಯ ಆಶೆ ನಷ್ಟವಾಯಿತು ರೋಮದ ಅಧಃಪತನವಾಗುತ್ತಲೇ ಇತ್ತು. ಲಷ್ಕರೀ ದೃಷ್ಟಿಯಿಂದ ಬಲಿಷ್ಠನಾದವನ ಕೈಯಲ್ಲಿ ರೋಮದ ಸತ್ತೆ ಕೇಂದ್ರಿತವಾಗಿರುತ್ತಿತ್ತು. ಪೊಂಪೆ ಎಂಬವನು ರೋಮ ರಾಜ್ಯವು ಸರಿಯಾಗಿ ನಡೆಯುವುದಕ್ಕಾಗಿ ಜೂಲಿಯಸ್ ಸೀಝರ್ ಮತ್ತು ಕ್ರಾಂಟ್ಸ್ ಎಂಬಿಬ್ಬರನ್ನು ಸಹಾಯಕ್ಕೆ ತೆಗೆದುಕೊಂಡನು. ಸೀಝರ್ ಯುದ್ಧಕ್ಕೆ ಹೋದ ಸಮಯದಲ್ಲಿ ಪೊಂಪೆ ಮತ್ತು ಕ್ರಾಂಟ್ಸ್ ಆಡಳಿತ ವನ್ನು ನೋಡಿಕೊಳ್ಳುತ್ತಿದ್ದರು. ಜೂಲಿಯಸ್ ಸೀಝರ್ ಮಹಾ ಪರಾಕ್ರಮಿ; ಯುರೋಪಖಂಡವನ್ನು ಆಕ್ರಮಿಸಿ, ಸ್ಕಾಟ್ಲಂಡಿನ ವರೆಗೂ ರೋಮದ ಪ್ರಭುತ್ವವನ್ನು ಸ್ಥಾಪಿಸಿದನು. ಈ ವಿಜಯದಿಂದ ರೋಮನ್ ಜನತೆ ಹರ್ಷಭರಿತವಾಯಿತು. ಆದರೆ ಪೊಂಪೆಗೆ ಹೊಟ್ಟೆಕಿಚ್ಚಾಯಿತು. ಒಮ್ಮೆ ದಂಡೆಯಾತ್ರೆಯಿಂದ ಗೆದ್ದು ಮರಳುತ್ತಿದ್ದಾಗ ಸೀಝರ್‌ನನ್ನು ರೋಮಕ್ಕೆ ಬರಮಾಡಿಕೊಂಡನು. ರೋಮಕ್ಕೆ ಯಾರೂ ಸಸೈನ್ಯವಾಗಿ ಬರಬಾರದೆಂದು ಬಹುದಿನದ ಸಂಕೇತವಿತ್ತು. ಆದರೆ ಸೀಝರನು ಹೊತ್ತುವೇಳೆ ಅರಿತು ಆ ಸಂಕೇತವನ್ನು ಮುರಿದು ಸಸೈನ್ಯವಾಗಿಯೇ ರೋಮಕ್ಕೆ ಬಂದು ತಳವೂರಿದನು. ಮುಂದೆ ಪೊಂಪೆ ದಂಡಯಾತ್ರೆಗೆ ಹೋದಾಗ ಅಲ್ಲಿಯೇ ಅವನ ಕೊಲೆಯಾಯಿತು. ಕ್ರಾಶಸ್ ಅಷ್ಟು ಪ್ರಭಾವಿಯಲ್ಲದ್ದರಿಂದ ರೋಮದ ಪೂರ್ಣ ಅಧಿಕಾರ ಸೀಝರನ ಕೈಸೇರಿತು.

**ಜೂಲಿಯಸ್ ಸೀಝರ್ :** ರಾಜ್ಯದಲ್ಲಿ ಅನೇಕ ಸುಧಾರಣೆಗಳು ಇವನಿಂದ ಆದವು. ರಾಜ್ಯದಲ್ಲಿ ಮಾರ್ಗಗಳಾದವು ಎಲ್ಲ ನಾಗರಿಕರಿಗೆ ಸಮಾನ ಹಕ್ಕುಗಳು ದೊರೆತವು, ಕಾಲಗಣನೆಯಲ್ಲಿ ಸುಧಾರಣೆಯಾಯಿತು. ರೋಮದಲ್ಲಿ ಉಂಡಾಡಿಗಳು

ಹೆಚ್ಚಿದ್ದರು; ಸೀಝರ್ ಅವರ ಮೇಲೆ ನಿಯಂತ್ರಣ ಹಾಕಿದನು. ಹೀಗೆ ರೋಮದ ಉನ್ನತಿಗಾಗಿ ಅವನು ಹಗಲಿರುಳೂ ದುಡಿಯತೊಡಗಿದನು. ಸೀಝರ್ ಹೆಸರಿಗೆ ಚಕ್ರವರ್ತಿಯಾಗಿರಲಿಲ್ಲ. ಉಳಿದೆಲ್ಲ ಅಧಿಕಾರಗಳೂ ಅವನ ಕೈಯಲ್ಲಿದ್ದವು. ಸೀಝರನ ಪರಾಕ್ರಮದಿಂದ ದಂಗುಬಡೆದ ಲೋಕಸಭೆ ಅವನು ಮಾಡಿದ್ದಕ್ಕೆ ಹೂ ಎನ್ನುವ ಧೋರಣ ತಳೆಯಿತು. ಆದರೆ ಅವನ ಪ್ರಭಾವ ಮತ್ತು ಜನಪ್ರಿಯತೆಗೆ ಮತ್ಸರಪಡುತ್ತಿದ್ದ ಕ್ಯಾಶಿಯಸ್ ಎಂಬವನು ಸೀಝರನ ಮಿತ್ರನಾದ ಬ್ರೂಟಸ್ಸನ ಮನವನ್ನು ತನ್ನ ಕಡೆ ತಿರುಗಿಸಿಕೊಂಡು ಅವನಿಂದ ನಡುಹಗಲಿನಲ್ಲಿ ನಡುಬೀದಿಯಲ್ಲಿಯೇ ಸೀಝರನ ಕೊಲೆ ಮಾಡಿಸಿದನು.

**ಪ್ರಜಾರಾಜ್ಯದ ಅಂತ** : ಹೀಗೆ ಸೀಝರ್ ಪೋದರೂ ಸೀಝರ್‌ಶಾಹಿ (ಸರ್ವಾಧಿಕಾರಿತ್ವ) ಹೋಗಲಿಲ್ಲ. ಸೀಝರನ ಪ್ರತಿಪಕ್ಷದವರು ಪುನಃ ಮೂರು ಜನರ ಸರ್ವಾಧಿಕಾರೀ ಕೂಟ ಕಟ್ಟಿಕೊಂಡು ರಾಜ್ಯವಾಳತೊಡಗಿದರು. ಎಂಟನಿ, ಲೆಪಿಡಸ್ ಮತ್ತು ಆಕ್ಟೇವಿಯಸ್ ಸೀಝರ್ ಈ ಮೂವರು ಅದರಲ್ಲಿದ್ದರು. ಎಂಟನಿ ಈಜಿಪ್ತದಲ್ಲಿ ರೋಮದ ಪ್ರತಿನಿಧಿಯಾಗಿ ಆಳುತ್ತಿದ್ದಾಗ ಕ್ಲಿಓಪಾತ್ರಾ ಎಂಬೊಬ್ಬ ಸುಂದರ ರಾಣಿಯ ಮೋಹದಲ್ಲಿ ಸಿಲುಕಿದನು; ವಿಲಾಸಮಗ್ನನಾಗಿ ರಾಜ್ಯವನ್ನು ದುರ್ಲಕ್ಷಿಸಿದನು. ಇದನ್ನು ಕೇಳಿ ಆಕ್ಟೇವ್ಹಿಯಸ್‌ನು ಅಲ್ಲಿಗೆ ಧಾವಿಸಿ ಹೋಗಿ ರಾಜ್ಯವನ್ನು ಉಳಿಸಿದನು. ಮುಂದೆ ಎಂಟನಿ ಮತ್ತು ಕ್ಲಿಯೋಪಾತ್ರಾ ಇಬ್ಬರೂ ದುಃಖಕ್ಕೀಡಾಗಿ ಆತ್ಮಹತ್ಯೆ ಮಾಡಿಕೊಂಡರು. ಈಜಿಪ್ತದ ರಾಜ್ಯವ್ಯವಸ್ಥೆಯನ್ನು ಸರಿಪಡಿಸಿ ಆಕ್ಟೇವಿಯಸ್ ರೋಮಕ್ಕೆ ಮರಳಿದನು. ಆಗ ಅವನು ಸುಮಾರಾಗಿ ಸರ್ವಸತ್ತಾಧೀಶನೇ ಆದನು. ಅಳಿದುಳಿದ ಪ್ರಜಾಪ್ರಭುತ್ವದ ಅಂಶಗಳನ್ನೂ ಅವನು ಬದಿಗೊತ್ತಿ ರೋಮದ ಬಾದಶಹನಾಗಿ 'ಆಗಸ್ಟಸ್' ಎಂಬ ಪದವಿಯನ್ನು ಧರಿಸಿದನು. ಹೀಗೆ ಗಣರಾಜ್ಯವು ಸರ್ವಾಧಿಕಾರಿ ಸಾಮ್ರಾಜ್ಯವಾಗಿ ಮಾರ್ಪಟ್ಟಿತು. ಆಗಸ್ಟಸ್ ಸೀಝರನ ಆಳಿಕೆಯೆಂದರೆ ರೋಮನ್ ಸಾಮ್ರಾಜ್ಯದ ಸುವರ್ಣಕಾಲವಾಯಿತು.

ಅವನು ಇಡೀ ಸಾಮ್ರಾಜ್ಯದಲ್ಲಿ ಮಾರ್ಗಗಳನ್ನು ರಚಿಸಿದನು. ಇಡೀ ಸಾಮ್ರಾಜ್ಯಕ್ಕೆ ಒಂದೇ ಕಾಯದೆಯನ್ನು ಅನ್ವಯಿಸಿದನು; ಕಾಡು ಜನರನ್ನು ಸುಶಿಕ್ಷಿತರನ್ನಾಗಿ ಮಾಡಿದನು; ವಂಶಭೇದ, ಧರ್ಮಭೇದಗಳನ್ನು ತೊಡೆದುಹಾಕಿ ಎಲ್ಲ ಪ್ರಜೆಗಳಿಗೆ ಸಮಾನ ಹಕ್ಕುಗಳನ್ನು ಕೊಟ್ಟನು; ಗ್ರೀಕ ಸಂಸ್ಕೃತಿಯನ್ನು ಪೋಷಿಸಿ ಗ್ರೀಕ ತತ್ತ್ವಜ್ಞಾನ ಮತ್ತು ಶಾಸ್ತ್ರಗಳನ್ನು ಪುನರುಜ್ಜೀವನಗೊಳಿಸಿದನು. ಪ್ರಜಾಸತ್ತೆ ನಷ್ಟವಾದದ್ದು ನಿಜವಾದರೂ ಈ ಕಾಲದಲ್ಲಿ ರೋಮದ ಇತರ ಅನೇಕ ಅಂಗಗಳು ಪ್ರಗತಿ ಹೊಂದಿದವು; ಸ್ವರಾಜ್ಯ ಹೋದರೂ ಸುರಾಜ್ಯ ಬಂದಿತು.

**ಸಾಮ್ರಾಜ್ಯದ ಕಾಲ:** ಆಗಸ್ಟಸ್ ಕ್ರಿ. ವ. ೧೪ ರಲ್ಲಿ ಸತ್ತನು. ಅಲ್ಲಿಂದ ಕ್ರಿ. ವ. ೪೭೬ರ ವರೆಗಿನ ಕಾಲವು ರೋಮದ ಸಾಮ್ರಾಜ್ಯ ಕಾಲವು. ಈ ಸುದೀರ್ಘ ಕಾಲದಲ್ಲಿ ಎಲ್ಲ ಚಕ್ರವರ್ತಿಗಳೂ ಕರ್ತೃತ್ವಶಾಲಿಗಳಾಗಿರಲಿಲ್ಲ. ಕ್ರಿ. ವ. ೫೪ ರಿಂದ ೬೮ರ ವರೆಗೆ ಆಗಿಹೋದ ನೀರೊ ರಾಜನು ವಿಲಾಸಿಯಾಗಿದ್ದನು. ಮಾರ್ಕಸ್ ಅರೆಲಿಯಸ್ (ಕ್ರಿ. ವ. ೧೬೧–೧೮೦), ಕಾನ್‌ಸ್ಟಂಟಾಯಿನ್ (ಕ್ರಿ. ವ. ೩೦೪–೩೩೭)



ಆಗಸ್ಟಸ್

ಇವರಿಬ್ಬರು ಹೇಳಿಕೊಳ್ಳುವಂತಹ ಸಮ್ರಾಟರಾಗಿದ್ದರು. ಮಾರ್ಕಸ್ ಅರೆಲಿಯಸ ನಂತೂ ಸಂನ್ಯಾಸವೃತ್ತಿಯ ಮೂರ್ತಿಯೆ ಆಗಿದ್ದನು. ಅವನು ಬರೆದ ಚಿಂತನ ಮಾಲಿಕೆ (Meditation) ಎಂಬ ಗ್ರಂಥವು ತತ್ತ್ವಜ್ಞಾನ ಪ್ರಧಾನವಾಗಿದೆ. ಲ್ಯಾಟಿನ್ ವಾಙ್ಮಯದಲ್ಲಿ ಅದು ಮಹತ್ವದ ಸ್ಥಾನ ಪಡೆದಿದೆ. ಕಾನ್‌ಸ್ಟಂಟಾಯಿನ್ ರಾಜನು ಬಾಯ್‌ಝಂಟಿಯಮ್ ಎಂಬಲ್ಲಿ ಹೊಸ ರಾಜಧಾನಿಯನ್ನು ಕಟ್ಟಿದನು. ಆ ನಗರಕ್ಕೆ ಅವನ ಹೆಸರಿನಿಂದ ಮುಂದೆ ಕಾನ್‌ಸ್ಟಂಟಿನೋಪಲ್ ಎಂಬ ಹೆಸರಾಯಿತು. ಕಾನ್‌ಸ್ಟಂಟಾಯಿನನ ಮುಖ್ಯ ಕಾರ್ಯವೆಂದರೆ, ಆಗ ಎಲ್ಲ ಕಡೆಗಳಲ್ಲಿ ಕ್ರೈಸ್ತಧರ್ಮವು ಜನಪ್ರಿಯವಾಗಿರುವುದನ್ನು ಕಂಡು ತಾನೂ ಆ ಧರ್ಮವನ್ನು ಅಂಗೀಕರಿಸಿದುದು; ಆ ಧರ್ಮದ ಪ್ರಚಾರಕನೂ ಆದುದು. ಇವನ ತರುವಾಯದ ರೋಮ ಚಕ್ರವರ್ತಿಗಳ ನಾಮಾವಳಿಯನ್ನು ತಿಳಿಯಬೇಕಾದ ಅಗತ್ಯವಿಲ್ಲ. ಕ್ರಿ. ವ. ನಾಲ್ಕನೆಯ ಶತಕದ ಕೊನೆಯಲ್ಲಿ ಮತ್ತು ಐದನೆಯ ಶತಕದ ಮೊದಲಲ್ಲಿ ರೋಮದ ಮೇಲೆ ಕಾಡುಜನಗಳ ದಾಳಿಗಳು ಪ್ರಾರಂಭವಾದವು. ಅವರಲ್ಲಿ ಅಲರಿಕ್ ಎಂಬವನು ವ್ಹಿಸಿಗಾಥ ಜನಾಂಗದ ನಾಯಕನಾಗಿದ್ದನು; ಅಟಿಲಾ ಎಂಬವನು ಹೂಣರ ನಾಯಕನು. ಅಲರಿಕನ ದಾಳಿಯಿಂದ ರೋಮನ್ ಸಾಮ್ರಾಜ್ಯವು ಹಣ್ಣಿಗೆ ಬಂದಿತು.

ಮುಂದೆ ಅಟಿಲಾ ರೋಮನ್ ಸಾಮ್ರಾಜ್ಯದಲ್ಲಿ ಬಹಳ ಹುಯ್ಲೆಬ್ಬಿಸಿದನು. ಬಳಿಕ ಕ್ರಿ. ಶ. ೪೫೫ ರಲ್ಲಿ ರೋಮಕ್ಕೆ ವಂಡಾಲ್ ಜನರ ದಾಳಿ ಬಂದಿತು. ಸತತವಾಗಿ ಹದಿನಾಲ್ಕು ದಿವಸ ಅವರು ನಗರವನ್ನು ಸುಲಿದು ಸೂರೆಗೊಂಡರು. ಈ ಕಾಡು ಜನರ ದಾಳಿಯಿಂದ ರೋಮನ್ ಸಾಮ್ರಾಜ್ಯವು ಅಳಿಯಿತು. ಮತ್ತು ಯುರೋಪಿನಲ್ಲಿ ಗೋಥ್, ವೆಂಡಾಲ್ ಮತ್ತು ಫ್ರ್ಯಾಂಕ್ಸ್ ಜನರ ತಂಡಗಳು ಪ್ರಾದೇಶಿಕ ರಾಜ್ಯಗಳನ್ನು ಸ್ಥಾಪಿಸಿದವು; ಅವೇ ಮುಂದೆ ಇಂದಿನ ಯುರೋಪಿಯನ್ ರಾಷ್ಟ್ರಗಳಾಗಿ ಮಾರ್ಪಟ್ಟವು.

**ವಿನಾಶದ ಕಾರಣಗಳು :** ಸಾವಿರ ವರುಷ ಅನೇಕ ಸಂಕಟಗಳನ್ನು ಎದುರಿಸಿ ತಾಳಿಬಾಳಿದ ರೋಮನ್ ಸಾಮ್ರಾಜ್ಯದ ಅಳಿವಿನಿಂದ ಜನರ ಮನಸಿಗೆ ಆಘಾತವಾಯಿತು. ಶಾಶ್ವತವೆಂದು ಎನಿಸುತ್ತಿದ್ದದ್ದು ಅಶಾಶ್ವತವೆಂದು ಸಿದ್ಧವಾಯಿತು, ಈ ಮನಸ್ಥಿತಿಯಲ್ಲಿ ಯುರೋಪಿನಲ್ಲಿ ಮಧ್ಯಯುಗೀನ ಧರ್ಮವಿಚಾರದ ಉದಯವಾಯಿತು. ರೋಮ ಸಾಮ್ರಾಜ್ಯದ ವಿನಾಶಕ್ಕೆ ಕಾಡುಜನರ ದಾಳಿಗಳು ತಾತ್ಕಾಲಿಕ ಕಾರಣವೆಂಬುದರಲ್ಲಿ ಸಂದೇಹವಿಲ್ಲ. ಜಗತ್ತಿನ ಇತಿಹಾಸದಲ್ಲಿ ಸುಧಾರಿಸಿದ ರಾಷ್ಟ್ರಗಳನ್ನು ಕಾಡುಜನರು ನಷ್ಟಗೊಳಿಸಿದ ಅನೇಕ ಉದಾಹರಣೆಗಳುಂಟು; ರೋಮವೂ ಅದಕ್ಕೆ ಅಪವಾದವಾಗಿಲ್ಲ. ಆದರೆ, ರೋಮದ ಪತನಕ್ಕೆ ಮುಖ್ಯ ಕಾರಣ—ಸಾಮಾನ್ಯಜನತೆ ತೆರಿಗೆಗಳ ಭಾರದಿಂದ ನಿರ್ವಿಣ್ಣವಾಗಿ ಗುಲಾಮರಾದದ್ದು.

**ರೋಮದ ಸಾಂಸ್ಕೃತಿಕ ನಿಧಿ :** ಸಾಮ್ರಾಜ್ಯವು ಅಳಿದರೂ ರೋಮದಲ್ಲಿ ಮಾನವತೆ ಪಡೆದ ವಿಕಾಸವು ಮುಂದೆ ಮಾನವೀಯ ಪ್ರಗತಿಗೆ ಪ್ರಯೋಜನಕಾರಿಯಾಯಿತು. ಕಾಯದೆಯನ್ನಾಧರಿಸಿ ರಾಜ್ಯ ಕಟ್ಟಿದ ಮಾದರಿ ಯುರೋಪಿಯನ್ ಜಗತ್ತಿಗೆ ರೋಮವು ಸಲ್ಲಿಸಿದ ಮಹತ್ವದ ಕಾಣಿಕೆಯಾಗಿದೆ. ರಾಜ್ಯವು ವ್ಯಕ್ತಿಯ ಲಹರಿಯನ್ನವಲಂಬಿಸದೆ ಅದಕ್ಕೆ ಕಾಯದೆಯ ಆಧಾರವಿರಬೇಕು, ಆ ಕಾಯದೆ ಎಲ್ಲರಿಗೂ ತಿಳಿಯಬೇಕು, ಮತ್ತು ಕಾಯದೆಯ ಕಾರ್ಯಾಚರಣೆ ವ್ಯಕ್ತಿ ನಿರಪೇಕ್ಷವಾಗಿ ಆಗಬೇಕು ಎಂಬ ಮಾತನ್ನು ರೋಮವು ಬಹುವಾಗಿ ರೂಢಿಗೆ ತಂದಿತ್ತು.*

ಕಾಯದೆಯ ಆಧಾರದ ಮೇಲೆ ನಿಂತ ರೋಮ ಸಾಮ್ರಾಜ್ಯವು ಒಂದು ಕಾಲದಲ್ಲಿ ಅತಿ ವಿಸ್ತಾರ ಹೊಂದಿತ್ತು; ಆ ಕಾಲದ ಕೆಲಜನರಿಗೆ ವಿಶ್ವರಾಜ್ಯದ ಕಲ್ಪನೆ ಕೂಡ ಹೊಳೆದಿತ್ತು. ವಿಶ್ವರಾಜ್ಯವು ಇಂದು ೨೦ನೆಯ ಶತಕದಲ್ಲಿ ಕೂಡ ಕನಸಾಗಿಯೇ ಇದೆ. ಎಂದಾದರೂ ಈ ಕನಸು ಸತ್ಯವಾದರೆ ಯುದ್ಧಗಳು ನಿಲ್ಲುವುದು ಖಂಡಿತವಾದುದರಿಂದ, ರೋಮವು ಕೊಟ್ಟ ವಿಶ್ವರಾಜ್ಯದ ಸಂದೇಶವು ಮಾನವನಿಗೆ ಬಹುಮೂಲ್ಯವಾದುದೆಂದು ಎನಿಸುತ್ತದೆ. ವಿಶ್ವರಾಜ್ಯದ ಕಲ್ಪನೆಯಂತೆಯೇ,

---

* ಅರ್ಥಾತ್ ಈ ಕಾಯದೆ ಗುಲಾಮರಿಗೆ ಅನ್ವಯಿಸುತ್ತಿದ್ದಿಲ್ಲ.

ರೋಮನ್ ಸಾಮ್ರಾಜ್ಯದ ಉತ್ತರ ಕಾಲದಲ್ಲಿ ಕ್ರೈಸ್ತ ಧರ್ಮವು ಅಖಿಲ ಯುರೋಪಿನ ಧರ್ಮವಾಯಿತು; ಅದರಲ್ಲಿ ವಿಶ್ವಧರ್ಮದ ಕಲ್ಪನೆ ತಲೆದೋರಿತು. ಹೀಗೆ ಮನುಷ್ಯನ ಕಲ್ಪನಾಶಕ್ತಿಯನ್ನು ವ್ಯಾಪಕಗೊಳಿಸಿ, ಅದರ ಮುಂದೆ ದೊಡ್ಡ ದೊಡ್ಡ ಆದರ್ಶಗಳನ್ನು ರೋಮವು ಇರಿಸಿತು. ನಾವಿಂದು ಸಾರ್ವಜನಿಕ ಜೀವನವೆಂದು




ರೋಮದ ಸಾಮ್ರಾಜ್ಯ

ಕರೆಯುವ ಜೀವನವು ರೋಮದಲ್ಲಿಯೇ ಆರಂಭವಾಯಿತು. ಸಾರ್ವಜನಿಕ ಸ್ಥಳದಲ್ಲಿ (ಫೋರಮ್‌ನಲ್ಲಿ) ಒಟ್ಟುಗೂಡುವುದು, ಅಲ್ಲಿ ಮಹತ್ವದ ಸಾರ್ವಜನಿಕ ಪ್ರಶ್ನೆಗಳನ್ನು ಚರ್ಚಿಸುವುದು, ರೋಮದ ಸ್ವಾತಂತ್ರ್ಯವನ್ನು ಪರಂಪರೆಯನ್ನು ರಕ್ಷಿಸುವದು, ಅವುಗಳಿಗೆ ವಿಘಾತಕರಾದವರನ್ನು ಒಂದನೆಯ ನಂಬರ ಸಾರ್ವಜನಿಕ ಶತ್ರುವೆಂದು ಪ್ರಕಟವಾಗಿ ಆರೋಪಿಸಿ ಅವನನ್ನು ನಿಃಪಾತಗೊಳಿಸುವುದು—ಇವೆಲ್ಲವು ರೋಮದಲ್ಲಿಯೇ ಘಟಿಸಿದವು. ರಾಜಕೀಯ ವಿಷಯಗಳ ಚರ್ಚೆಯ ಮುಕ್ತ ಮತ್ತು ವಿನೋದೀ ವಾತಾವರಣವು ಮೊದಲು ರೋಮದಲ್ಲಿಯೇ ನಿರ್ಮಾಣವಾಯಿತು. ರೋಮದಲ್ಲಿ ದಬ್ಬಾಳಿಕೆಯ ಸಮ್ರಾಟರು ಆಗಿರಬಹುದು, ಕೆಲವು ಸರದಾರರು ಸ್ವಾರ್ಥಾಂಧರಾಗಿ ನಡೆದಿರಬಹುದು, ಕಾಡುಜನರು ಆ ಸಾಮ್ರಾಜ್ಯವನ್ನು ಹಾಳು ಮಾಡಿರಬಹುದು; ಆದರೆ ವಿಶ್ವರಾಜ್ಯ, ವಿಶ್ವಧರ್ಮ, ಸಾರ್ವಜನಿಕ ಜೀವನ ಮತ್ತು ಸಾಮಾಜಿಕ ಸ್ಥೈರ್ಯಕ್ಕೆ ಕಾಯಿದೆಯ ಮಹತ್ವ ಇವುಗಳು ಮಾನವತೆಗೆ ರೋಮವಿತ್ತ ಬೆಲೆಯುಳ್ಳ ಕಾಣಿಕೆಗಳು; ಮತ್ತು ಇವು ಅಮರವಾಗಿವೆ.

**ರೋಮದ ಸಾಂಸ್ಕೃತಿಕ ಜೀವನ:** ರೋಮನ್ ಜನರಲ್ಲಿ ಉಚ್ಚವರ್ಗೀಯರ ಜೀವನಕ್ರಮವು ಅಚ್ಚುಕಟ್ಟಿನದೂ ವಿಲಾಸದ್ದೂ ಆಗಿತ್ತು. ಇವರು ಉದ್ದನೆಯ ಅಂಗಿ (ಝುಗಾ) ತೊಡುತ್ತಿದ್ದರು. ಮುಂಜಾನೆ ತಮ್ಮ ಮನೆಗೆ ಬಂದ ಜನರನ್ನು ಭೆಟ್ಟಿಯಾಗುತ್ತಿದ್ದರು. ಬಳಿಕ ಫೋರಂಗೆ (ಸಾರ್ವಜನಿಕ ಚಾವಡಿ) ಹೋಗಿ ರಾಜ್ಯದಲ್ಲಿಯ ಘಟನೆ–ಸಂಗತಿಗಳನ್ನು ವಿಚಾರಿಸಿಕೊಳ್ಳುತ್ತಿದ್ದರು. ಹತ್ತುಗಂಟೆಯ ಸುಮಾರಿಗೆ ಕಚೇರಿಗೆ ಹೋಗುತ್ತಿದ್ದರು. ಸುಮಾರಿಗೆ ನಾಲ್ಕು ಹೊಡೆಯುವ ವರೆಗೆ ಅಲ್ಲಿ ಕೆಲಸವಾಗುತ್ತಿತ್ತು. ಬಳಿಕ ಸ್ನಾನಮಾಡಿ ವಿಶ್ರಾಂತಿ. ಸಂಜೆಯ ಮುಂದೆ ಮನರಂಜನೆಗಾಗಿ ನಾಟಕವನ್ನೋ ಮೇಲಾಟವನ್ನೋ ನೋಡಲು ಹೋಗುತ್ತಿದ್ದರು. ರಾತ್ರಿ ಕ್ಲಬ್ಬಿನಲ್ಲಿ ಊಟ ಉಪಚಾರ ತೀರಿಸಿಕೊಂಡು ಮನೆಗೆ ಮರಳುತ್ತಿದ್ದರು. ರೋಮನ್ ಜನರಲ್ಲಿ ಗ್ಲೆಡಿಏಟರ್ಸ್ ಎಂಬ ಆಟವು ಬಹಳ ಪ್ರಸಿದ್ಧವಾಗಿತ್ತು ಇಬ್ಬರು ಶಸ್ತ್ರಧಾರಿಗಳು ಕಣದಲ್ಲಿ ಆಡುವ ದ್ವಂದ್ವಯುದ್ಧವದು. ಅದರಲ್ಲಿ ಮಲ್ಲರಿಗೆ ಗಾಯಗಳಾಗುತ್ತಿದ್ದವು; ಆದರೂ ನೋಡುವವರು ಅದನ್ನು ಗಣನೆಗೆ ತಾರದೆ ಮತ್ತೂ ಆಡಲು ಹಚ್ಚುತ್ತಿದ್ದರು. 'ಬೆಕ್ಕಿಗೆ ಆಟ, ಇಲಿಗೆ ಪ್ರಾಣಸಂಕಟ' ಎಂದು ಆಟಗಾರರು ಮನದಲ್ಲಿ ಎಂದುಕೊಳ್ಳುತ್ತಿದ್ದರು; ಆದರೆ ಹೊಟ್ಟೆಪಾಡಿಗಾಗಿ ಆಡಲೇ ಬೇಕಾಗುತ್ತಿತ್ತು. ಸಿಸಿರೊವಿನಂತಹ ಉಪನ್ಯಾಸಕರು, ಹೋರೆಸ್ ಮತ್ತು ವ್ಹರ್ಜಿಲರಂತಹ ಕವಿಗಳು, ಲಿವಿವಟಾಸಿಸ್‌ನಂತಹ ಇತಿಹಾಸಕಾರರು ರೋಮನರಲ್ಲಿ ಉದಿಸಿದರು. ರೋಮದ ಲ್ಯಾಟಿನ್ ಭಾಷೆ ಸಂಸ್ಕೃತದಂತೆ ಸಮೃದ್ಧವಾಯಿತು. ಆದರೆ ರೋಮದಲ್ಲಿ ಶಾಸ್ತ್ರಜ್ಞರು ಮಾತ್ರ ಹೆಚ್ಚಾಗಿ ಹುಟ್ಟಲಿಲ್ಲ. ಬಹುವಿಧ ವಿದ್ಯೋಪಾಸನೆಯಲ್ಲಿ ಅದು ಗ್ರೀಸಕ್ಕೆ ಸರಿಯಾಗಲಾರದು. ಅವರು ಕಷ್ಟದಿಂದ ನಿರ್ವಿಣ್ಣರಾದರು. ಇಂತಹ ಜನರಲ್ಲಿ ಯೇಸುಕ್ರಿಸ್ತನ ದೇವನು ರಾಜ್ಯದ ಆಶಾದಾಯಕ ಸಂದೇಶವನ್ನು ತಂದನು. ಅದರಿಂದ ಜನರ ಅಂತಃಕರಣಗಳು ಶಾಂತವಾದವು; ಅವರಲ್ಲಿ ಆಶೆ ಅಂಕುರಿಸಿತು. ಸಮಾನ ಮನೋವೃತ್ತಿಯ ಒಕ್ಕಟ್ಟು ಉಂಟಾಯಿತು. ಕಷ್ಟ ಸಹಿಸುವ ಮತ್ತು ಹೊತ್ತು ಬಂದರೆ ಅದಕ್ಕೆ ಪ್ರತೀಕಾರ ಮಾಡುವ ಧೈರ್ಯ ಅವರಿಗೆ ಬಂದಿತು. ರೋಮ ಸಾಮ್ರಾಜ್ಯವು ಅಪರಂಪಾರವಾಗಿ ಹಬ್ಬಿತು; ಆದರೆ ಬಹುಜನ ಸಮಾಜಕ್ಕೆ ಅದರ ಬಗ್ಗೆ ಪ್ರೇಮವಿರಲಿಲ್ಲ. ಅಲ್ಲಲ್ಲಿಯ ಸುಭೇದಾರರು ಸ್ವತಂತ್ರರಾಗಲು ನೋಡುತ್ತಿದ್ದರು. ಹೀಗೆ ಸಾಮ್ರಾಜ್ಯದ ಕಟ್ಟುಗಳು ಸಡಿಲಾದಾಗ ಕಾಡುಜನರ ದಾಳಿ ಬಂದು ರೋಮದ ವೈಭವ ನಷ್ಟವಾಯಿತು.

## ಪ್ರಶ್ನೆಗಳು

೧. ಆಂಗ್ಲಭಾಷೆಯಲ್ಲಿಯ ರೋಮ ಸಂಬಂಧದ ನಾಣ್ನುಡಿಗಳನ್ನು ಹೇಳಿರಿ.

೨. ಮಾಹಿತಿ ಕೊಡಿರಿ; ಸೀಝರ ಮತ್ತು ಆಗಸ್ಟಸ್.

೩. ಯುರೋಪಿಯನ್ ಜಗತ್ತಿಗೆ ರೋಮವು ಕೊಟ್ಟ ನಿಧಿಯ ಚರ್ಚೆ ಮಾಡಿರಿ.
೪. ಸ್ವಲ್ಪದರಲ್ಲಿ ಮಾಹಿತಿ ಬರೆಯಿರಿ: ಚಿಂತನಿಕ; ರೋಮದಲ್ಲಿ ಕ್ರಿಸ್ತಿಧರ್ಮ: ಕಾರ್ಥೇಜದ ಜಿಗುಟುತನ.

## ಅಭ್ಯಾಸ ಮತ್ತು ಚಿಂತನ

### ಅಭ್ಯಾಸ:

೧. ಚಾತುರ್ವರ್ಣ್ಯ ಮತ್ತು ಜಾತಿಭೇದಗಳ ಬಗ್ಗೆ ಟಿಪ್ಪಣಿ ಬರೆಯಿರಿ.

೨. ಭಾರತದಲ್ಲಿ ಬೌದ್ಧಧರ್ಮದ ಹ್ರಾಸ ಏಕಾಯಿತೆಂಬ ಬಗ್ಗೆ ವರ್ಗದಲ್ಲಿ ಚರ್ಚಿಸಿರಿ.

೩. ವಿವೇಚಿಸಿರಿ: 'ಗ್ರೀಸದೇಶದಲ್ಲಿ ಪ್ರಜಾಸತ್ತೆ ಬೆಳೆಯಿತು: ಮತ್ತು ಅಲ್ಲಿಯೇ ಅದರ ವಿನಾಶವೂ ಆಯಿತು.

೪. ರೋಮವು ಯಾವ ಗುಣಗಳಿಂದ ವೈಭವಕ್ಕೇರಿತು? ಆ ಕಾಲದಲ್ಲಿ ಭಾರತದಲ್ಲಿ ಯಾವ ರಾಜ್ಯಗಳಿದ್ದವು?

೫. ತುಲನೆಮಾಡಿ ಬರೆಯಿರಿ:

   ೧) ಸ್ಪಾರ್ಟಾ ಸ್ತ್ರೀಯರೂ ರಾಜಪುತ ಸ್ತ್ರೀಯರೂ;

   ೨) ಕಾನ್‌ಫ್ಯೂಸಿಯುಸನೂ, ಬುದ್ಧನೂ.

೬. ಅರ್ಥವನ್ನು ಸ್ಪಷ್ಟೀಕರಿಸಿರಿ:

   ೧) ಗ್ರೀಸದ ಮೂಲಕ ಯುರೋಪಿನಲ್ಲಿ ಮಾನವೀಯ ಸಂಸ್ಕೃತಿ ಉದಯ ಹೊಂದಿತು.

   ೨) ಬೌದ್ಧಧರ್ಮದ ಸಂಘಟನೆಯಲ್ಲಿ 'ಸಂಘ'ದ ರೂಪದಿಂದ ಪ್ರಜಾಸತ್ತೆಯ ಪ್ರವೃತ್ತಿಗೆ ಎಡೆ ಸಿಕ್ಕಿತು.

   ೩) ಸೀಝರ್ ಹೋದರೂ ಸೀಝರನ ಸತ್ತೆ ಹೋಗಲಿಲ್ಲ,

೭. ನೀವು ರೋಮಕ್ಕಾಗಲಿ, ಅಥೆನ್ಸಿಗಾಗಲಿ, ಹೋದಿರೆಂದು ತಿಳಿಯಿರಿ. ಅಲ್ಲಿ ನೀವು ಯಾವ ವಿಷಯಗಳ ಬಗ್ಗೆ ವಿಚಾರಿಸುವಿರಿ? ಏನೇನು ನೋಡುವಿರಿ?

---

**ಚಿಂತನ:**

## ೧. ಕ್ರಿಸ್ತಪೂರ್ವ ಮತ್ತು ಕ್ರಿಸ್ತಾನಂತರ:

ಇತಿಹಾಸದ ಸಂಗತಿಗಳನ್ನು ಹೇಳುವಾಗ ಕ್ರಿಸ್ತವರ್ಷಗಣನೆಯನ್ನು ಉಪಯೋಗಿಸಲಾಗುತ್ತದೆ. ಇಂಗ್ಲೀಷರ ಆಳಿಕೆಯಿಂದ ಈ ಕಾಲಗಣನೆ ನಮ್ಮಲ್ಲಿ ತುಂಬಾ ಬಳಕೆಗೆ ಬಂದಿದೆ. ಅವರ ರಾಜ್ಯ ಹೋದರೂ ಆ ಕಾಲಗಣನೆ ಉಳಿದಿದೆ. ಯೇಸು ಕ್ರಿಸ್ತ ಅಥವಾ ಈಸಾ ಮಸೀಹನು ಕ್ರೈಸ್ತಧರ್ಮದ ಸಂಸ್ಥಾಪಕನು. ಅವನ ಹುಟ್ಟಿನಿಂದ ಮೊದಲನೆಯ ವರ್ಷ ಆರಂಭವಾಯಿತೆಂದು ಎಣಿಸುತ್ತಾರೆ. ಯೇಸುವಿಗಿಂತ ಹಿಂದಿನ ಕಾಲದ ಘಟನೆಗಳ ಕಾಲವನ್ನು ಕ್ರಿಸ್ತಪೂರ್ವ (ಕ್ರಿ. ಪೂ.) ಇಂತಿಷ್ಟನೆಯ ವರುಷ ಅಥವಾ ಶತಕ ಎಂದು ಹೇಳುತ್ತಾರೆ. ಉದಾ: ಅಶೋಕನ ಪಟ್ಟಾಭಿಷೇಕವು ಕ್ರಿ.ಪೂ. ೨೭೩ ರಲ್ಲಾಯಿತು ಎಂದರೆ ಯೇಸುವಿನ ಜನ್ಮಕ್ಕಿಂತ ೨೭೩ ವರುಷಗಳ ಹಿಂದೆ ಈ ಸಂಗತಿ ಜರುಗಿತು ಎಂದರ್ಥ. ಕ್ರಿಸ್ತನ ಜನ್ಮದ ಈಚೆಯ ಕಾಲವನ್ನು ಕ್ರಿಸ್ತವರ್ಷ (ಕ್ರಿ. ವ) ಎಂದು ಹೇಳುತ್ತಾರೆ. ಉದಾ: ಕ್ರಿ. ವ. ೧೨೦ ರಲ್ಲಿ ಕನಿಷ್ಕನು ಪಟ್ಟವೇರಿದನು, ಎಂದರೆ ಕ್ರಿಸ್ತಜನ್ಮದ ತರುವಾಯ ೧೨೦ನೆಯ ವರುಷ ಈ ಸಂಗತಿ ಘಟಿಸಿತು. ಅಶೋಕನ ಪಟ್ಟಾಭಿಷೇಕಕ್ಕೂ ಇದಕ್ಕೂ ಕಾಲಾಂತರ ಎಷ್ಟೆಂಬುದನ್ನು ತಿಳಿಯಲು ಕ್ರಿ. ವ. ೧೨೦ರಲ್ಲಿ ಕ್ರಿ. ಪೂ. ದ ೨೭೩ ವರುಷಗಳನ್ನು ಕೂಡಿಸುವುದು; ಎಂದರೆ ೧೨೦+೨೭೩=೩೯೩ ವರುಷಗಳ ಅಂತರವಾಯಿತು.

ಕ್ರಿಸ್ತಪೂರ್ವದ ಕಾಲಗಣನೆಯಲ್ಲಿ ಕ್ರಿಸ್ತವರ್ಷಾರಂಭದ ಕಡೆಗೆ ಸಾಗಿದಂತೆ ವರ್ಷಸಂಖ್ಯೆ ಕಡಿಮೆಯಾಗುತ್ತ ಹೋಗುವದನ್ನು ಕ್ರಿಸ್ತವರ್ಷಾರಂಭದಿಂದೀಚೆಗೆ ಸಾಗಿದಂತೆ ವರ್ಷಸಂಖ್ಯೆ ಹೆಚ್ಚುತ್ತ ಹೋಗುವುದನ್ನು ಗಮನಿಸಿರಿ. ಉದಾ: ಅಶೋಕನ ಆಳಿಕೆಯ ಕಾಲ ಕ್ರಿ. ಪೂ. ೨೭೩ ರಿಂದ ಕ್ರಿ. ಪೂ. ೨೩೨ ಮತ್ತು ಕನಿಷ್ಕನ ಆಳಿಕೆ ಕ್ರಿ. ವ. ೧೨೦ ರಿಂದ ೧೬೨ರ ವರೆಗೆ.

ಅಲ್ಲದೆ ನಮ್ಮ ದೇಶದಲ್ಲಿ ಕೆಲವೊಮ್ಮೆ ವಿಕ್ರಮ ಸಂವತ್ತನ್ನೂ ಶಕವರ್ಷವನ್ನೂ ಬಳಸುವದುಂಟು. ಕ್ರಿ. ಪೂರ್ವದ ೫೭ ರಲ್ಲಿ ವಿಕ್ರಮ ಸಂವತ್ ಆರಂಭವಾಯಿತು; ಅಂದರೆ ನಡೆಯುವ ಕ್ರಿಸ್ತವರ್ಷದಲ್ಲಿ ೫೭ ಕೂಡಿಸಿದರೆ ವಿಕ್ರಮಸಂವತ್ ಹೊರಡುತ್ತದೆ. ಕ್ರಿ. ವ. ದಲ್ಲಿ ೭೮ ಕಳೆದರೆ ಶಕವರ್ಷವು ಹೊರಡುತ್ತದೆ.

## ೨ ಬುದ್ಧನ ಉಪದೇಶ

ಗೌತಮ ಬುದ್ಧನು ಪಾಲೀ ಭಾಷೆಯಲ್ಲಿ ತನ್ನ ಧರ್ಮವನ್ನು ಪ್ರಸಾರಮಾಡಿದನು. ಅವನ ಮುಖ್ಯ ಉಪದೇಶವನ್ನು ಮೂಲಭಾಷೆಯಲ್ಲಿಯೇ ಇಲ್ಲಿ ಕೊಟ್ಟಿದೆ.

ಸರ್ವ ಪಾಪಸ್ಯ ಅಕರಣಂ, ಕುಶಲಸ್ಯ ಉಪಸಂಪದಾ |
ಸಚಿತ್ತ ಪರ್ಯೋದಮನಂ ಏನಂ ಬುದ್ಧಸ್ಯ ಶಾಸನಂ ||

ಅರ್ಥ : ಯಾವ ಪಾಪವನ್ನೂ ಮಾಡದಿರಬೇಕು, ಸತ್ಕಾರ್ಯಗಳನ್ನು ಸಂಚಯಿಸಬೇಕು, ಮನವನ್ನು ಯಾವಾಗಲೂ ಅಂಕೆಯಲ್ಲಿರಿಸಬೇಕು,— ಇದು ಬುದ್ಧನ ಕಟ್ಟಳೆ

### ೩. ಯಾವ ರಾಜನು ಶ್ರೇಷ್ಠನು ?

[ ಬೌದ್ಧಧರ್ಮದ ಪ್ರಚಾರ ಮಾಡುವಾಗ ಜಾತಕ ಕಥೆಗಳನ್ನು ಭಿಕ್ಷುಗಳು ಬಳಸುತ್ತಾರೆ. ಕಥೆಯ ರೂಪದಲ್ಲಿ ಬುದ್ಧನ ಸಂದೇಶವನ್ನು ಬೀರುವರು. ಈ ದೃಷ್ಟಿಯಿಂದ ಕೆಳಗಿನ ಕಥೆಯನ್ನು ಓದಿರಿ. ಬೌದ್ಧಧರ್ಮದ ಒಂದು ಮಹತ್ತ್ವದ ತತ್ತ್ವವನ್ನು ಇದರಲ್ಲಿ ಹೇಳಿದೆ. ( ತೃತೀಯ ಖಂಡ ನೋಡಿರಿ. ) ]

ಕಾಶಿಯ ದೊರೆ ಬ್ರಹ್ಮದತ್ತನು ಬಹು ನ್ಯಾಯಿ, ಅತ್ಯಂತ ಸದ್ಗುಣಿ. ತನ್ನಲ್ಲಿರುವ ದೋಷಗಳನ್ನು ಅರಿತುಕೊಳ್ಳುವುದಕ್ಕಾಗಿ ಅವನೊಮ್ಮೆ ದೇಶದಲ್ಲಿ ತಿರುಗಿದನು. ಆದರೆ ಎಲ್ಲರೂ ಅವನ ನ್ಯಾಯ ಬುದ್ಧಿಯನ್ನು ಹಾಡಿ ಹರಸುತ್ತಿದ್ದರು. ತನ್ನ ದೋಷವನ್ನು ಯಾರೂ ಹೇಳುವುದಿಲ್ಲವೆಂದು ಬಗೆದು ಬೇಸತ್ತು ರಥವೇರಿ ರಾಜಧಾನಿಗೆ ಮರಳಿದನು.

ಇದೇ ಸುಮಾರಿಗೆ ಕೋಶಲದೇಶದ ಮಲ್ಲಿಕರಾಜನು ತನ್ನ ದೋಷಗಳನ್ನು ಅರಿತುಕೊಳ್ಳಲೆಂದು ತನ್ನ ದೇಶದಲ್ಲಿ ಹೀಗೆಯೆ ಸುತ್ತಿದನು. ಬ್ರಹ್ಮದತ್ತನಂತೆ ಅವನಿಗೂ ನಿರಾಶೆಯಾಯಿತು. ಕೊನೆಗೆ ಅವನ ಸಾರಥಿಯು ರಥವನ್ನು ವೇಗವಾಗಿ ರಾಜಧಾನಿಯತ್ತ ಹೊಡೆದನು.

ದಾರಿ ಕಿರಿಯಗಲವಾಗಿದ್ದ ಕಡೆಯಲ್ಲಿ ಇಬ್ಬರು ರಾಜರ ರಥಗಳೂ ಒಮ್ಮೆಲೆ ಎದುರುಬದರಾದವು. " ನಿನ್ನ ರಥವನ್ನು ಬದಿಗೆ ಹೊಡೆದುಕೊಂಡು ಹೋಗು; ನನ್ನ ರಥದಲ್ಲಿ ನ್ಯಾಯಿಯಾದ ಬ್ರಹ್ಮದತ್ತ ರಾಜನಿದ್ದಾನೆ. " ಎಂದು ಬ್ರಹ್ಮದತ್ತನ ಸಾರಥಿ ಹೇಳಿದನು. ಅದಕ್ಕೆ "ಛೆ ಛೆ ! ನೀನೇ ನಿನ್ನ ರಥವನ್ನು ಪಕ್ಕಕ್ಕೆ ಹೊಡೆ ನನ್ನ ರಥದಲ್ಲಿ ಕೋಸಲದ ಶ್ರೇಷ್ಠರಾಜ ಮಲ್ಲಿಕನಿದ್ದಾನೆ. " ಎಂದು ಮಲ್ಲಿಕನ ಸಾರಥಿ ಹೇಳಿದನು. ಆಮೇಲೆ ಸಾರಥಿಗಳಿಬ್ಬರೂ ತಮ್ಮ ತಮ್ಮ ರಾಜರ ವೃತ್ತಾಂತವನ್ನು ಹೇಳಿದರು. ವಯಸ್ಸು, ರಾಜ್ಯ, ಸಂಪತ್ತು, ಕುಲ–ಈ ನಾಲ್ಕರಲ್ಲಿಯೂ ಇಬ್ಬರೂ ಸಮಾನರೇ ಎಂದು ಸಿದ್ಧವಾಯಿತು. ಆಗ ಮಲ್ಲಿಕ ರಾಜನ ಸಾರಥಿ, " ನಮ್ಮ ರಾಜನು ಬಹು ನ್ಯಾಯಿಯಾಗಿದ್ದಾನೆ. ಆತನು ಒಳ್ಳೆಯ ಪ್ರಜೆಗಳನ್ನು ಒಳ್ಳೆಯ ರೀತಿಯಿಂದಲೂ ಕೆಟ್ಟವರನ್ನು ಕೆಟ್ಟ ರೀತಿಯಿಂದಲೂ ನಡೆಸಿಕೊಳ್ಳುತ್ತಾನೆ. " ಎಂದನು. ಅದನ್ನು ಕೇಳಿ ಬ್ರಹ್ಮದತ್ತನ ಸಾರಥಿ, " ಇದೇ ನಿನ್ನ ರಾಜನ ಮಹಾ ದೊಡ್ಡ ಗುಣವಾಗಿದ್ದರೆ ಅವನಲ್ಲಿರುವ ದೋಷವಾದರೂ ಯಾವುದು ? " ಎಂದು ಕೇಳಿದನು.

" ಒಳ್ಳೆಯದಕ್ಕೆ ಒಳ್ಳೆಯದು, ಕೆಟ್ಟದಕ್ಕೆ ಕೆಟ್ಟದು ಎಂಬ ನೀತಿಗೇ ನೀನು ದೋಷವೆನ್ನುತ್ತಿದ್ದರೆ ಅಂದುಕೋ. ಆದರೆ ನಿನ್ನ ರಾಜನ ವಿಶೇಷ ಗುಣಗಳನ್ನಾದರೂ ಹೇಳು ನೋಡುವಾ "

" ನನ್ನ ರಾಜನ ಗುಣಗಳನ್ನು ಹೇಳಬೇಕೋ ? ಒಂದೊಂದೇ ಹೇಳುತ್ತೇನೆ ಕೇಳು = ನಮ್ಮ ರಾಜನು ಸಿಟ್ಟಿಗೆದ್ದ ಪ್ರತಿಪಕ್ಷವನ್ನೂ ಶಾಂತಿಯಿಂದ ಗೆಲ್ಲುತ್ತಾನೆ. ಕೆಟ್ಟವರೊಡನೆಯೂ ಒಳ್ಳೆಯತನದಿಂದ ನಡೆದುಕೊಳ್ಳುತ್ತಾನೆ. ದುಷ್ಟರಲ್ಲಿಯೂ ಉದಾರನಾಗಿದ್ದಾನೆ. ಅಸತ್ಯವನ್ನೂ ಸತ್ಯದಿಂದ ಗೆಲ್ಲುತ್ತಾನೆ. ತನಗೆ ಕೇಡುಬಗೆಯು ವವರಿಗೂ ಕಲ್ಯಾಣಮಾಡುವನು. ಈಗಲಾದರೂ ನನ್ನ ರಥಕ್ಕೆ ದಾರಿ ಬಿಡು ನೋಡುವಾ ! "

ಈ ಮಾತು ಕೇಳಿ ಕೋಸಲರಾಜನಿಗೆ ಆಶ್ಚರ್ಯವೆನಿಸಿತು. ಅವನು ತಟ್ಟನೆ ರಥದಿಂದಿಳಿದನು. ತನ್ನ ರಥದ ಕುದುರೆಯನ್ನು ಹಿಡಿದು ರಥವನ್ನು ಪಕ್ಕಕ್ಕೆ ತೆಗೆದು ಕೊಂಡು ಬ್ರಹ್ಮದತ್ತನಿಗೆ ದಾರಿಮಾಡಿಕೊಟ್ಟನು.

ಇದನ್ನು ಕಂಡು ಬ್ರಹ್ಮದತ್ತನೂ ಕೆಳಗಿಳಿದನು. ಮಲ್ಲಿಕನನ್ನು ಸಂಧಿಸಿ ಅವನಿಗೆ ನಾಲ್ಕು ಉಪದೇಶದ ಮಾತುಗಳನ್ನು ಹೇಳಿದನು.

## ೪. ಅಥೆನ್ಸದಲ್ಲಿ ಸೊಲೋನನ ಕಾಯದೆ

ಕ್ರಿ. ಪೂ. ೫೯೪ ರಲ್ಲಿ ಸೋಲನನು ಅಥೆನ್ಸದ ಪ್ರಮುಖನೆಂದು ಕರಿಸಲ್ಪಟ್ಟನು. ಅವನು ರಾಜ್ಯಸುಧಾರಣೆಗಾಗಿ ಕೆಳಗಿನಂತೆ ಕಾಯದೆ ಮಾಡಿದನು

(೧) ನಾಗರಿಕ ಸ್ವಾತಂತ್ರ್ಯಕ್ಕೆ ವಿಘಾತಕವಾದ ಹೊಲಗದ್ದೆಗಳ ಒತ್ತೆಕಾಗದ ಗಳು ರದ್ದೆಂದು ತಿಳಿಯಬೇಕು.

(೨) ಸಾಲಕ್ಕಾಗಿ ಗುಲಾಮರಾಗಿದ್ದವರ ದಸ್ಯುತ್ವವು ರದ್ದಾಗಬೇಕು.

(೩) ಉಚ್ಚವರ್ಗೀಯರ ವೈಯಕ್ತಿಕ ಭೂಮಿಗಳನ್ನು ಕಾಯದೆಯಿಂದ ಪರಿ ಮಿತಗೊಳಿಸುವುದು.

(೪) ಸಂಕಟಪ್ರಸಂಗದಲ್ಲಿ ಬರೀ ಕಣ್ಣಿನಿಂದ ನೋಡುವವನ ನಾಗರಿಕತ್ವದ ಹಕ್ಕು ನಷ್ಟವಾಗುವುದು.

---

## ೫. ನಿಶ್ಚಯಿಸಿದ ದಾರಿಯನ್ನು ಬದಲಿಸುವದಿಲ್ಲ.

—ಸಾಕ್ರೇಟಿಸ್

[ ಸಾಕ್ರೇಟಿಸನ ವಿಚಾರಣೆ ನಡೆದಾಗ ಆತನು ಕೊಟ್ಟ ನಿವೇದನೆಯ ಕೆಲಭಾಗ ( ಪ್ಲೆಟೋ ಕೃತ 'ಸಾಕ್ರೆಟೀಸ ಅಪೊಲೋಜಿಯಾ " ಗ್ರಂಥದಿಂದ ]

ನನ್ನ ಮೇಲೆ ಯಾರ ಅಧಿಕಾರ ನಡೆಯುತ್ತದೋ ಅವರು ಮಾನವರಿರಲಿ, ದೇವರೇ ಇರಲಿ, ಅವರ ಅಪ್ಪಣೆಯನ್ನು ಮುರಿಯುವುದು ಮತ್ತು ತಪ್ಪು ಹಾದಿಯನ್ನು ಹಿಡಿಯುವುದು ಅತಿ–ಅನಿಷ್ಟವೆಂಬುದು ನನಗೆ ಗೊತ್ತಿದೆ. ಅನಿಷ್ಟಕಾರ್ಯವನ್ನು ನಾನೆಂದಿಗೂ ಮಾಡುವುದಿಲ್ಲ, ಮತ್ತು ನಿಜವಾದ ಹಿತ ಯಾತರಲ್ಲಿದೆಯೋ ಅದನ್ನು ಮಾಡಲು ಅಂಜುವುದಿಲ್ಲ. ಹೀಗಿರುವಲ್ಲಿ 'ಸಾಕ್ರೇಟಿಸಾ, ನೀನು ನಿನ್ನ ತತ್ತ್ವಜ್ಞಾನದ ಸಂಶೋಧನೆಯನ್ನು ಬಿಟ್ಟು ಬಿಟ್ಟರೆ ನಿನ್ನನ್ನು ಶಿಕ್ಷಿಸದೆ ಬಿಟ್ಟುಬಿಡುವೆವು. ಹಟವನ್ನೇ

ಹಿಡಿದರೆ ಮರಣ ಶಿಕ್ಷೆಯನ್ನು ನೀನು ಅನುಭವಿಸಬೇಕಾದೀತು " ಎಂದು ನೀವು ಹೇಳ ಬಹುದು. ಇಂತಹ ನಿರ್ಬಂಧದಿಂದ ನೀವು ನನ್ನ ಬಿಡುಗಡೆ ಮಾಡಲು ಬಯಸುತ್ತಿದ್ದರೆ, ನಿಮಗೆ ನನ್ನ ಹೇಳಿಕೆ ಇಷ್ಟೇ 'ಅಯ್ಯಾ. ಅಥೆನ್ಸಿನ ಜನಗಳೇ ನಿಮ್ಮ ಬಗ್ಗೆ ನನಗೆ ಅತಿಶಯ ಆದರವಿದೆ; ಪ್ರೇಮವಿದೆ. ಆದರೆ ನಿಮ್ಮ ಮಾತಿಗಿಂತ ಮೊದಲು ಪರಮೇಶ್ವರನ ಅಪ್ಪಣೆಯನ್ನು ನಾನು ಪಾಲಿಸತಕ್ಕವನು. ಮತ್ತು ಮೈಯಲ್ಲಿ ಶಕ್ತಿಯಿರುವ ವರೆಗೆ, ಪ್ರಾಣವಿರುವವರೆಗೆ ತತ್ತ್ವಜ್ಞಾನದ ಸಂಶೋಧನೆಯನ್ನು ಬಿಡುವವನಲ್ಲ. ಇಷ್ಟೇಅಲ್ಲ ಬೀದಿ ಬೀದಿ ತಿರುಗಿ ನಿಮ್ಮೆಲ್ಲರಿಗೆ ಉಪದೇಶಿಸುತ್ತೇನೆ. ಜನಗಳಿರಾ, ಅಥೆನ್ಸಿನ ಸುಬುದ್ಧ ನಾಗರಿಕರು ನೀವು. ಅಥೆನ್ಸಿನ ಬುದ್ಧಿಮತ್ತೆಯ ಬಗ್ಗೆಯೂ ಸಾಮರ್ಥ್ಯದ ಬಗ್ಗೆಯೂ ನಿಮಗೆ ಹೆಮ್ಮೆ ಎನಿಸುವದಿಲ್ಲವೆ ? ಎಂದಮೇಲೆ, ಒಂದೇ ಸವನೆ ಹಣದ, ಕೀರ್ತಿಯ ಮಾನಮರ್ಯಾದೆಯ ಬೆನ್ನು ಹತ್ತುವದಕ್ಕೆ ನಾಚಿಕೆಯಾಗುವುದಿಲ್ಲವೇ! ಸತ್ಯ, ಜ್ಞಾನ, ಆತ್ಮದ ಆತ್ಯಂತಿಕ ಹಿತ ಇವುಗಳ ಬಗ್ಗೆ ಒಂದಿಷ್ಟು ವಿಚಾರ ಮಾಡುತ್ತೀರೋ ಇಲ್ಲವೆ ?........ ಹಣದಿಂದ ಗುಣ ದೊರೆಯುವುದಿಲ್ಲ. ಆದರೆ ಮನುಷ್ಯನಿಗೆ ಒಳ್ಳೆಯದೇನಾದರೂ ಸಿಕ್ಕುವುದಿದ್ದರೆ ಸದ್ಗುಣಗಳಿಂದ ಅವೆಲ್ಲ ಸಿಕ್ಕುವವು.' ಎಂದು ನಾಗರಿಕರಿಗೆ ನಾನು ಹೇಳುವೆನು. ವಾದ ಮಾಡುವೆನು. ಪ್ರಶ್ನೆ ಕೇಳುವೆನು; ಮತ್ತು ಕೊನೆಗೆ ಅವರನ್ನು ಆತ್ಮನಿರೀಕ್ಷಣೆ ಮಾಡಿಕೊಳ್ಳಲು ಹಚ್ಚುವೆನು. ನನ್ನ ಈ ಉದ್ಯೋಗವು ಹೀಗೇಯೇ ಸಾಗತಕ್ಕದ್ದು. ನೀವು ಬೇಕಾದರೆ ನನ್ನನ್ನು ನಿರ್ದೋಷಿಯೆಂದು ತೀರ್ಮಾನಿಸಿರಿ. ಇಲ್ಲವೆ ಬೇಕಾದ ಶಿಕ್ಷೆ ವಿಧಿಸಿರಿ. ನಾನು ನನ್ನ ಆಯುಷ್ಯದ ನಿಶ್ಚಿತ ಮಾರ್ಗವನ್ನು ಎಂದೂ ಬದಲಿಸುವದಿಲ್ಲವೆಂಬುದನ್ನು ದೃಢವಾಗಿ ನಂಬಿರಿ. "

## ೬ ಪೆರಿಕ್ಲಿಸನ ಭಾಷಣ

ಅಥೆನ್ಸ್-ಸ್ಪಾರ್ಟಾ ಸಂಗ್ರಾಮದಲ್ಲಿ ಮಡಿದ ವೀರರಿಗೆ ಶ್ರದ್ಧಾಂಜಲಿ ಸಲ್ಲಿಸುವ ಪ್ರಸಂಗದಲ್ಲಿ ನೆರೆದ ಜನರನ್ನುದ್ದೇಶಿಸಿ ಪೆರಿಕ್ಲಿಸನು ಮಾಡಿದ ಭಾಷಣವಿದು: (ಥ್ಯುಸಿಡಾಯಡಿಸ್ ಎಂಬ ಪ್ರಸಿದ್ಧ ಇತಿಹಾಸಕಾರನು ಆ ಯುದ್ಧವನ್ನು ವರ್ಣಿಸುತ್ತ, ಈ ಭಾಷಣವನ್ನು ಅವನಿಂದ ಮಾಡಿಸಿದ್ದಾನೆ. ) ಅಥೆನ್ಸಿನ ಪ್ರಜಾಸತ್ತೆಯ ಮರ್ಮವನ್ನು ಇದರಲ್ಲಿ ಹೇಳಲಾಗಿದೆ.

" ನಾನು ನಮ್ಮ ರಾಜ್ಯಘಟನೆಯನ್ನು ರಚಿಸುವಾಗ ಇನ್ನೊಬ್ಬರ ನಕಲು ಮಾಡುವುದಿಲ್ಲ. ತಿರುಗಿ, ನಮ್ಮ ಘಟನೆಯೇ ಇತರರಿಗೆ ಅನುಕರಣೀಯವೆನಿಸುತ್ತದೆ. ನಾವು ಪ್ರಜಾಪ್ರಭುತ್ವದ ದಾರಿ ನಡೆಯುತ್ತಿದ್ದೇವೆ. ರಾಜ್ಯದಾಡಳಿತದ ಹೊಣೆ ಎಲ್ಲ ಜನರ ಮೇಲೆಯೂ ಇದೆ; ಎಲ್ಲರಿಗೂ ನ್ಯಾಯ ಸರಿಯಾಗಿ ದೊರೆಯುತ್ತದೆ; ಅಂದರೆ, ಗುಣಿಗಳಾದ ಜನರನ್ನು ಉಪೇಕ್ಷಿಸುವುದಿಲ್ಲ; ಗುಣಿಗಳ ವಿಶೇಷ ಗುಣಗಳ ಬಗ್ಗೆ ಪಾರಿತೋಷಿಕ ದೊರೆಯುವಂತೆ ದಕ್ಷತೆ

ವಹಿಸುತ್ತೇವೆ. ಯಾರು ಎಷ್ಟೇ ಬಡವರಿರಲಿ; ಅಪ್ರಸಿದ್ಧರಿರಲಿ ಅವರಿಗೆ ದೇಶ ಸೇವೆಗೆ, ಜನಹಿತ ಕಾರ್ಯ ಮಾಡುವುದಕ್ಕೆ ಆಸ್ಪದ ದೊರೆಯುವಂತೆ ಇಲ್ಲಿ ವ್ಯವಸ್ಥೆಯಿದೆ. ನಾವು ನೆರೆಹೊರೆಯವರನ್ನು ದುರದುರನೆ ಅಥವಾ ಮೋರೆ ಕಿವುಚಿ ನೋಡುವುದಿಲ್ಲ. ಗುಣವಂತನು ಯಾವನೇ ಇರಲಿ, ಸ್ವಾಗತಿಸುವೆವು. ಕಾಯದೆಯನ್ನಂತೂ ಪಾಲಿಸಿಯೇ ಪಾಲಿಸುವೆವು, ಕಾಯದೆಯ ಹಿಂದಿರುವ ಇಂಗಿತವನ್ನೂ ಉಲ್ಲಂಘಿಸುವುದಿಲ್ಲ. ಏಕೆಂದರೆ, ಬರೀ ಶಾಬ್ದಿಕವಾಗಿ ಕಾಯದೆ ಪಾಲಿಸುವುದರಲ್ಲಿ ಅರ್ಥವಿಲ್ಲವೆಂಬುದು ನಮಗೆ ಗೊತ್ತಿದೆ. ಸಾದಾತನದಲ್ಲಿ ನಮಗೆ ಅಭಿಮಾನವಿದೆ, ಅಂತಃಕರಣಕ್ಕೆ ಆನಂದವೀಯುವ ಸೌಂದರ್ಯೋಪಾಸನೆಯಲ್ಲಿ ಅಭಿರುಚಿಯಿದೆ. ನಮ್ಮ ಸಾದಾತನ ಏಕಾಂಗಿಯಲ್ಲ; ನಮ್ಮ ರಾಜ್ಯದ ಬಾಗಿಲು ಎಲ್ಲರಿಗೂ ತೆರೆದಿದೆ. ನಮ್ಮ ಬಲವು ಸೈನಿಕ ಸಾಧನಗಳಿಗಿಂತ ಇಷ್ಟ ಕಾರ್ಯಕ್ಕಾಗಿ ಸದಾ ತತ್ಪರವಾಗಿರುವ ನಮ್ಮ ಆನಂದೀ ಮನೋವೃತ್ತಿಯಲ್ಲಿದೆ. ಮುಂದೆ ಸಂಕಟಗಳು, ಕಠಿಣ ಪ್ರಸಂಗಗಳು ಬಂದಾವೆಂದು ಯಾವಾಗಲೂ ಕಡುತರವಾದ ಜೀವನ ಕ್ರಮದ ಶಿಕ್ಷಣ ಪಡೆಯಬೇಕೆಂದು ನಮಗೆನಿಸುವುದಿಲ್ಲ. ಸಂಕಟವೊದಗಿದರೆ ಅದಕ್ಕೆ ಸಿದ್ಧವಾಗಿರುವ ಮನೋವೃತ್ತಿ ಇದ್ದರಾಯಿತು, ಆಯುಷ್ಯದಲ್ಲಿಯ ಆನಂದವನ್ನು ಅನುಭವಿಸುವುದಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ನಮಗೆನಿಸುತ್ತದೆ. ಸಾರ್ವಜನಿಕ ಕಾರ್ಯದಲ್ಲಿ ಭಾಗಿಯಾಗದವನನ್ನು ನಿರುಪಯೋಗಿಯೆಂದು ನಾವು ಎಣಿಸುತ್ತೇವೆ. ನಾವು ವಾದವಿವಾದ ಮಾಡುತ್ತೇವೆ; ಏಕೆಂದರೆ ಚರ್ಚೆಗಿರ್ಚೆ ಏನೂ ಇಲ್ಲದೆ ಹೊತ್ತುಕೊಂಡ ಹೊಣೆಯನ್ನು ಈಡೇರಿಸಲಾಗುವುದಿಲ್ಲ. ಅಪಯಶ ಬರುವುದೆಂದು ನಾವು ತಿಳಿದುಕೊಂಡಿದ್ದೇವೆ. ಮುಂದಿನ ಸಂಕಟ ತಿಳಿಯದಿರುವುದರಿಂದ ಎಷ್ಟೋ ಅಜ್ಞಾನಿಗಳು ಅತಿರಿಕ್ತ ದಿಟ್ಟರಾಗುತ್ತಾರೆ; ಅಂತಹರು ನಾವಲ್ಲ. ಆಗುವ ಪರಿಣಾಮವನ್ನು ಕುರಿತು ಪೂರ್ಣ ವಿಚಾರ ಮಾಡಿಯೇ ನಾವು ಧೈರ್ಯದಿಂದ ಅದನ್ನು ಎದುರಿಸುತ್ತೇವೆ. ಮುಂದೆ ನಮಗೆ ಒಳ್ಳೇ ಫಲ ಸಿಕ್ಕಬೇಕೆಂದು ಲೆಕ್ಕಹಾಕಿ ಒಳ್ಳೆಯ ಕೆಲಸಕ್ಕೆ ಅಣಿಯಾದವರು ನಾವಲ್ಲ. ನಿರ್ಭಯವಾಗಿ ಮತ್ತು ಸ್ವತಂತ್ರ ವಾತಾವರಣದಲ್ಲಿ ಮನುಷ್ಯನು ಹೇಗೆ ನಡೆಯಬೇಕೋ ಹಾಗೆ ನಡೆಯುವಂತಹ ಮನೋವೃತ್ತಿ ನಮಗಿದೆ. ಸಂಕುಚಿತ ಸ್ವಾರ್ಥಕ್ಕಿಂತ ನಿರ್ಭಯವಾಗಿ ಸನ್ಮಾರ್ಗವನ್ನು ಆಚರಣೆಯಲ್ಲಿ ತರಲು ನಮಗೆ ವಿಶ್ವಾಸವಿದೆ. ''

## ೭. ನಾನು ರೋಮುಕ್ಕಾಗಿ ಏನು ಮಾಡಿದೆ :

**ಅಗಸ್ಟಸನ ಆತ್ಮಕಥನ :** ' ನನ್ನ ವಯಸ್ಸಿನ ೧೯ನೆಯ ವರುಷದಲ್ಲಿ, ನನ್ನ ಕೈವೆಚ್ಚದಿಂದ ನಾನು ದಂಡು ಕಟ್ಟಿದೆ; ಸ್ವಾರ್ಥಿಗುಂಪಿನ ದಬ್ಬಾಳಿಕೆಯ ವಿಪತ್ತಿನಿಂದ ರೋಮ ಗಣರಾಜ್ಯದ ಸ್ವಾತಂತ್ರ್ಯವನ್ನು ಉಳಿಸಿದೆ; ಇದರಿಂದ ಸೆನೆಟ್ಟು ನನ್ನನ್ನು ಕಾನ್ಸಲನನ್ನಾಗಿ ನಿಯಮಿಸಿ ಉಚ್ಚಾಧಿಕಾರವನ್ನು ನನಗೆ ಕೊಟ್ಟಿತು.

ಅಂತಃಕಲಹಗಳಿಂದ, ಹೊರಗಿನ ಹಗೆಗಳಿಂದ ರೋಮುವನ್ನು ರಕ್ಷಿಸಲು ಭೂಸೈನ್ಯದ ಮತ್ತು ನೌಕಾಸೈನ್ಯದ ಸಹಾಯದಿಂದ ನೆಲ-ಜಲಗಳಲ್ಲಿ ಹೋರಾಡಿದೆ. ನನಗೆ ಶರಣು ಬಂದವರನ್ನು ಕೊಲ್ಲದೆ ರಕ್ಷಿಸಿದೆ. ಐದುಲಕ್ಷ ರೋಮನರು ನನ್ನೆದರು ಸೈನ್ಯ ಸಹಾಯದ ಶಪಥ ಮಾಡಿದರು. ಅವರಲ್ಲಿ ಕೆಲವರನ್ನು ರೋಮನ್ ನೆಲವೀಡುಗಳನ್ನು ಸ್ಥಾಪಿಸಲು ದೂರ ದೂರ ಕಳಿಸಿದೆ.

ನನ್ನ ಆಳಿಕೆಯ ಆರನೆಯ ವರುಷದಲ್ಲಿ ರೋಮದ ಜನಸಂಖ್ಯೆಯನ್ನು ಎಣಿಸಿದೆ. ಅದು ೪೦,೬೩,೦೦೦ ಇತ್ತು. ಮುಂದೆ ಪ್ರತಿ ಐದು ವರ್ಷಕ್ಕೊಮ್ಮೆ ಜನಗಣನೆ ನಡೆಯುವಂತೆ ನಿಯಮಿಸಿದೆ. ಎರಡನೆಯ ಸಲ ಜನಸಂಖ್ಯೆ ೪೨,೩೩,೦೦೦; ಮೂರನೆಯ ಸಲ ೪೯,೩೭,೦೦೦ ಆಯಿತು.

ಕಡಲುಗಳ್ಳರನ್ನು ನಾನು ಅಂಕೆಗೆ ತಂದೆ. ಸುಮಾರು ೩೦೦೦೦ ಗುಲಾಮರು ರೋಮದಿಂದ ಓಡಿಹೋಗಿ ರೋಮದ ವಿರುದ್ಧ ಹೋರಾಡುತ್ತಿದ್ದರು; ಅವರನ್ನು ಹಿಡಿದು ತಂದು ಮತ್ತೆ ಅವರವರ ಒಡೆಯರಿಗೆ ಒಪ್ಪಿಸಿದೆ. ನನ್ನ ಈ ಎಲ್ಲ ಕಾರ್ಯಗಳಿಂದ ಇಡೀ ಇಟಲಿ ನಾನು ಅವರ ಸೇನಾಪತಿಯಾಗಬೇಕೆಂದು ಒಕ್ಕೊರಲಿನಿಂದ ಅಪೇಕ್ಷಿಸಿತು. ಮತ್ತು ಸ್ಪೇನ್, ಗಾಲ್, ಆಫ್ರಿಕೆ, ಸಿಸಲಿ, ಸಾರ್ಡಿನಿಯ ದೇಶಗಳು ನನ್ನೊಡನೆ ರಾಜನಿಷ್ಠೆಯಿಂದಿರುವುದಾಗಿ ಆಣೆಮಾಡಿದವು.

ಭಾರತದಿಂದ ರಾಯಭಾರಿಗಳು ಮೇಲಿಂದಮೇಲೆ ನನ್ನ ಕಡೆಗೆ ಬರುತ್ತಿದ್ದರು. ಇದಕ್ಕೂ ಮೊದಲು ಯಾವ ರೋಮನ್ ಸೇನಾಪತಿಯ ಕಡೆಗೂ ಹೀಗೆ ರಾಯಭಾರಿಗಳು ಬರುತ್ತಿರಲಿಲ್ಲ.

ನನ್ನ ಆಳಿಕೆಯ ೬-೭ನೆಯ ವರುಷದಲ್ಲಿ ರೋಮದ ಅಂತರ್ಗತ ಯಾದವಿಯನ್ನು ಅಡಗಿಸಿದ ಮೇಲೆ ನನ್ನ ಅಧಿಕಾರವನ್ನೆಲ್ಲ ಸೆನೆಟಿಗೆ ಮರಳಿ ಕೊಟ್ಟುಬಿಟ್ಟೆ. ಇದರಿಂದ ತುಷ್ಟವಾದ ಸೆನೆಟ್ಟು ನನಗೆ 'ಆಗಸ್ಟಸ್' ಎಂಬ ಪದವಿಯನ್ನು ಕೊಟ್ಟಿತು ನನ್ನ ಗೃಹದ್ವಾರವನ್ನು ವಿಜಯದ ಲತಾಪಲ್ಲವಗಳು ಅಲಂಕರಿಸಿವು. ಇನ್ನು ಮುಂದೆ ರಾಜ್ಯಕಾರಭಾರದಲ್ಲಿ ನನಗೆ ಅಗ್ರಸ್ಥಾನವನ್ನು ಜನರು ಸ್ವಸಂತೋಷದಿಂದ ಕೊಟ್ಟರು. ವಾಸ್ತವವಾಗಿ, ಇತರರಿಗಿಂತ ವಿಶೇಷವಾದ ಅಧಿಕಾರ ಯಾವುದೂ ನನ್ನ ಕೈಯಲ್ಲಿರಲಿಲ್ಲ; ಆದರೆ ಅಧಿಕಾರದ ಸಮಾನತೆಯಿದ್ದೂ ನನ್ನ ಅಗ್ರೇಸರತ್ವವೇ ಎಲ್ಲರಿಗೂ ಮಾನ್ಯವಾಯಿತು.

[ ಈ ಅವತರಣಿಕೆಯನ್ನು ಯುರೋಪಿಯನ್ ಇನ್ಸ್ಟಿರಿಟನ್ಸ್ ( ಭಾಗ ೧, ಪುಟ ೨೫೧-೨೬೨ ) ಗ್ರಂಥದಿಂದ ಸಂಕ್ಷೇಪವಾಗಿ ತೆಗೆದುಕೊಳ್ಳಲಾಗಿದೆ. ]

---

# ಗ್ರೀಕ-ರೋಮ-ಭಾರತ

## ಕಾಲಪಟ ೨

( ಕ್ರಿ. ಪೂ. ೮೦೦ ರಿಂದ ಕ್ರಿ. ವ. ೨೦೦ )

[ ಪ್ರಮಾಣ : ೧ ಇಂಚಿಗೆ ೨೦೦ ವರುಷ ಆದರೂ ಘಟನೆಗಳನ್ನು ಸ್ಥೂಲ ಮಾನದಿಂದ ಆ ಆ ಶತಕದಲ್ಲಿ ಕೊಟ್ಟಿದೆ. ]

| | | |
|---|---|---|
| | ಕ್ರಿ. ಪೂ. ೮೦೦ | |
| ಇರಾಣದಲ್ಲಿ ಝೋರತುಷ್ಟ್ರನ ಉಪದೇಶ ( ಕ್ರಿ. ಪೂ. ಸು. ೭೦೦ ) | | ಹೋಮರನ ಇಲಿಯಡ್ ಕಾವ್ಯ- ಆಲಿಂಪಿಕ್ ಪಂದ್ಯ ( ಕ್ರಿ.ಪೂ.೭೭೬ ) ಆ ಕಾಲದ ನಿಶ್ಚಿತ ಉಲ್ಲೇಖವಿದೆ. ಆದರೆ ಅದಕ್ಕೆ ಹಿಂದೆಯೂ ಪಂದ್ಯಾಟಗಳು ನಡೆಯುತ್ತಿದ್ದವು) |
| | ೬೦೦ | |
| ಮಹಾವೀರ ವರ್ಧಮಾನ (ಮೃ.೪೬೮) ಗೌತಮಬುದ್ಧ ( ಮೃ. ೪೮೩ ) ಮಗಧದಲ್ಲಿ ನಂದವಂಶ ಸ್ಥಾಪನೆ ( ೪೧೩ ) | | ಸೋಲೋನ್-ಗ್ರೀಕ ಪ್ರಜಾಸತ್ತೆಯ ಊರ್ಜಿತಸ್ಥಿತಿ. ಚೀನದಲ್ಲಿ ಕಾನ್‌ಫ್ಯೂಸಿಯಸ್ ( ಕ್ರಿ. ಪೂ. ೫೫೧—೪೭೮ ) |
| | ೪೦೦ | ಸಾಕ್ರೆಟೀಸ್ (ಕ್ರಿ. ಪೂ. ೪೬೯) |
| ಮೌರ್ಯ ಸಾಮ್ರಾಜ್ಯ (ಕಿ.ಪೂ ೩೨೧) ಅಶೋಕ ( ಕ್ರಿ. ಪೂ. ೨೭೩—೨೩೨ ) | | ಪೌರವ-ಅಲೆಕ್ಝಾಂಡರ್ ಯುದ್ಧ ( ಕ್ರಿ. ಪೂ. ೩೨೬ ) |
| | ೨೦೦ | |
| ವಿಕ್ರಮ ಸಂವತ್ ( ಕ್ರಿ. ಪೂ. ೫೭ ) | | ರೋಮನ್ ಪ್ರಜಾಸತ್ತೆಯ ಅಂತ. ( ಕ್ರಿ. ಪೂ. ೨೭ ) |
| | ಕ್ರಿಸ್ತ ವರ್ಷಾರಂಭ | |
| ಶಾಲಿವಾಹನ ಶಕ ( ಕ್ರಿ. ವ. ೭೮ ) ಕನಿಷ್ಕ ( ಕ್ರಿ. ವ. ೧೨೦—೧೬೨ ) | | |
| | ೨೦೦ | |

**ಪ್ರಶ್ನೆ :**

ಶಾಲಿವಾಹನ ಶಕದ ಕಾಲಗಣನೆಯಂತೆ, ಶಕಪೂರ್ವ ಮತ್ತು ಶಕೋತ್ತರ ವರ್ಷಗಳನ್ನು ಸೂಚಿಸುವ ಈ ಕಾಲಪಟವನ್ನು ತಯಾರಿಸಿರಿ.

## ಷಷ್ಠ ಖಂಡ

# ಮೌರ್ಯಪೂರ್ವಕಾಲೀನ ಭಾರತ



### ೧. ರಾಜಕೀಯ ಜೀವನದ ಐತಿಹಾಸಿಕ ಸಮಾಲೋಚನೆ

**ಸಾವಿರ ವರುಷಗಳು :** ವೇದಕಾಲದ ಜನರ ಜೀವನ ಹೇಗಿತ್ತೆಂಬುದನ್ನು ಹಿಂದೆ ದ್ವಿತೀಯ ಖಂಡದಲ್ಲಿ ಕೊಟ್ಟಿದೆ. ಅಲ್ಲಿಂದ ಮೌರ್ಯರಾಜ್ಯ ಸ್ಥಾಪನೆಯ ವರೆಗೆ ಸುಮಾರು ಸಾವಿರ–ಹನ್ನೆರಡುನೂರು ವರ್ಷಗಳಾಗುತ್ತವೆ. ಈ ಕಾಲದಲ್ಲಿ ಭಾರತ ದಲ್ಲಿ ರಾಜಕೀಯ ಜೀವನದ ಸಂಘಟನೆ ಹೇಗೆ ನಡೆದಿತ್ತೆಂಬುದನ್ನು ಇಲ್ಲಿ ಹೇಳಲಾಗು ವುದು. ವೇದಗಳು, ರಾಮಾಯಣ ಮಹಾಭಾರತಗಳಂತಹ ಮಹಾಕಾವ್ಯಗಳು, ಬುದ್ಧ ಜಾತಕಕಥೆಗಳು ಇತ್ಯಾದಿ ಗ್ರಂಥಗಳ ಆಧಾರದಿಂದ ಈ ಬಗ್ಗೆ ಕೆಲ ಸಂಗತಿಗಳು ಗೊತ್ತಾಗುತ್ತವೆ.

**ವೇದಕಾಲ :** ಗ್ರಾಮ, ವಿಶ್, ಹೀಗೆ ಒಂದಕ್ಕಿಂತ ಒಂದು ದೊಡ್ಡದಾದ ರಾಜ್ಯ ಭಾಗಗಳಿದ್ದವು. ಗ್ರಾಮದ ಆಡಳಿತ ಗ್ರಾಮಪಂಚಾಯತಿಗೆ ಸೇರಿತ್ತು. ಗ್ರಾಮಾಧಿ ಕಾರಿಗಳಿಗೆ ' ಗ್ರಾಮಣಿ ' ವಿಶ್‌ದ ಕಾರಭಾರಿಗೆ ವಿಶ್‌ಪತಿ ಎಂದೂ ಎನ್ನುತ್ತಿದ್ದರು. ' ಜನಪತಿ ' ಅಥವಾ ' ಗಣಪತಿ ' ವಿಶ್ವಪತಿಗಿಂತ ಹೆಚ್ಚಿನವನು. ವಿವಿಧ ಜನಸಮೂಹ ಗಳ ಮೇಲೆ ಅವನ ಆಧಿಪತ್ಯವಿತ್ತು. ಮೊದಲು ಜನಪತಿಯನ್ನು ಆರಿಸುವ ಪದ್ಧತಿ ಯಿತ್ತು. ಅಲ್ಲಿಯವರೆಗೆ ' ಜನ ' ಗಳಿಗೆ ಗಣರಾಜ್ಯಸ್ವರೂಪವಿತ್ತು. ಮುಂದೆ ಕರ್ತೃತ್ವ ಶಾಲಿ ಜನಪತಿಗಳು ವಂಶಪರಂಪರೆಯ ಆಳಿಕೆಯನ್ನು ಆರಂಭಿಸಿದರು; ಆಗ ಜನಪತಿ ಗಳು ರಾಜರಾದರು; ಅವರಿಗೆ ಆಧೀನವಾದ ಪ್ರದೇಶಗಳು ' ರಾಜ್ಯ ' ಗಳಾದವು. ಸಂಸ್ಕೃತ ವಾಙ್ಮಯದಲ್ಲಿ ತೀರ ಚಿಕ್ಕ ಚಿಕ್ಕ ಪ್ರದೇಶದ ಒಡೆಯನನ್ನು ರಾಜನೆಂದದ್ದು ಕಂಡುಬರುತ್ತದೆ. ಎಲ್ಲ ಕಡೆಗಳಲ್ಲಿಯೂ ಗಣರಾಜ್ಯಗಳು ರಾಜರಾಜ್ಯಗಳಾಗಿ ಮಾರ್ಪ ಡಲಿಲ್ಲ. ಭಾರತದ ವಾಯುವ್ಯದಲ್ಲಿ ಭಾವಲಪುರದ ಭಾಗದಲ್ಲಿಯೂ ಈಶಾನ್ಯದ ಶಾಕ್ಯರ ದೇಶದಲ್ಲಿಯೂ ಗಣರಾಜ್ಯಗಳು ಎಷ್ಟೋವರ್ಷ ಅಸ್ತಿತ್ವದಲ್ಲಿದ್ದವು. ' ರಾಷ್ಟ್ರ ' ಎಂಬುದು ಸ್ವತಂತ್ರ ರಾಜ್ಯವಾಚಕ ಶಬ್ದವಲ್ಲ. ರಾಜನು ತನ್ನ ರಾಜ್ಯವನ್ನು ಪ್ರಾಂತ ಗಳಾಗಿ ವಿಭಾಗಿಸಿ, ಒಂದೊಂದಕ್ಕೂ ' ಭೋಗಪತಿ ' ಎಂಬ ಅಧಿಕಾರಿಯನ್ನು ಕಂದಾ ಯದ ಎತ್ತುವಳಿಗೆ ನಿಯಮಿಸಿದನು. ಮುಂದೆ ಅವನಿಗೆ ' ರಾಷ್ಟ್ರಿಕ ' ಎಂಬ ಹೆಸರು ಬಂದಿತು. ಅವನ ಆಧೀನದಲ್ಲಿದ್ದುದು ರಾಷ್ಟ್ರ. ಮಹಾರಾಷ್ಟ್ರದಲ್ಲಿ ೯ನೆಯ ಶತಕ ದಲ್ಲಿ ಉದಯ ಹೊಂದಿದ ರಾಷ್ಟ್ರಕೂಟರು ಚಾಲುಕ್ಯರ ಆಳಿಕೆಯಲ್ಲಿ ಇಂಥ

ಪ್ರಾಂತಾಧಿಕಾರಿಗಳಾಗಿದ್ದರು. ಮೇಲೆ ಹೇಳಿದಂತೆ ಜನಪತಿಯ ಬದಲು ರಾಜರು ಸ್ಥಿರವಾದರೂ ಸಭೆ–ಸಮಿತಿಗಳ ಸಲಹೆಯಂತೆ ಆಳುತ್ತಿದ್ದರು. ಅವನಿಗೆ ಪ್ರಸ್ಥಾಪಿತ ಧರ್ಮನಿರ್ಣಯಗಳ ಬಂಧನವಿತ್ತು. ಅವುಗಳನ್ನು ಮೀರುವುದು ಪಾಪವೆಂದು ಅವನು ತಿಳಿದಿದ್ದನು.

**ರಾಜ್ಯದ ಸ್ವರೂಪ :** ವೇದೋತ್ತರ ಕಾಲದಲ್ಲಿ ಆರ್ಯರ ರಾಜ್ಯವಿಸ್ತಾರ ಹೆಚ್ಚಿತು. ಕಾಬೂಲದಿಂದ ಗಂಗೆಯ ವರೆಗೆ ಈ ರಾಜ್ಯಗಳು ಪಸರಿಸಿದ್ದವು. ದಕ್ಷಿಣಕ್ಕೆ ವಿಂಧ್ಯದ ವರೆಗೂ ಅವರು ನೆಲೆಸತೊಡಗಿದ್ದರು. ಸುದಾಸ ಮತ್ತು ಹತ್ತು ರಾಜರ ಯುದ್ಧದ ವರ್ಣನೆ ಋಗ್ವೇದದಲ್ಲಿ ಬಂದಿದೆ. ಅದರಲ್ಲಿ ಸುದಾಸನು ಗೆದ್ದನು. ಅವನನ್ನು ಸಮ್ರಾಟ್ ಎಂದು ಉಲ್ಲೇಖಿಸಲಾಗಿದೆ. ರಾಜ್ಯಗಳನ್ನು ಗೆಲ್ಲುವದೆಂದರೆ ಅವನ್ನು ಸ್ವಾಷ್ಟಗೊಳಿಸುವುದಲ್ಲ; ರಾಜರಿಂದ ಸಮ್ರಾಟನು ಕಪ್ಪುಕಾಣಿಕೆ ತಕ್ಕೊಳ್ಳಬೇಕು, ಅವರಿಗೆ ಅಂತರ್ಗತ ಸ್ವಾತಂತ್ರ್ಯ ಕೊಡಬೇಕು. ಹೀಗೆ ರಾಜ ಮತ್ತು ರಾಜ್ಯಗಳಿಗಿಂತ ವಿಸ್ತೃತವಾದ ಸಮ್ರಾಟ್ ಮತ್ತು ಸಾಮ್ರಾಜ್ಯ ಎಂಬ ಕಲ್ಪನೆ ಹುಟ್ಟಿತು. ರಾಜನ ರಾಜ್ಯಾಭಿಷೇಕವು ಮೊದಲಿಂದಲೂ ರೂಢವಾಗಿತ್ತು. ರಾಜ್ಯಾಭಿಷೇಕ ಸಮಾರಂಭವೆಂದರೆ ತನ್ನ ಸತ್ತೆಗೆ ಪ್ರಜೆಗಳ ಮೂಲಕ ಅಥವಾ ಪ್ರಕಟ ಸಮ್ಮತಿಯನ್ನೂ ಹೊರಜಗತ್ತಿನ ಮನ್ನಣೆಯನ್ನೂ ಋಷಿ-ಪುರೋಹಿತರ ಆಶೀರ್ವಾದವನ್ನೂ ಪಡೆಯುವದಕ್ಕೆ ಸಂಧಿಯಾಗಿತ್ತು. ಪಟ್ಟವೇರುವಾಗ ರಾಜರು ತಮ್ಮ ಆಳಿಕೆಯ ಉದ್ದೇಶವನ್ನು ಸಾರಿ ಅದರಂತೆ ಶಪಥಮಾಡುತ್ತಿದ್ದರು. ಸಮಾರಂಭದ ತರುವಾಯ ಅವರು ಪ್ರಜೆಗಳಿಂದ ಬಲಿ, ಶುಲ್ಕ, ಭಾಗ ಇತ್ಯಾದಿ ವಿವಿಧ ಕರಗಳನ್ನು ಹಕ್ಕಿನಿಂದ ಪಡೆಯುತ್ತಿದ್ದರು. ಪರಕೀಯರಿಂದ ತನ್ನ ಗುಂಪಿನ ಮತ್ತು ಪ್ರದೇಶಗಳ ರಕ್ಷಣೆ ಹಾಗೂ ನ್ಯಾಯದಾನ ಇವು ರಾಜನ ಮುಖ್ಯ ಕರ್ತವ್ಯಗಳಾಗಿದ್ದವು; ನ್ಯಾಯದಾನಕ್ಕಾಗಿ ಪ್ರತ್ಯೇಕ ಅಧಿಕಾರಿಯನ್ನು ಅವನು ನಿಯಮಿಸುತ್ತಿದ್ದನು; ಆದರೆ ಕೊನೆಯ ಅಧಿಕಾರ ಅವನದಾಗಿತ್ತು. ಇದಕ್ಕಾಗಿ ಅವನು ಕೈಯಲ್ಲಿ 'ದಂಡ' ಧರಿಸುತ್ತಿದ್ದನು. ರಾಜಸೂಯ, ವಾಜಪೇಯ, ಅಶ್ವಮೇಧ, ಸಾರ್ವಮೇಧ ಮುಂತಾದ ಯಜ್ಞಗಳು ರಾಜರ ಹಿರಿಮೆಯ ದ್ಯೋತಕಗಳಾಗಿದ್ದವು. ಸಮ್ರಾಟನ ಸಹಾಯಕ್ಕೆ ಪುರೋಹಿತ,ಸಂಗ್ರಹಿತೃ (ಕೋಶಾಧ್ಯಕ್ಷ), ತೆರಿಗೆ ಎತ್ತುವವರು, ಸೇನಾನಿ ಹೀಗೆ ಅನೇಕ ಅಧಿಕಾರಿಗಳಿರುತ್ತಿದ್ದರು. ಅವರೆಲ್ಲರನ್ನೂ ರಾಜನೇ ನಿಯಮಿಸುತ್ತಿದ್ದನು. ಗಡಿಯ ಪ್ರಾಂತಗಳ ವ್ಯವಸ್ಥೆ 'ಸ್ಥಪತಿ' ಎಂಬ ಅಧಿಕಾರಿಗೆ ಸೇರಿತ್ತು.

**ರಾಮಾಯಣ ಮಹಾಭಾರತ ಕಾಲ :** ಮಹಾಕಾವ್ಯಗಳ ಕಾಲದಲ್ಲಿ ಮೊದಲಿಗಿಂತ ದೊಡ್ಡ, ದೊಡ್ಡ ರಾಜ್ಯಗಳು ಇದ್ದುದು ಕಂಡುಬರುತ್ತದೆ. ರಾಮಾಯಣ ಕಾಲದಲ್ಲಿಯ ರಾಜರು ಯಜ್ಞಮಾಡುತ್ತಿದ್ದರು; ಬ್ರಾಹ್ಮಣರನ್ನು ಗುರುವೆಂದು ಮನ್ನಿಸುತ್ತಿದ್ದರು; ಋಷಿಗಳ ಸಲಹೆಯಂತೆ ರಾಜ್ಯನಡೆಸುತ್ತಿದ್ದರು. ಪ್ರಜೆಗಳನ್ನು ಮಕ್ಕ

ಳಂತೆ ಪಾಲಿಸುವುದು ಪವಿತ್ರಕರ್ತವ್ಯವೆಂಬ ಭಾವನೆಯಿತ್ತು. ಪ್ರಜೆಗಳ ಕಲ್ಯಾಣಕ್ಕಾಗಿ ರಾಜನು ಸೀತೆಯನ್ನು ಬಿಡಲೂ ಸಿದ್ಧನಾದದ್ದು ಪ್ರಸಿದ್ಧವೇ ಇದೆ. ಜನಕನಂತಹ ರಾಜರು ಸಂಸಾರದಲ್ಲಿ ಅಲಿಪ್ತರಾಗಿ ರಾಜ್ಯವಾಳುತ್ತಿದ್ದರು; ಬ್ರಹ್ಮಚಿಂತನದಲ್ಲಿಯೂ ಧಾರ್ಮಿಕ ಚರ್ಚೆಯಲ್ಲಿಯೂ ಕಾಲಕಳೆಯುತ್ತಿದ್ದರು.

ಮಹಾಭಾರತ ಕಾಲದ ರಾಜರು ಶಸ್ತ್ರಾಸ್ತ್ರವಿದ್ಯೆಯಲ್ಲಿ ಪ್ರವೀಣರಿದ್ದರು. ದೊಡ್ಡ ಸೈನ್ಯ ಅವರಲ್ಲಿರುತ್ತಿತ್ತು. ಕೋಸಲ (ಅಯೋಧ್ಯೆ), ವಿದೇಹ (ಬಿಹಾರ), ಕುರು, ಪಾಂಚಾಲ, ಮತ್ಸ್ಯ, ಗಾಂಧಾರ, ಕಾಂಬೋಜ ಮುಂತಾದ ಅನೇಕ ರಾಜ್ಯಗಳು ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು. ಅವುಗಳಲ್ಲಿ ಯುದ್ಧಗಳಾಗುತ್ತಿದ್ದವು. ಆದರೆ, ಒಬ್ಬರೊಬ್ಬರ ನಾಶಮಾಡುವದಕ್ಕಾಗಿ ಅಲ್ಲ, ಸಾಮ್ರಾಜ್ಯಪದವಿ ಪಡೆಯುವದಕ್ಕಾಗಿ. ರಾಜರು ರಾಜಸೂಯ ಮತ್ತು ಸಮ್ರಾಟರು ಅಶ್ವಮೇಧಯಾಗ ಮಾಡುತ್ತಿದ್ದರು. ರಾಜನು ಪ್ರಜೆಗಳಿಂದ ಕರ ಎತ್ತುತ್ತಿದ್ದನು. ತೆರಿಗೆ ಭೂಮಿಯ ಹುಟ್ಟುವಳಿಯ ಆರರಲ್ಲೊಂದು ಭಾಗವಿತ್ತು. ಧಾನ್ಯರೂಪದಿಂದಾಗಲಿ ಬಂಗಾರರೂಪದಿಂದಾಗಲಿ ಅದನ್ನು ಕೊಡಬಹುದಿತ್ತು. ರಾಜರಲ್ಲಿ ಕಾಲಾಳು, ಕುದುರೆದಳ, ಆನೆದಳ ಮತ್ತು ರಥದಳ—ಹೀಗೆ ಚತುರಂಗ ಸೇನೆ ಇರುತ್ತಿತ್ತು.

**ಗ್ರಾಮಪಂಚಾಯತಿ :** 'ಗ್ರಾಮ'ವೇ ಎಲ್ಲಕ್ಕೂ ಚಿಕ್ಕ ಘಟಕ. ಗ್ರಾಮದ ಆಡಳಿತವನ್ನು ಸಾಗಿಸುವ ಗ್ರಾಮಪಂಚಾಯತಿಗಳು ಪ್ರಾಚೀನಕಾಲದಿಂದಲೂ ನಡೆದುಬಂದಿದ್ದವು; ಈ ಚಿಕ್ಕ ಸಂಸ್ಥೆಗಳು ಮಹಾಭಾರತ ಕಾಲದಲ್ಲಿಯೂ ಮುಂದುವರಿದವು.

**ರಾಜನ ಕೆಲಸಗಳು :** ರಾಜನ ಕರ್ತವ್ಯಗಳನ್ನು ಕುರಿತು ಮಹಾಭಾರತದಲ್ಲಿ ವಿಶೇಷವಾಗಿ ವಿವೇಚಿಸಲಾಗಿದೆ. ಒಮ್ಮೆ ಧರ್ಮರಾಜನ ಕಡೆಗೆ ನಾರದನು ಬಂದಾಗ ಅವನು ಬಹಳ ಮಹತ್ವದ ಪ್ರಶ್ನೆಗಳನ್ನು ಕೇಳಿದನು. "ನಿನ್ನ ಸೇನೆ ವ್ಯವಸ್ಥಿತವಾಗಿದೆಯಷ್ಟೆ? ಯುದ್ಧದಲ್ಲಿ ಮಡಿದ ಸೈನಿಕರ ಹೆಂಡಿರು ಮಕ್ಕಳ ಯೋಗಕ್ಷೇಮವನ್ನು ನೋಡುವೆಯಷ್ಟೆ? ಒಕ್ಕಲುತನಕ್ಕಾಗಿ ಕೆರೆ ಕಾಲುವೆಗಳನ್ನು ಕಟ್ಟಿಸಿರುವೆಯಾ? ನೇಗಿಲನ್ನು ಮಾಡುವವರು ನಿನ್ನ ರಾಜ್ಯನಲ್ಲಿರುವರೇ? ಪ್ರಜೆಗಳನ್ನು ನೀನು ಮಕ್ಕಳಂತೆ ಕಾಪಾಡುವೆಯಾ? ಶತ್ರುವಿನ ಮೇಲೆ ನಾಗಿಹೋಗುವ ಮೊದಲು ಸಾಮ, ದಾನ, ಭೇದ, ದಂಡಗಳಿಂದ ಪ್ರಯತ್ನಿಸುವೆಯಲ್ಲವೆ? ನಿನ್ನ ರಾಜ್ಯದಲ್ಲಿ ಶಿಕ್ಷಕರು ಶಾಸ್ತ್ರವಿದರಿದ್ದಾರೆಯೆ? (ಮಹಾಭಾರತ, ಸಭಾಪರ್ವ–ಅಧ್ಯಾಯ ೫)." ಇದರಿಂದ ಆಗ ರಾಜನಿಗೆ ಎಷ್ಟು ವಿವಿಧಸ್ವರೂಪದ ಕರ್ತವ್ಯಗಳಿದ್ದವೆಂಬುದು ವ್ಯಕ್ತವಾಗುತ್ತದೆ.

ಇದಲ್ಲದೆ ಶಾಂತಿಪರ್ವ, ಅನುಶಾಸನ ಪರ್ವಗಳಲ್ಲಿಯೂ ಶಾಸನಶಾಸ್ತ್ರಕ್ಕೆ ಉಪಯುಕ್ತವಾದ ವಿಚಾರಗಳು ಮಹಾಭಾರತದಲ್ಲಿ ಸಿಕ್ಕುವವು.

**ಬೌದ್ಧಕಾಲದ ಲೋಕರಾಜ್ಯಗಳು:** ಬೌದ್ಧವಾಙ್ಮಯದಲ್ಲಿಯ ಜಾತಕ ಕಥೆಗಳಿಂದ ಆ ಕಾಲದ ಪ್ರಜಾರಾಜ್ಯಗಳ ಸ್ವರೂಪವು ತಿಳಿದುಬರುತ್ತದೆ. ರಾಜಾಧಿಪತ್ಯದ ರಾಜ್ಯಗಳು ಈ ಕಾಲದಲ್ಲಿದ್ದವು ನಿಜ; ಆದರೆ ಪ್ರಜಾರಾಜ್ಯಗಳೊಡನೆ ಗೌತಮ ಬುದ್ಧನ ವಿಶೇಷ ಸಂಬಂಧವುಂಟಾದಂತೆ ತೋರುತ್ತದೆ. ಅವನು ಜನ್ಮವೆತ್ತಿದ ಶಾಕ್ಯ ಕುಲದ ವಸತಿ ಕಪಿಲವಸ್ತುವಿನ ನೆರೆಹೊರೆಯಲ್ಲಿದ್ದಿತು. ಅಲ್ಲಿ ಗಣರಾಜ್ಯವು ಅಸ್ತಿತ್ವದಲ್ಲಿತ್ತು. ಸುಮಾರು ೮೦,೦೦೦ ಕುಟುಂಬಗಳು ಹಳ್ಳಿಗಳಲ್ಲಿ ವಾಸಿಸುತ್ತಿದ್ದವು. ಈ ಹಳ್ಳಿಗಳ ಸಮೂಹದ ರಾಜ್ಯದಾಡಳಿತವು ಈ ಕಾಲದ ತರುಣ ವೃದ್ಧ ನಾಗರಿಕರ ಮಹಾಸಭೆಯ ಕಡೆಗಿತ್ತು. ಮರದ ಬುಡದಲ್ಲಿ ಅಥವಾ ಸಭಾಮಂಟಪದಲ್ಲಿ ಅದರ ಸಭೆಗಳು ಸೇರುತ್ತಿದ್ದವು. ಮತಭೇದವಾದ ಪ್ರಶ್ನೆಗಳನ್ನು ತೀರ್ಮಾನಿಸಲು ಸಮಿತಿಗೆ ಒಪ್ಪಿಸಲಾಗುತ್ತಿತ್ತು. ನಿತ್ಯದ ರಾಜ್ಯಕಾರಭಾರವು ಚುನಾಯಿಸಿದ 'ರಾಜ' ನ ಕೈಲಿರುತ್ತಿತ್ತು. ರಾಜನ ಅವಧಿ ಎಷ್ಟೆಂಬ ಬಗ್ಗೆ ಉಲ್ಲೇಖ ಸಿಕ್ಕುವುದಿಲ್ಲ. ಇಂತಹದೇ ಪ್ರಜಾರಾಜ್ಯವು ಕುಶೀನಾರದ ಮಲ್ಲ, ಮಿಥಿಲೆಯ ವಿದೇಹ, ಮತ್ತು ವೈಶಾಲಿಯ ಲಿಚ್ಛವಿ ಜನಾಂಗದವರಲ್ಲಿಯೂ ಇದ್ದಿತು. ವಿದೇಹ ಮತ್ತು ವೈಶಾಲಿ ಭಾಗಗಳಲ್ಲಿಯ ಜನರ ಸಂಘಗಳ ವರ್ಣನೆಗಳು ಬೌದ್ಧ-ಜೈನ ವಾಙ್ಮಯಗಳಲ್ಲಿ ತುಂಬಾ ಕಂಡು ಬರುತ್ತವೆ.

**ವಿವಿಧತೆ:** ಮೇಲಿನ ರಾಜ್ಯ ಸಂಸ್ಥೆಗಳ ವರ್ಣನೆಗಳಿಂದ ಧಾರ್ಮಿಕ ಮತ ಪಂಥಗಳಂತೆ ರಾಜಕೀಯ ವಿಷಯದಲ್ಲಿಯೂ ಭಾರತದಲ್ಲಿ ವಿವಿಧತೆ ಇದ್ದಿತೆಂಬುದು ಕಂಡುಬರುತ್ತದೆ. ಸಣ್ಣ ರಾಜ್ಯಗಳು, ಸಾಮ್ರಾಜ್ಯಗಳು, ಗಣರಾಜ್ಯಗಳು ಹೀಗೆ ಅನೇಕ ಪ್ರಕಾರದ ರಾಜ್ಯಗಳಿದ್ದವು. ಇವೆಲ್ಲವೂ ವ್ಯವಸ್ಥಿತವಾಗಿಯೂ ಶಾಂತತೆಯಿಂದಲೂ ಆಳಿಕೊಂಡಿದ್ದವೆಂದೇನೂ ಅಲ್ಲ. ಮನುಷ್ಯಸ್ವಭಾವಾನುಸಾರವಾಗಿ ಮಹತ್ವಾಕಾಂಕ್ಷೀ ರಾಜರ ಆಕ್ರಮಕ ವೃತ್ತಿಯಿಂದ ಶಾಂತತಾಭಂಗವು ಮೇಲಿಂದ ಮೇಲೆ ಆಗುತ್ತಿತ್ತು. ಜಗಳ, ಒಡಕು, ವಿಶ್ವಾಸಘಾತ ಮೊದಲಾದವುಗಳಿಂದ ಹಾನಿಯೊದಗುತ್ತಿತ್ತು. ಆದರೂ ಕೂಡ ಗ್ರಾಮಪಂಚಾಯತಿಯ ಪರಂಪರೆಯ ಭದ್ರತೆ ಮತ್ತು ಧರ್ಮಭಾವನೆಯ ಪ್ರಭಾವಗಳಿಂದ ರಾಜನ ದಬ್ಬಾಳಿಕೆಯ ಅತಿಕ್ರಮಣಕ್ಕೆ ನಿರ್ಬಂಧವುಂಟಾಗುತ್ತಿತ್ತು; ಪ್ರಜೆಗಳಿಗೆ ತಮ್ಮ ತಮ್ಮ ಕೆಲಸಬೊಗಸೆ ಮಾಡಿಕೊಂಡಿರಲು ಸಂಧಿ ದೊರೆಯುತ್ತಿತ್ತು.




**ಯುರೋಪಿಯನ್ ರಾಜ್ಯಗಳಷ್ಟು ರಾಜ್ಯಗಳು:** ಬುದ್ಧನ ಕಾಲವೆಂದರೆ ಕ್ರಿ.ಪೂ.ದ ೬ನೆಯ ಶತಕ. ಆಗ ಮಗಧರಾಜ್ಯವು ಊರ್ಜಿತಸ್ಥಿತಿಯಲ್ಲಿತ್ತು. ಅಲ್ಲಿಯ ರಾಜನಾದ ಬಿಂಬಸಾರನು ಬೌದ್ಧ ಧರ್ಮವನ್ನು ಸ್ವೀಕರಿಸಿದನು. ಇನ್ನೂ ಕೆಲವು ರಾಜ್ಯಗಳು ಆ ಕಾಲದಲ್ಲಿದ್ದ ಬಗ್ಗೆ ಉಲ್ಲೇಖಗಳು ತತ್ಕಾಲೀನ ಗ್ರಂಥಗಳಲ್ಲಿವೆ; ಅಂಗ ( ಪಶ್ಚಿಮ ಬಂಗಾಲ), ವಂಗ (ಪೂರ್ವ ಬಂಗಾಲ), ಕಲಿಂಗ ( ಓರಿಸಾ ),

ಅವಂತಿ ( ಮಾಳವ ), ಸೌರಾಷ್ಟ್ರ ( ಕಾಠೇವಾಡ ), ಆಂಧ್ರ ( ದಕ್ಷಿಣ ಭಾರತದ ಮಧ್ಯಭಾಗ ), ಚೋಳ ( ಕಾರೋಮಂಡಲ ), ಚೇರ ಮಲಬಾರ ), ಪಾಂಡ್ಯ ( ಮಧುರೆ ), ಇತ್ಯಾದಿ ರಾಷ್ಟ್ರಗಳಿದ್ದವು. ಇವೆಲ್ಲ–ವಿಶೇಷವಾಗಿ ದಕ್ಷಿಣದ–ರಾಜ್ಯಗಳ ವಿವರವಾದ ಸಂಗತಿಗಳು ಹೆಚ್ಚಾಗಿ ಉಪಲಬ್ಧವಿಲ್ಲ. ನಡುನಡುವೆ ಕತ್ತಲೆಯಲ್ಲಿ ಮಿಂಚು ಮಿನುಗುವಂತೆ ಪ್ರಾಮುಖ್ಯವಾಗಿ ತಿಳಿದಿರುವ ಸಂಗತಿಗಳಿಂದ ತತ್ಕಾಲೀನ ಸ್ಥಿತಿಯ ಮೇಲೆ ಬೆಳಕು ಬೀಳುತ್ತದೆ. ಅಷ್ಟರಿಂದಲೇ ನಾವು, ಈ ರಾಜ್ಯಗಳು ಸದ್ಯದ ಯುರೋಪಿಯನ್ ರಾಷ್ಟ್ರಗಳಿಗಿಂತ ಬಹಳ ಸಣ್ಣವಿರಲಿಲ್ಲವೆಂದು ಅನುಮಾನ ಕಟ್ಟಬಹುದು. ಕಲಿಂಗರಾಜನಲ್ಲಿ ೬೦,೦೦೦ ಮತ್ತು ಆಂಧ್ರರಾಜನ ಬಳಿ ಒಂದು ಲಕ್ಷದ ಕಾಲ್ದಳವಿದ್ದಿತು. ಇದರಿಂದ ಅವುಗಳ ವೈಭವದ ಕಲ್ಪನೆ ಕೆಲಮಟ್ಟಿಗೆ ಆಗುವುದು.

ಇವೆಲ್ಲ ರಾಜ್ಯಗಳೂ ಆರ್ಯರವಲ್ಲ. ಆಗ ಆರ್ಯ–ಅನಾರ್ಯರ ಸಮನ್ವಯವಾಗಿತ್ತು. ಆದುದರಿಂದ ಈ ರಾಜ್ಯಗಳಿಗೆ ಆರ್ಯ ಸಂಸ್ಕೃತಿಯ ರಾಜ್ಯಗಳೆನ್ನದೆ ಹಿಂದು ಸಂಸ್ಕೃತಿಯ ರಾಜ್ಯಗಳೆಂದು ಕರೆಯುವುದು ಲೇಸು.

**ಮೌರ್ಯಪೂರ್ವದ ಮಹತ್ವದ ರಾಜ್ಯ--ಮಗಧ** : ಮೇಲಣ ರಾಜ್ಯಗಳಲ್ಲಿ ಮಗಧವನ್ನು ವಿಶೇಷ ಪ್ರಾಮುಖ್ಯವಾಗಿ ಉಲ್ಲೇಖಿಸುವುದು ಅಗತ್ಯ. ಮಹಾಭಾರತ ಕಾಲದಲ್ಲಿ ಮಗಧದಲ್ಲಿ ಜರಾಸಂಧನು ಆಳುತ್ತಿದ್ದನು. ಆ ತರುವಾಯ ಆಳಿದ ಇಪ್ಪತ್ತಾರು ರಾಜರ ನಾಮಾವಳಿ ಮಾತ್ರ ಸಿಕ್ಕುತ್ತದೆ. ಕ್ರಿ. ಪೂ. ೬ನೆಯ ಶತಕದಲ್ಲಿ ಶಿಶುನಾಗನು ಮಗಧದ ರಾಜನಾಗಿದ್ದನು. ಮುಂದೆ ಆ ಮನೆತನಕ್ಕೆ 'ಶಿಶುನಾಗ ಮನೆತನ' ಎಂದು ಹೆಸರಾಯಿತು. ಶಿಶುನಾಗರ ಐದನೆಯ ರಾಜನಾದ ಬಿಂಬಸಾರನು (ಕ್ರಿ. ಪೂ. ೫೮೨–೫೫೪) ಮಗಧವನ್ನು ಆಳುತ್ತಿದ್ದಾಗ * ಗೌತಮಬುದ್ಧನು ತನ್ನ ಬೌದ್ಧಧರ್ಮವನ್ನು ಮಹಾವೀರ ವರ್ಧಮಾನನು ತನ್ನ ಜೈನಧರ್ಮವನ್ನು ಪ್ರಚಾರಪಡಿಸಲು ಪ್ರಾರಂಭಿಸಿದ್ದರು. ಬಿಂಬಸಾರನ ಮಗ ಅಜಾತಶತ್ರು (ಕ್ರಿ. ಪೂ. ೫೫೪-೫೨೭) ಇವರಿಬ್ಬರನ್ನು ಬಹಳವಾಗಿ ಸನ್ಮಾನಿಸಿದನು. ಅಜಾತಶತ್ರುವಿನ ಮಗ ದರ್ಶಕನು ( ಕ್ರಿ. ಪೂ. ೫೨೭–೫೦೩ ) ಆಳುತ್ತಿದ್ದಾಗ ಇರಾಣದ ಡಾರಿಯಸ್ ರಾಜನು ಸ್ಕಾಯಿಲಕ್ಸ್ ಎಂಬ ಸರದಾರನನ್ನು ಹಿಂದುಸ್ತಾನದ ಮೇಲೆ ದಾಳಿಗೆ ಕಳುಹಿದನು. ಅವನು ಪಂಜಾಬದಿಂದ ಸಿಂಧದ ವರೆಗಿನ ವಾಯವ್ಯ ಗಡಿನಾಡನ್ನು ಗೆದ್ದು

---

* ಮಹಾಭಾರತ ಕಾಲೀನ ಜರಾಸಂಧನಿಂದ ಬಿಂಬಸಾರನ ವರೆಗೆ ಒಟ್ಟು ಮೂವತ್ತು ಮೂರು ರಾಜರಾಗುತ್ತಾರೆ. ಈ ಲೆಕ್ಕದಿಂದ ಜರಾಸಂಧನು ಬಿಂಬಿಸಾರನಿಗಿಂತ ೭-೮ ನೂರು ವರುಷಗಳಷ್ಟಾದರೂ ಹಿಂದಿನವನಿರಬೇಕು. ಈ ಅಂದಾಜಿನ ಮೇಲೆಯೆ ಮಹಾಭಾರತದ ಕಾಲವು ಕ್ರಿ. ಪೂ. ೧೩೦೦ ಎಂದು ನಿಷ್ಕರ್ಷಿಸಿದಂತೆ ತೋರುತ್ತದೆ.

ಇರಾಣ ರಾಜ್ಯಕ್ಕೆ ಕೂಡಿಸಿಕೊಂಡನು. ಆದರೆ ದಾರಿಯಸನ ದೊರೆತನ ಅಲ್ಲಿ ಹೆಚ್ಚು ಕಾಲ ಬಾಳಲಿಲ್ಲ. ಅಜಾತಶತ್ರುವಿನ ತರುವಾಯ ಶಿಶುನಾಗವಂಶದಲ್ಲಿ ದರ್ಶಕ, ಉದಯ, ನಂದಿನ, ಇತ್ಯಾದಿ ರಾಜರಾದರು. ಕ್ರಿ. ಪೂ. ೪೧೩ರಲ್ಲಿ ಶಿಶುನಾಗ ಮನೆತನ ಮುಳುಗಿತು. ನಂದರಾಜರು ಪಟ್ಟಕ್ಕೆ ಬಂದರು. ಮುಂದೆ ತೊಂಬತ್ತು ವರುಷ ನಂದವಂಶದ ಒಂಬತ್ತು ರಾಜರು ರಾಜ್ಯವಾಳಿದರು.

**ಮೌರ್ಯ ಸಾಮ್ರಾಜ್ಯ ಸ್ಥಾಪನೆ:** ಕೊನೆಗೆ ಚಂದ್ರಗುಪ್ತನು ಕೌಟಿಲ್ಯ ಅಥವಾ ಚಾಣಕ್ಯನೆಂಬ ಮುತ್ಸದ್ದಿಯ ನೆರವಿನಿಂದ ಕ್ರಿ. ಪೂ. ೩೨೧ರಲ್ಲಿ ಮಗಧದ ಮೇಲೆ ದಾಳಿ ಮಾಡಿದನು. ಅಲ್ಲಿಯ ಧನಾನಂದನೆಂಬ ರಾಜನನ್ನು ಕೊಂದು, ನಂದರನ್ನು ಉರುಳಿಸಿ, ಅವನು ಮಗಧ ದೇಶದ ರಾಜನಾದನು. ಮುಂದೆ ಕ್ರಿ. ಪೂ. ೩೦೫ರ ವರೆಗೆ ಬಹುಮಟ್ಟಿಗೆ ಉತ್ತರಹಿಂದುಸ್ಥಾನವೆಲ್ಲವನ್ನು ಸ್ವಾಧೀನಪಡಿಸಿಕೊಂಡು ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಐತಿಹಾಸಿಕ ಕಾಲದಲ್ಲಿ ಇದು ಮೊದಲನೆಯ ದೊಡ್ಡ ಸಾಮ್ರಾಜ್ಯವು. ಅದರ ಬಗೆಗೆ ಮುಂದೆ ವಿವರಿಸಲಾಗಿದೆ.

**ಸಮಾಜ ಸ್ಥಿತಿ:** ಈ ಕಾಲದಲ್ಲಿಯ ರಾಜಕೀಯ ಕ್ಷೇತ್ರದಲ್ಲಿಯ ಆಂದೋಲನವನ್ನು ವರ್ಣಿಸಿದ ಬಳಿಕ ಆಗಿನ ಸಾಮಾಜಿಕ ಸ್ಥಿತಿಯತ್ತ ಹೊರಳುವಾ. ಆರ್ಯ-ಅನಾರ್ಯರ ಸಂಪರ್ಕವು ಈ ಕಾಲದಲ್ಲಿ ದೊಡ್ಡ ಪ್ರಮಾಣದಲ್ಲಿ ನಡೆಯಿತು. ಸಂಸ್ಕೃತಿ ಪ್ರಚಾರಕ್ಕಾಗಿ ಹಿಂದುಸ್ತಾನದಲ್ಲೆಲ್ಲ ಪಸರಿಸಿ ಆರ್ಯರು ಅಲ್ಲಿಯ ಜನರೊಡನೆ ಸಂಬಂಧ ಬೆಳೆಸುವುದು ಅವಶ್ಯವಾಯಿತು. ಅವರು ಆರ್ಯ ಸಂಸ್ಕೃತಿಯನ್ನು ಸ್ವೀಕರಿಸಿದ ಮೇಲೆ ಇಬ್ಬರಲ್ಲಿ ಶರೀರಸಂಬಂಧಗಳೂ ನಡೆದವು. ಇದರಿಂದ ಸಮಾಜ ನಿಯಮದಲ್ಲಿ ಹಲವು ತೊಡಕಿನ ಸಮಸ್ಯೆಗಳು ಎದ್ದವು. ಶುದ್ಧ ಆರ್ಯರಕ್ತದ ಜನರು ಇತರರಿಗಿಂತ ತಾವು ಶ್ರೇಷ್ಠರೆಂದು ಬಗೆದರು. ಅವರು ತಮ್ಮ ವ್ಯವಹಾರವನ್ನು ಇತರರಿಂದ ಬೇರೆಯಾಗಿಟ್ಟುಕೊಂಡರು. ರಕ್ತದ ಶುದ್ಧಾಶುದ್ಧತೆಯ ಹೆಚ್ಚುಕಡಿಮೆ ಪ್ರಮಾಣಾನುಸಾರವಾಗಿ ಶ್ರೇಷ್ಠತೆ ಕನಿಷ್ಠತೆಗಳನ್ನು ಅಳೆಯತೊಡಗಿದರು. ಸಮಾಜ ನಿಯಮದಲ್ಲಿ ವಿಷಮತೆ ತಲೆದೋರಿತು. ಒಂದಕ್ಕಿಂತ ಒಂದು ಭಿನ್ನವಾದ ಜಾತೀಯ ವರ್ಗಗಳು ಹುಟ್ಟಿಕೊಂಡವು. ವೃತ್ತಿಯಿಂದ ನಿರ್ಣಯವಾಗುತ್ತಿರುವ ಇಂದಿನ ಅನೇಕವಿಧ ಜಾತಿ ಉಪಜಾತಿಗಳು ಆ ಕಾಲದಲ್ಲಿ ಹುಟ್ಟಿದ್ದಿಲ್ಲ ನಿಜ; ಆದರೆ ಮೊದಲು ಕೇವಲ ಗುಣ ಕರ್ಮಾನುಸಾರವಾಗಿ ಮಾಡುತ್ತಿದ್ದ ಸಮಾಜದ ವರ್ಗೀಕರಣದಲ್ಲಿ ರಕ್ತದ ಶುದ್ಧಾಶುದ್ಧತೆಯಿಂದುಟಾಗುವ ಜಾತಿಭೇದವೊಂದು ಭರತಿಯಾಯಿತು. ಚಾತುರ್ವರ್ಣ್ಯಕ್ಕೆ ಜಾತಿಭೇದದ ಬಣ್ಣವೇರಿತು.

**ಆರ್ಥಿಕ ಜೀವನ:** ದೇಶದಲ್ಲೆಲ್ಲ ಆರ್ಯರ ಪ್ರಸಾರವಾಗುತ್ತಿರುವಾಗ ದೇಶದ ಸಾಂಪತ್ತಿಕ ಸ್ಥಿತಿ ಭರದಿಂದ ಸುಧಾರಿಸುತ್ತಿತ್ತು. ಅವರ ಆರ್ಥಿಕ

ಜೀವನವು ದಿನದಿನಕ್ಕೆ ಸುಸಂಘಟಿತವಾಗುತ್ತಿತ್ತು. ಬರೀ ಒಕ್ಕಲುತನದಿಂದ ಅಥವಾ ಗೋಧನದಿಂದ ಜನರ ಚರಿತಾರ್ಥವು ಸಾಗುತ್ತಿರಲಿಲ್ಲ. ನಿರ್ವಾಹ ಸಾಧನಗಳಲ್ಲಿ ವಿವಿಧತೆ ಉತ್ಪನ್ನವಾಯಿತು. ಶ್ರಮವಿಭಾಗ ತತ್ತ್ವದ ಮೇರೆಗೆ ಅದರ ವಿಭಜನೆಯಾಯಿತು. ಕಮ್ಮಾರ, ಕುಂಬಾರ, ಬಡಿಗ, ಅಕ್ಕಸಾಲಿ, ತೋಟಿಗ ಮುಂತಾದ ಹದಿನೆಂಟು ಪಂಗಡಗಳು ತಮ್ಮ ತಮ್ಮ ಕಸಬು ಮಾಡತೊಡಗಿದವು. ಈ ಪ್ರತಿಯೊಂದು ಕಸಬಿನವರ ಒಂದೊಂದು ಸಭೆಯಿರುತ್ತಿತ್ತು. ಅವರಲ್ಲಿ ಪಂಚರ ಮತ್ತು ಸರಪಂಚನ ಆಯಿಕೆಯಾಗುತ್ತಿತ್ತು. ಆ ಕಸಬಿನ ನಿಯಮನ ಮಾಡುವುದು ಅವರ ಕೆಲಸ. ಯಾವ ಧಂದೆಯಲ್ಲಿಯೂ ಉಮೇದವಾರನಾಗಿ ಸೇರುವ ಬಗ್ಗೆ ಕೆಲವು ನಿಯಮಗಳಿದ್ದವು. ತಮ್ಮ ತಮ್ಮ ಉದ್ದಿಮೆಯಿಂದ ಜೀವಿಸುವವರು ಉದ್ಯಮದ ನಿಯಮಗಳನ್ನು ಪಾಲಿಸಬೇಕಾಗುತ್ತಿತ್ತು. ಕೆಟ್ಟ ವಸ್ತುಗಳನ್ನು ಒದಗಿಸುವವರ ಬಗ್ಗೆ ಸಭೆಯು ಕಡೆಗೆ ದೂರಿಕೊಳ್ಳಬಹುದಾಗಿತ್ತು. ಎಷ್ಟೋ ದೊಡ್ಡ ನಗರಗಳಲ್ಲಿ ಆಯಾ ಕಸಬಿನವರ ಪೇಟೆಗಳಿರುತ್ತಿದ್ದವು. ಈ ರೀತಿಯಾಗಿ ಕಮ್ಮಾರ ಓಣಿ, ಶಿಂಪಿಗರ ಓಣಿ, ಕಂಚುಗಾರರ ಓಣಿ ಮತ್ತು ಆನಂತರದ ಕಾಲದಲ್ಲಿ ಕಾಗದೀಪುರ-ಹೀಗೆ ನಗರ ವಿಭಾಗಗಳು ಉಂಟಾದವು. ಉದ್ಯೋಗದಲ್ಲಿ ಮಾತ್ರವಲ್ಲ, ವ್ಯಾಪಾರದಲ್ಲಿಯೂ ಇಂತಹ ಸಾಮುದಾಯಿಕ ನಿಯಂತ್ರಣವಿತ್ತು. ವ್ಯಾಪಾರಿಗಳ ಮುಖ್ಯನಿಗೆ ಶ್ರೇಷ್ಠಿ ಎಂದು ಹೆಸರಿತ್ತು. (ಇದರಿಂದಲೇ ಕನ್ನಡದಲ್ಲಿಯ ಸೆಟ್ಟಿ, ಗುಜರಾತದಲ್ಲಿಯ ಶೇಠಜಿ ಶಬ್ದಗಳು ಬಂದಿವೆ.) ಪರದೇಶದೊಡನೆ ವ್ಯಾಪಾರ ನಡೆಯುತ್ತಿತ್ತು. ಒಂದೊಂದು ಹಡಗಿನಲ್ಲಿ ನೂರುಮಂದಿ ಪ್ರಯಾಣ ಮಾಡುತ್ತಿದ್ದರು. ಹತ್ತಿರದ ಜಾವಾ, ಲಂಕಾ, ಮೊದಲಾದಕಡೆ ವ್ಯಾಪಾರ ಮಾಡಿಕೊಂಡು ಮರಳುತ್ತಿದ್ದರು. ಉದ್ಯೋಗದವರ ಹಾಗೂ ವ್ಯಾಪಾರಿಗಳ ಸಭೆಗಳು ಕೈಕೊಂಡ ನಿಯಮಗಳನ್ನು ರಾಜರು ಮನ್ನಿಸುತ್ತಿದ್ದರು. ರಾಜರು ತಮ್ಮ ಕಡೆ ಬರುವ ದೂರುಗಳನ್ನು ವಿಚಾರಿಸುವ ಮೊದಲು, ಆ ಬಗ್ಗೆ ಪಂಚಾಯತಿಯ ತೀರ್ಮಾನವೇನಾಗಿದೆಯೆಂದು ನೋಡುತ್ತಿದ್ದರು. ಪಂಚರ ನಿರ್ಣಯಕ್ಕೆ ಒಪ್ಪಿಗೆ ಕೊಡುವ ಕಡೆ ಅವರ ಒಲವಿರುತ್ತಿತ್ತು. ಹೀಗೆ ಪಂಚಾಯತಿ ವ್ಯವಸ್ಥೆ ಲೋಕಮಾನ್ಯತೆಯನ್ನೂ ರಾಜಮಾನ್ಯತೆಯನ್ನೂ ಪಡೆದಿದ್ದುದರಿಂದ ಅವುಗಳ ಮೂಲಕ ಸಮಾಜವು ಹೇಗೆ ಸಂಘಟಿತವಾಗಿರಬಹುದೆಂಬುದುದರ ಕಲ್ಪನೆ ಬರುವಂತಿದೆ. ಕಾಲಾಂತರದಲ್ಲಿ ಈ ಕಸುಬುಗಾರರು ಈಗಿನ ಅರ್ಥದಲ್ಲಿ ಜಾತಿಬದ್ಧರಾಗುತ್ತ ಬಂದರು.

**ಧರ್ಮ:** ವೇದ ಮತ್ತು ಅವುಗಳ ಮೇಲಿನ ಟೀಕೆಗಳ ವಿಸ್ತಾರವು ಹೆಚ್ಚಿತು. ಮುದ್ರಿಸುವ ಕಲೆ ಗೊತ್ತಿಲ್ಲದುದರಿಂದ ಎಲ್ಲ ವಿದ್ಯೆಗಳನ್ನು ಬಾಯಿಪಾಠ ಮಾಡುವುದೇ ರೂಢಿಯಾಗಿತ್ತು. ಅದಕ್ಕಾಗಿ 'ಸೂತ್ರ'ಗಳು ಹುಟ್ಟಿದವು. ಅವುಗಳ ಸಹಾಯದಿಂದ ದೊಡ್ಡ ದೊಡ್ಡ ಮಂತ್ರಗಳನ್ನು ನೆನಪಿನಲ್ಲಿಡುವುದು ಸುಲಭವಾಯಿತು. ವಿದ್ಯಾರ್ಥಿದೆಶೆಯಲ್ಲಿ ಈ ಸೂತ್ರಗಳನ್ನು ಕಲಿಸಲಾಗುತ್ತಿತ್ತು. ಎಲ್ಲ ವಿದ್ಯೆಗಳನ್ನು

ಗುರುಮುಖದಿಂದ ಕೇಳಿ ಮುಖೋದ್ಗತ ಮಾಡಿಕೊಳ್ಳುತ್ತಿದ್ದರು. ಈ ಪದ್ಧತಿಯೇ ಇಂದಿನವರೆಗೂ ಸಾಗಿಬಂದಿರುವುದರಿಂದ, ಎರಡೂವರೆಸಾವಿರ ವರುಷಗಳಲ್ಲಿ ಈ ವಿದ್ಯೆಗಳು ಅನೇಕ ಸ್ಥಿಂತ್ಯರಗಳಲ್ಲಿ ಹಾಯ್ದು ಉಳಿದು ಬಂದಿವೆ.

## ಪ್ರಶ್ನೆಗಳು

೧. 'ಸಮ್ರಾಟ' ಕಲ್ಪನೆಯು ಯಾವಾಗ ಉದಯಿಸಿರಬಹುದು? ಅದರ ಅರ್ಥವೇನು?

೨. ಮಹಾಭಾರತ ಕಾಲದಲ್ಲಿ 'ರಾಜ'ನ ಕರ್ತವ್ಯಗಳು ಯಾವುವೆಂದು ತಿಳಿಯಲಾಗಿತ್ತು?

೩. ಟಿಪ್ಪಣಿ ಬರೆಯಿರಿ :— ಮೌರ್ಯಪೂರ್ವಕಾಲದ ಆರ್ಥಿಕ ಜೀವನ; ನಂದರ ರಾಜ್ಯ; ಬೌದ್ಧಕಾಲೀನ ಲೋಕ ರಾಜ್ಯಗಳು.

# ೨. ಗ್ರೀಸ ಭಾರತ ಸಂಘರ್ಷ

**ಅಲೆಕ್ಝಾಂಡರನ ದಂಡಯಾತ್ರೆ :** ಮೌರ್ಯರಾಜ್ಯದ ಸ್ಥಾಪನೆಗೆ ಮೊದಲು, ಎಂದರೆ ಮಗಧದಲ್ಲಿ ಕೊನೆಯ ನಂದ ಮಹಾಪದ್ಮಾನಂದನು ರಾಜ್ಯವಾಳುತ್ತಿದ್ದಾಗ ಮೆಸಿಡೋನಿಯದ ಪರಾಕ್ರಮಿ ರಾಜನಾದ ಅಲೆಕ್ಝಾಂಡರನು ಭಾರತದ ಮೇಲೆ ಸಾಗಿಬಂದನು. ಆ ವೃತ್ತಾಂತವು ಮಹತ್ವದ್ದಾಗಿದೆ. ಕ್ರಿ. ಪೂ. ೩೨೯ರಲ್ಲಿ ಅವನು ಕಾಬೂಲದ ವರೆಗೆ ಬಂದು ಮರಳಿಹೋದನು. ಮುಂದೆ ಎರಡು ವರುಷಗಳ ಮೇಲೆ ಕ್ರಿ. ಪೂ. ೩೨೭ರ ಬೇಸಿಗೆಯಲ್ಲಿ ಭಾರತದ ವಾಯುವ್ಯ ಸೀಮೆಯ ಆಚೆ ಬಂದನು. ಇಪ್ಪತ್ತೈದರಿಂದ ಮೂವತ್ತು ಸಾವಿರದಷ್ಟು ಅವನ ಸೈನ್ಯವಿತ್ತು. ಅದರಲ್ಲಿ ಅಶ್ವದಳವು ವಿಶೇಷವಾಗಿತ್ತು. ಸಿಂಧುನದಿಯನ್ನು ದಾಟುವ ಮೊದಲು ಅವನು ಅಲ್ಲಿಯ ಗುಡ್ಡಗಾಡಿನ ತಂಡಗಳನ್ನು ಹತೋಟಿಗೆ ತಂದುಕೊಂಡನು. ಇಲ್ಲದಿದ್ದರೆ, ತಾನು ಭಾರತದಲ್ಲಿ ನುಗ್ಗಿದ ಮೇಲೆ ಆ ಜನಗಳಿಂದ ತನ್ನ ದೇಶದೊಡನಿದ್ದ ಸಂಬಂಧ ತಪ್ಪುವ ಭಯವಿತ್ತು.

**ಅಂಭಿಯ ನೆರವು :** ಬಳಿಕ ಮುಂದಿನ ವರುಷ ಬೇಸಿಗೆಯಲ್ಲಿ ಅಟಕದ ಉತ್ತರಕ್ಕೆ ೧೬ ಮೈಲುಗಳ ಮೇಲೆ ಓಹಿಂದ ಎಂಬ ಊರ ಬಳಿ ಅವನು ಸಿಂಧುವನ್ನು ದಾಟಿ, ತಕ್ಷಶಿಲೆಯ* ರಾಜ್ಯವನ್ನು ಪ್ರವೇಶಿಸಿದನು. ಪಂಜಾಬದಲ್ಲಿ ಆಗ ಅನೇಕ

---

* ತಕ್ಷಶಿಲೆ ಅಥವಾ ತಕ್ಷಿಲೆ ಎಂಬುದು ಈಗಿನ ರಾವಳಪಿಂಡಿಯ ವಾಯುವ್ಯದಲ್ಲಿ ಸುಮಾರು ೧೦ ಮೈಲುಗಳ ಮೇಲಿದೆ. ಸುಮಾರು ಇಪತ್ತು ವರುಷಗಳ ಹಿಂದೆ ಪುರಾಣವಸ್ತುಸಂಶೋಧನ ಶಾಖೆಯವರು ನಡೆಸಿದ ಸಂಶೋಧನೆಯ ಉತ್ಖನನದಲ್ಲಿ ತಕ್ಷಿಲಾ ನಗರದ ಅನೇಕ ಅವಶೇಷಗಳು ಅಲ್ಲಿ ಸಿಕ್ಕವು.

ಸಣ್ಣ ಸಣ್ಣ ರಾಜ್ಯಗಳಿದ್ದವು; ರಾಜರು ಒಬ್ಬರಿಗೊಬ್ಬರು ಹಗೆಗಳಾಗಿದ್ದರು. ತಕ್ಷಶಿಲೆಯ ಅಂಭಿರಾಜನಿಗೂ ನೆರೆಯ ಝೀಲಮ್-ಚಿನಾಬ ನದಿಗಳ ನಡುವಿನ ನಾಡಿನ ಪೌರವ (ಪೋರಸ) ದೊರೆಗೂ ನೆಟ್ಟಗಿರಲಿಲ್ಲ. ಆದುದರಿಂದ ಅಂಭಿರಾಜನು ಅಲೆಕ್ಝಾಂಡರನೊಡನೆ ಯುದ್ಧಮಾಡುವುದು ಬಿಟ್ಟು ಅವನನ್ನು ಸತ್ಕರಿಸಿದು; ಮತ್ತು ಪೌರವನೊಡನೆ ಕಾದುವುದಕ್ಕಾಗಿ ಐದುಸಾವಿರ ಸವಾರರನ್ನು ಅವನಿಗೆ ಕೊಟ್ಟನು. ಅಲೆಕ್ಝಾಂಡರನು ತಕ್ಷಿಲೆಯಲಿ ಉಳಿದುಕೊಂಡು ನೆರೆಹೊರೆಯ ರಾಜರಿಗೆ ತನಗೆ ಶರಣುಬರುವಂತೆ ಓಲೆಕಳಿಸಿದನು. ವೈಭವಶಾಲಿಯಾದ ತಕ್ಷಿಲೆ ವೇದವಿದ್ಯೆಯ ಆಗರವಾಗಿತ್ತು. ಅದರ ಹತ್ತಿರದ ಅರಣ್ಯದಲ್ಲಿ ಅನೇಕ ಯೋಗಿಗಳು ಇದ್ದಾರೆಂದು ಅವನು ಕೇಳಿದನು. ಸರದಾರರ ಮುಖಾಂತರವಾಗಿ ಅವರ ಬಗ್ಗೆ ವಿಚಾರಿಸಿ, ಅವರ ವಿದ್ಯೆಯನ್ನು ತಿಳಿದುಕೊಳ್ಳುವ ತನ್ನ ಅಪೇಕ್ಷೆಯನ್ನು ತಿಳಿಸಿದನು. ಅವರೊಳಗಿನ ಒಬ್ಬನನ್ನು ತನ್ನೊಡನೆ ಬರುವಂತೆ ಕೇಳಿಕೊಂಡನು. ಆದರೆ ಆ ಯೋಗಿ ಹಚ್ಚಿಕೊಳ್ಳಲಿಲ್ಲ. ಅಲೆಕ್ಝಾಂಡರನು ಅತಿಪ್ರಯಾಸದಿಂದ ಒಬ್ಬ ಯೋಗಿಯನ್ನು ಒಪ್ಪಿಸಿದನು. ಆದರೆ ಅವನು ಅಲೆಕ್ಝಾಂಡರನು ದಂಡಯಾತ್ರೆಯಲ್ಲಿರುವಷ್ಟು ಕಾಲಮಾತ್ರ ಅವನೊಡನಿದ್ದನು. ಅಲೆಕ್ಝಾಂಡರನು ಇರಾಣಕ್ಕೆ ಹೋದೊಡನೆ ಆ ಯೋಗಿ, ಇರಾಣದ ಬಾದಶಾಹನಾದ ನಾಯರಸನ ಸಮಾಧಿಯ ಹತ್ತಿರ ಚಿತಾಪ್ರವೇಶಮಾಡಿದನು. ಅಲೆಕ್ಝಾಂಡರನು ತಕ್ಷಿಲೆಯಿಂದ ಪೂರ್ವಕ್ಕೆ ಸಾಗಿದನು.

**ಪೌರವನೊಡನೆ ಯುದ್ಧ**: ಪೌರವರಾಜನು ಅಲೆಕ್ಝಾಂಡರನಿಗೆ ಶರಣು ಹೋಗಲಿಲ್ಲ. ಅಂಭಿಯ ಸಹಾದಿಂದ ಅವನ ಮೇಲೆ ದಾಳಿಮಾಡಲು ಅಲೆಕ್ಝಾಂಡರನು ನಿರ್ಧರಿಸಿದನು ಪೌರವನು ಸನ್ನದ್ಧನಾಗಿ ತನ್ನ ರಾಜ್ಯದ ಗಡಿಯಲ್ಲಿ ಝೀಲಮ್ (ಇದಕ್ಕೆ ತತ್ಕಾಲೀನ ಪಾಶ್ಚಾತ್ಯ ಗ್ರಂಥಕಾರರು ಹಿಡೆಸ್ಪಿಸ್ ಎಂದಿದ್ದಾರೆ.) ನದಿಯ ಎಡದಂಡೆಯಲ್ಲಿ ಬೀಡುಬಿಟ್ಟನು. ಅಲೆಕ್ಝಾಂಡರನು ಬಲದಂಡೆಯಲ್ಲಿದ್ದನು. ನಡುವೆ ಝೀಲಂ ನೆರೆಬಂದು ಭೋರ್ಗರೆಯುತ್ತಿತ್ತು. ಎಷ್ಟೋ ದಿವಸ ಎರಡೂ ಸೈನ್ಯಗಳು ಇದಿರು ಬದಿರು ಹಾಗೇ ತಂಗಿದ್ದವು. ಮುಂದೆ ಒಂದು ದಿನ ಅಲೆಕ್ಝಾಂಡರನು ನದಿಯ ಉಗಮದ ಕಡೆಗೆ ೨೦ ಮೈಲು ಹೋಗಿ ಅಲ್ಲಿ ಪ್ರವಾಹ ಇಳಿದುದನ್ನು ನೋಡಿದನು. ಅಲ್ಲಿ ಅವನು ಸಸೈನ್ಯವಾಗಿ ನದಿಯನ್ನು ದಾಟಿ ಪೌರವನಿಗೆ ಇದಿರಾದನು. ಪೌರವನಲ್ಲಿ ಕೆಲವು ಆನೆಗಳಿದ್ದವು; ಅವನ ಕುದುರೆದಳ ಮಾತ್ರ ಅಲೆಕ್ಝಾಂಡರನ ಕುದುರೆದಳಕ್ಕಿಂತ ಸಣ್ಣದಿತ್ತು. ಎರಡೂ ಸೈನ್ಯಗಳಲ್ಲಿ ಘೋರ ಕದನವಾಗಿ ಅಲೆಕ್ಝಾಂಡರನು ಗೆದ್ದನು. ಯುದ್ಧಾನಂತರ ಪೌರವನು ಅಲೆಕ್ಝಾಂಡರನ ಆಧಿಪತ್ಯವನ್ನು ಒಪ್ಪಿದ್ದರಿಂದ, ಅವನ ರಾಜ್ಯವನ್ನು ಅಲೆಕ್ಝಾಂಡರನು ಅವನಿಗೆ ಮರಳಿಕೊಟ್ಟನು.

**ಅಲೆಕ್ಝಾಂಡರನು ಮರಳಿದನು**: ಬಳಿಕ ಅಲೆಕ್ಝಾಂಡರನು ಇನ್ನೂ ಪೂರ್ವಕ್ಕೆ ಮುಂದುವರೆದನು. ಸತಲಜದ ವರೆಗೆ ಪಂಜಾಬದ ಎಲ್ಲ ನದಿಗಳನ್ನು

ಅವನು ದಾಟಿದನು. ಮಗಧರಾಜ್ಯದ ಕೀರ್ತಿಯನ್ನು ಅವನು ಕೇಳಿದ್ದನು. ಅಲ್ಲಿಗೆ ಹೋಗುವ ಮನಸೂ ಅವನಿಗಿತ್ತು. ಗಂಗೆಯ ದಡದ ರಾಜ್ಯಗಳು ಪಂಜಾಬ ರಾಜ್ಯಗಳಿಗಿಂತ ದೊಡ್ಡವಿದ್ದವು. ಮಗದವಂತೂ ಆ ಕಾಲದಲ್ಲಿ ಅತ್ಯಂತ ಬಲಿಷ್ಠವಿತ್ತು. ಆಗ ಅಲೆಕ್ಝಾಂಡರನು ಅವರೊಡನೆ ಯುದ್ಧಕ್ಕೆ ಬಂದಿದ್ದರೆ ಬಹುಶಃ ಅವನ ಬೇಳೆ ಬೇಯುತ್ತಿರಲಿಲ್ಲ. ಈಗಲೇ ಅವನು ತನ್ನ ದೇಶದಿಂದ ೩೦೦೦ ಮೈಲು ದೂರ ಬಂದಿದ್ದನು; ದಂಡಯಾತ್ರೆ ಕೈಕೊಂಡು ಎರಡೂವರೆ ವರುಷವಾಗಿತ್ತು. ಅವನ ರಾಜ್ಯದಲ್ಲಿ ಬಂಡಾಯದ ಭೀತಿಯಿತು. ಕಂದಹಾರದಲ್ಲಿ ಬಂಡೆದ್ದ ಸುದ್ದಿಯೂ ಬಂದಿತ್ತು. ಇಲ್ಲಿಯ ಹವೆ ಅತಿ ಉಷ್ಣವಾಗಿತ್ತು. ಎಲ್ಲಕ್ಕೂ ಮಹತ್ವದ ಮಾತೆಂದರೆ, ಅವನ ಸೈನಿಕರು ಬೇಸತ್ತಿದ್ದರು. ಅವನೊಡನೆ ಮುಂಬರಿಯಲು ಅವರೊಪ್ಪಲಿಲ್ಲ. ಆದ್ದರಿಂದ ಅವನು ತಿರುಗಿ ಹೋಗಬೇಕೆಂದು ನಿರ್ಧರಿಸಿದನು. (ಕ್ರಿ. ಪೂ ೩೨೬) ಈಗ ಅವನು ಬಂದ ದಾರಿಯಿಂದ ಮರಳದೆ, ಝೆಲಮ್ ನದಿಯ ಮೂಲಕ ಜಲಮಾರ್ಗವಾಗಿ ದಕ್ಷಿಣಕ್ಕೆ ಸಿಂಧುವಿನ ವರೆಗೆ, ಅಲ್ಲಿಂದ ಅದರ ಮುಖದ ವರೆಗೆ, ಮುಂದೆ ಸಮುದ್ರಮಾರ್ಗವಾಗಿ ದಂಡೆಗುಂಟ ಇರಾಣದ ಆಖಾತದ ವರೆಗೆ ಹೋದನು. ಕ್ರಿ.ಪೂ. ೩೨೩ ಜೂನ್ ತಿಂಗಳಲ್ಲಿ ಬಾಬಿಲೋನಿನಲ್ಲಿ ಅಲೆಕ್ಝಾಂಡರನು ಮರಣಹೊಂದಿದನು.



ಪೌರವ ಯುದ್ಧಸ್ಮೃತಿಯೆಂದು ಸಿಕಂದರನು ಈ ಮುದ್ರಿಕೆಯನ್ನು ನಿರ್ಮಿಸಿದನು ಕುದುರೆಯ ಸವಾರನು ಆನೆಯ ಮೇಲಿನವರನ್ನು ಅಟ್ಟುತ್ತಿರುವ ದೃಶ್ಯವು ಇದರಲ್ಲಿ ಚಿತ್ರಿತವಾಗಿದೆ.

**ಅವನ ದಂಡಯಾತ್ರೆಯ ಬಗ್ಗೆ ಸಾಮಾನ್ಯವಿಚಾರ :** ಸಿಕಂದರ ದಂಡಯಾತ್ರೆಯೆಂದರೆ ಆಶಿಯಾ–ಯುರೋಪಗಳ ಇತಿಹಾಸಗಳನ್ನು ಜೋಡಿಸುವ, ಖಂಡಿತ ಗೊತ್ತಾಗಿರುವ ಮೊದಲನೆಯ ಸೇತುವೆಯಾಗಿದೆ.* ಈ ದಂಡಯಾತ್ರೆಯ ಬಗ್ಗೆ ಗ್ರೀಕ

* ಭಾರತದ ಮೇಲೆ ದಾಳಿಮಾಡಿದ ಅಲೆಕ್ಝಾಂಡರನು ಮೊದಲನೆಯ ಗ್ರೀಕರಾಜನಲ್ಲ. ಭಾರತದ ಗಡಿಯಲ್ಲಿ ಹಿಂದುಕುಶದ ಅಡಿಯಲ್ಲಿ ನಿಸಾ ಎಂಬ ಊರಿಗೆ ಅಲೆಕ್ಝಾಂಡರನು ಬಂದಾಗ ಅಲ್ಲಿಯ ಜನರು ಅವನಿಗೆ, “ ನಾವು ನಿಮ್ಮ ಒಡಹುಟ್ಟಿದವರೇ ಆಗಿದ್ದೇವೆ. ಬಹು ಪ್ರಾಚೀನ ಕಾಲದಲ್ಲಿ ಡಾಯೋನಿಶಸ್ ಎಂಬ ಗ್ರೀಕರಾಜನು ಭಾರತದ ಮೇಲೆ ದಾಳಿಮಾಡಿದನು. ಅವನೊಂದಿಗೆ ಬಂದಿದ್ದ ನಮ್ಮ ಪೂರ್ವಜರು ಇಲ್ಲಿಯೆ ನೆಲಿಸಿದರು. ” ಎಂದು ಹೇಳಿದರಂತೆ. ಯುದ್ಧಸಂಕಟವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಅವರು ಈ ಆಪ್ತತ್ವ ಹಚ್ಚಿರಬೇಕೆಂಬುದು ಕೆಲವರ ಅಭಿಪ್ರಾಯವಿದೆ. ಆದರೆ ಪ್ರಾಚೀನ ಗ್ರೀಕ ಪುರಾಣಗಳಲ್ಲಿ ಡಾಯೊನಿಶಸ್ಸನು ಭಾರತದ ಮೇಲೆ ದಾಳಿಮಾಡಿದ ವರ್ಣನೆ ಬಂದಿದೆ. ಅವನು ವಿಜಯ ಸಂಪಾದಿಸಿದ ಮೇಲೆ ಇಲ್ಲಿ ಒಬ್ಬ ಪ್ರತಿನಿಧಿಯನ್ನು ಇಟ್ಟುಹೋದನು. ಅಂದಿನಿಂದ ಚಂದ್ರಗುಪ್ತ ಮೌರ್ಯನ ( ಕ್ರಿ. ಪೂ. ೩೨೧ ) ವರೆಗೆ ೬೪೫೧ ವರ್ಷಗಳ ಪ್ರದೀರ್ಘ ಕಾಲಾವಧಿಯಲ್ಲಿ ಭಾರತದಲ್ಲಿ ಒಟ್ಟು೧೫೩ರಾಜರು ಆಗಿ ಹೋದರು. ಚಂದ್ರಗುಪ್ತನ ಆಸ್ಥಾನಕ್ಕೆ ಬಂದಿದ್ದ ಮೇಗಾಸ್ಥಿನೀಸನಿಗೆ ಈ ರಾಜರ ಯಾದಿಯನ್ನು ರಾಜನು ಕೊಟ್ಟನೆಂದು ಉಲ್ಲೇಖವಿದೆ. ಆದರೆ ಆ ಯಾದಿ ಮಾತ್ರ ಇಂದು ಎಲ್ಲಿಯೂ ಸಿಕ್ಕುತ್ತಿಲ್ಲ.

ಇತಿಹಾಸಕಾರರು ವಿವರವಾಗಿ ಬರೆದಿಟ್ಟ ವರ್ಣನೆಗಳ ಹೊರತಾಗಿ ಈ ಕಾಲದ ಇತಿಹಾಸವನ್ನು ಹೊಂದಿಸುವುದು ಬಹಳ ಕಠಿಣವಾಗುತ್ತಿತ್ತು. ಪಾಶ್ಚಾತ್ಯ ಇತಿಹಾಸಕಾರರು ಈ ದಾಳಿಗೆ ಬಹಳ ಮಹತ್ವ ಕೊಡುತ್ತಾರೆ. ಆದರೆ ಮುಂದಿನ ಕಾಲದಲ್ಲಾದ ತೈಮೂರಲಂಗನ ಅಥವಾ ನಾದೀರಶಾಹನ ದಾಳಿಗಳಿಗಿಂತ ಇದಕ್ಕೆ ಮಹತ್ವ ಹೆಚ್ಚಿಲ್ಲ. ಈ ದಾಳಿಯಲ್ಲಿ ಅಲೆಕ್ಝಾಂಡರನ ಗ್ರೀಕ ಸೈನಿಕರು ಅಲ್ಲಲ್ಲಿ ಮಾಡಿದ ಪ್ರಾಣಹಾನಿಗಳ ಮೇಲಿಂದಂತೂ ಮುಂದಿನ ಕಾಲದ ಇಸ್ಲಾಂಧರ್ಮೀಯರ ದಾಳಿಗಳಿಗೂ ಇದಕ್ಕೂ ತೋರಿಸಲಾದ ಸಾಮ್ಯವು ಅತ್ಯಂತ ಅನುರೂಪವೆಂದು ಸಿದ್ಧವಾಗುತ್ತದೆ. ಅಲೆಕ್ಝಾಂಡರನು ಪೌರವನನ್ನು ಸೋಲಿಸಿದ್ದು ನಿಜ, ಆದರೆ ಅವನು ಭಾರತದಲ್ಲಿಯ ಚಕ್ರವರ್ತಿಯಲ್ಲ, ಮಹಾ ಪ್ರಬಲ ರಾಜನೂ ಅಲ್ಲ. ಅಲೆಕ್ಝಾಂಡರನು ಮುಂದೆ ಹೋಗದಿದ್ದುದರಿಂದ ಅವನ ವಿಜಯ ಪರಂಪರೆ ಅಪ್ರತಿಹತವಾಗಿ ಉಳಿದದ್ದು ಮಾತ್ರ ನಿಜ! ತಕ್ಷಿಲೆಯ ಅಂಭಿರಾಜನು ಅಲೆಕ್ಝಾಂಡರನ ಮಾರ್ಗವನ್ನು ಸುಗಮಮಾಡಿ ಕೊಟ್ಟನು. ಇದೇ ಪ್ರಕರಣದ ಪುನರಾವೃತ್ತಿ ಭಾರತದ ಇತಿಹಾಸದಲ್ಲಿ ಬಹಳಸಾರೆ ಕಂಡುಬರುತ್ತದೆ. ಅಲೆಕ್ಝಾಂಡರನು ತಿರುಗಿ ಹೋದಮೇಲೆ ಐದೇ ವರುಷಗಳಲ್ಲಿ ಅವನು ಗೆದ್ದುಕೊಂಡಿದ್ದ ರಾಜ್ಯಗಳೆಲ್ಲ ಸ್ವತಂತ್ರವಾದವು. ಅವನ ಮೃತ್ಯುವಿನ ನಂತರ ಕೆಲವುವರುಷಗಳಮೇಲೆ ಅವನ ಸೇನಾಪತಿ ಸೆಲ್ಯೂಕಸನನ್ನು ಸಮ್ರಾಟ್ ಚಂದ್ರಗುಪ್ತನು ಸೋಲಿಸಿದನು. ಪೌರವನ ಪರಾಭವದಿಂದಾದ ಮಾನಹಾನಿಯ ಕುಂದನ್ನು ತೊಡೆದುಹಾಕಿದನು. ಇದರಿಂದ ತತ್ಕಾಲೀನ ಭಾರತೀಯರು ಯುದ್ಧದಲ್ಲಿ ಯುರೋಪಿಯನರಿಗೆ ಸಮಬಲರಾಗಿದ್ದರೆಂದೂ ಹೇಳಬಹುದು. ಆದರೆ ಭಾರತದಲ್ಲಿ ಒಂದೇ ಪ್ರಬಲ ಸಾಮ್ರಾಜ್ಯವಿದ್ದರೆ ಭಾರತವನ್ನು ಚೆನ್ನಾಗಿ ರಕ್ಷಿಸಿಕೊಳ್ಳಬಹುದಾಗಿತ್ತು ಎಂಬ ವಿಚಾರವು ಆಗ ಜನರಲ್ಲಿ ಉಂಟಾಯಿತು. ಚಾಣಕ್ಯನಲ್ಲಿಯಂತೂ ಈ ವಿಚಾರ ಹುಟ್ಟಿರಬೇಕೆಂದು ತೋರುತ್ತದೆ. ಅದರೊಳಗೇ ಮೌರ್ಯರಾಜ್ಯದ ನಿರ್ಮಾಣವಾಯಿತು.

## ಪ್ರಶ್ನೆಗಳು :

೧. ಸಿಕಂದರನ ದಾಳಿಯ ಪರಿಣಾಮವನ್ನು ಹೇಳಿರಿ.

೨. ಪುರು ಇಲ್ಲವೆ ಪೌರವ ಮತ್ತು ಅಂಭೀ ಇವರ ಬಗ್ಗೆ ಟಿಪ್ಪಣಿ ಬರೆಯಿರಿ.

೩. ಝೇಲಮ್, ಸಿಂಧು, ತಕ್ಷಶಿಲೆ, ಪಾಟಲೀಪುತ್ರ– ಇವುಗಳನ್ನು ಭಾರತದ ನಕಾಶದಲ್ಲಿ ತೋರಿಸಿರಿ.

# ಸಪ್ತಮ ಖಂಡ

# ಮಗಧ–ಸಾಮ್ರಾಜ್ಯ

........×........

## ೧. ಚಂದ್ರಗುಪ್ತ ಮೌರ್ಯ

**ಪ್ರಾಸ್ತಾವಿಕ :** ಮೌರ್ಯ ಮನೆತನದ ಸ್ಥಾಪನೆ ಹಿಂದುಸ್ತಾನದ ಇತಿಹಾಸದಲ್ಲಿ ಅನೇಕ ದೃಷ್ಟಿಗಳಿಂದ ಮಹತ್ವದ ಸಂಗತಿ. ಈ ಕಾಲದಿಂದ ಹಿಂದುಸ್ತಾನದ ಇತಿಹಾಸಕ್ಕೆ ಎಷ್ಟೋ ನಿಶ್ಚಿತತೆ ಪ್ರಾಪ್ತವಾಗುತ್ತದೆ. ಬಾಹ್ಯಜಗತ್ತಿನೊಡನೆ ಹಿಂದುಸ್ತಾನದ ಸಂಬಂಧ ಹೆಚ್ಚುತ್ತದೆ, ಮತ್ತು ಅದರಿಂದ ಒಬ್ಬರಿಗೊಬ್ಬರ ವ್ಯವಹಾರಿಕ ಮತ್ತು ಬೌದ್ಧಿಕ ಲಾಭವಾಗುತ್ತದೆ. ಹಿಂದುಸ್ತಾನದ ಬಹು ವಿಶಾಲ ಭಾಗದಲ್ಲಿ ಮೊದಲುಬಾರಿ ಏಕಚ್ಛತ್ರಾಧಿಪತ್ಯದ ಸ್ಥಾಪನೆಗಾಗಿ ಬೇರೆ ಪ್ರಾಂತಗಳಲ್ಲಿ ಪರಸ್ಪರ ನಿಕಟ ಸಂಬಂಧವುಂಟಾಗುತ್ತದೆ. ಮೆಗಸ್ಥನೀಸನ ಲೇಖ, ಕೌಟಿಲ್ಯನ ಅರ್ಥಶಾಸ್ತ್ರ, ಅಶೋಕನ ಶಿಲಾಲೇಖಗಳಂತಹ ಸಮಕಾಲೀನ ಐತಿಹಾಸಿಕ ಸಾಧನಗಳು ಈ ಕಾಲದ ರಾಜಕೀಯ ಘಟನೆಗಳ ಮೇಲೆ ಹೆಚ್ಚು ಸ್ಪಷ್ಟ ಪ್ರಕಾಶವನ್ನು ಬೀರುತ್ತವೆ. ಇದರಿಂದ ಈ ಕಾಲದ ವ್ಯಕ್ತಿಗಳ ಮತ್ತು ಸಂಗತಿಗಳ ವರ್ಣನೆಯನ್ನು ಹೆಚ್ಚು ಪರಿಪೂರ್ಣವಾಗಿ ಮತ್ತು ನಿಚ್ಚಳವಾಗಿ ಮಾಡುವುದು ಸಾಧ್ಯವಾಗಿದೆ.

**ಮೌರ್ಯ ಮನೆತನದ ಸ್ಥಾಪನೆ :** ಕ್ರಿ. ಪೂ. ೩೨೧ ರಲ್ಲಿ ಚಂದ್ರಗುಪ್ತನು ನಂದರನ್ನು ಉರುಳಿಸಿ ಮಗಧದೇಶದ ರಾಜನಾದನು. ಈ ರಾಜ್ಯಕ್ರಾಂತಿಯ ಮೂಲದಲ್ಲಿ 'ಆರ್ಯ ಚಾಣಕ್ಯ'ನೆಂಬ ಬುದ್ಧಿಶಾಲಿ ಬ್ರಾಹ್ಮಣನಿದ್ದನು. ಈತನ ಹೆಸರು ಮೂಲದಲ್ಲಿ ವಿಷ್ಣುಗುಪ್ತ; ಚಣಕ ಎಂಬ ಊರಿನಿಂದ 'ಚಾಣಕ್ಯ' ಎಂಬ ಹೆಸರು ಬಂದಿರಬೇಕು. 'ಕೌಟಿಲೀಯ ಅರ್ಥಶಾಸ್ತ್ರ' ವೆಂಬ ಗ್ರಂಥವನ್ನು ರಚಿಸಿದವನು ಇವನೇ. ಈ ಗ್ರಂಥದಲ್ಲಿ ರಾಜನೀತಿಯ ಮಾರ್ಮಿಕ ವಿವೇಚನೆಯಿದೆ. ಇದರಲ್ಲಿಯ ರಾಜನೀತಿಯ ಕುಟಿಲತನದಿಂದಾಗಿ ಇವನಿಗೆ ಆಗದವರು 'ಕೌಟಿಲ್ಯ' ಎಂದು ಹೆಸರಿಟ್ಟಿರಬೇಕು. ಇವನು ತನ್ನ ಗ್ರಂಥದಲ್ಲಿ ತನ್ನನ್ನು 'ಕೌಟಲ್ಯ' ಎಂದರೆ 'ಕುಟಲ ಗೋತ್ರಿ' ಎಂದುಕೊಂಡಿದ್ದಾನೆ. 'ಕೌಟಲ್ಯ' ಹಾಗೂ 'ಕೌಟಿಲ್ಯ' ಇವುಗಳಲ್ಲಿ ಸಾದೃಶ್ಯವಿದ್ದುದರಿಂದ ಕೌಟಿಲ್ಯವೆಂಬುದು ಹೆಚ್ಚು ಸ್ಥಿರವಾಯಿತು. ಕೌಟಿಲ್ಯ ಅಥವಾ ಚಾಣಕ್ಯನು ನಂದರಾಜನ ಆಶ್ರಯದಲ್ಲಿದ್ದನು. ಈತನು ಕರ್ಮಬ್ರಾಹ್ಮಣನು, ರಾಜನು ಬೌದ್ಧ ಧರ್ಮಕ್ಕೆ ಅನುಕೂಲನು. ಇದರ ಪರಿಣಾಮವಾಗಿ ಒಂದು ದಿನ ತುಂಬಿದ ಸಭೆಯಲ್ಲಿ ಚಾಣಕ್ಯನಿಗೆ ರಾಜನಿಂದ

ಅಪಮಾನವಾಯಿತು. ಆಗ ಅವನು 'ನಂದರಾಜ್ಯವನ್ನು ಮಣ್ಣುಗೂಡಿಸಿ ನಿರ್ನಾಮ ಮಾಡಿದರೇ ನನ್ನ ಹೆಸರು ಚಾಣಕ್ಯ' ಎಂದು 'ಪ್ರತಿಜ್ಞೆ' ಮಾಡಿ ಅಲ್ಲಿಂದ ಹೊರಬಿದ್ದನು. ಚಂದ್ರಗುಪ್ತನೆಂಬವನು ಆಗ ನಂದರ ಸೇನಾಪತಿಯಾಗಿದ್ದನು. ಅವನನ್ನು ವಶಮಾಡಿಕೊಂಡು ಚಾಣಕ್ಯನು ಕ್ರಾಂತಿಯನ್ನುಂಟುಮಾಡುವ ಪ್ರಯತ್ನದಲ್ಲಿ ತೊಡಗಿದನು. ಚಂದ್ರಗುಪ್ತನು ಮೌರ್ಯ ಮನೆತನದವನಾಗಿದ್ದನು. * ಅವನ ತಾಯಿಯ ಹೆಸರು ಮುರಾ; ಅದರಿಂದ ಮುಂದೆ ಅವನ ಮನೆತನಕ್ಕೆ 'ಮೌರ್ಯ' ಎಂಬ ಹೆಸರಾಯಿತೆಂದು ಕೆಲವರ ಅಭಿಪ್ರಾಯವಿದೆ. ಏನೇ ಇರಲಿ. ಅವನು ನಂದರ ದರಬಾರದಲ್ಲಿದ್ದಾಗ ಅಸಂತುಷ್ಟನಾಗುವುದಕ್ಕೆ ಕೆಲವು ಕಾರಣಗಳುಂಟಾದವು. ಚಾಣಕ್ಯ-ಚಂದ್ರಗುಪ್ತರ ಪ್ರಥಮ ಪ್ರಯತ್ನವು ಅಯಶಸ್ವಿಯಾಗಿ ಇಬ್ಬರೂ ದೇಶಭ್ರಷ್ಟರಾಗಬೇಕಾಯಿತು. ಬಳಿಕ ಅವರು ಸಿಕಂದರನೊಡನೆ ಸಂಧಾನದ ಯತ್ನ ನಡೆಸಿ ವಿಫಲರಾದರು. ಅದರಿಂದ ಅವರು ನಿರಾಶರಾಗದೆ ಅನುಕೂಲ ಸಂಧಿಗಾಗಿ ಕಾಯ್ದುದ್ದರು. ಪಂಜಾಬದಲ್ಲಿ ಸಿಕಂದರನ ದಾಳಿಯಾಗಿ ಹೋದ ಮೇಲೆ ಅವರು ಪಂಜಾಬದ ಪೌರವಾದಿಗಳೊಡನೆ ಗೆಳೆತನ ಬೆಳೆಸಿದರು. ಆಮೇಲೆ ಹಿಂದೆ ಹೇಳಿದಂತೆ ಅವರ ಸಹಾಯದಿಂದ ಮಗಧಕ್ಕೆ ದಾಳಿಯಿಟ್ಟು ಧನಾನಂದನನ್ನು ಕೊಂದು ಚಂದ್ರಗುಪ್ತನು ಪಟ್ಟವೇರಿದನು. ಈ ರಾಜ್ಯಕ್ರಾಂತಿಯಲ್ಲಿ ಚಾಣಕ್ಯನ ಪ್ರಮುಖ ಅಂಗವಿತ್ತೆಂಬುದು ನಿಜವೇ; ಆದರೆ ಚಂದ್ರಗುಪ್ತನೂ ಅತ್ಯಂತ ಪರಾಕ್ರಮಿಯಾಗಿದ್ದನು. ಐತಿಹಾಸಿಕ ಕಾಲದಲ್ಲಿ ಮೊದಲನೆಯ ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದ ಶ್ರೇಯಸ್ಸು ಚಂದ್ರಗುಪ್ತನಿಗೇ ಸಲ್ಲುತ್ತದೆ. ಚಂದ್ರಗುಪ್ತನ ಪರಾಕ್ರಮಕ್ಕೆ ಚಾಣಕ್ಯನ ಮುತ್ಸದ್ದಿತನದ ಸರಿಯಾದ ಸಂಯೋಗವಾಗಿ ಸಾಮ್ರಾಜ್ಯವು ಉದಯಹೊಂದಿತೆಂದು ಹೇಳಲು ಅಭ್ಯಂತರವಿಲ್ಲ. ಪ್ರಾಚೀನ ಕಾಲದ ಚಾಣಕ್ಯ ಚಂದ್ರಗುಪ್ತರ ಜೊತೆಯಂತೆ, ಮಧ್ಯಕಾಲದಲ್ಲಿ ವಿದ್ಯಾರಣ್ಯ-ಹರಿಹರ ಜೊತೆ ಕೂಡಿ ವಿಜಯನಗರದ ಕರ್ನಾಟಕ ಸಾಮ್ರಾಜ್ಯ ಸ್ಥಾಪನೆಯಾಯಿತು; ಮುಂದೆ ಮೂರುನೂರು ವರುಷಗಳ ತರುವಾಯ ರಾಮದಾಸ-ಶಿವಾಜಿಯವರ ಜೋಡಿಯಿಂದ ಮಹಾರಾಷ್ಟ್ರ ರಾಜ್ಯದ ಉಪಕ್ರಮವಾಯಿತು; ಇರಲಿ.

**ಗ್ರೀಕರೊಡನೆ ಯುದ್ಧ-ವಿಜಯ :** ಚಂದ್ರಗುಪ್ತನು ದೊರೆಯಾದಮೇಲೆ ರಾಜ್ಯವನ್ನು ಭರದಿಂದ ಬೆಳೆಸಲು ಆರಂಭಿಸಿದನು. ಪಂಜಾಬದಲ್ಲಿ ಪ್ರಸ್ಥಾಪಿತವಾದ ಸಿಕಂದರನ ವರ್ಚಸ್ಸನ್ನು ಕಿತ್ತೊಗೆದು ಅದನ್ನು ತನ್ನ ರಾಜ್ಯದಲ್ಲಿ ಸೇರಿಸಿಕೊಂಡನು. ಆಮೇಲೆ ಚಂದ್ರಗುಪ್ತನು ಸಿಂಧದಿಂದ ಬಂಗಾಲದ ವರೆಗಿನ ಇಡೀ ಹಿಂದುಸ್ತಾನವನ್ನು

* ಚಂದ್ರಗುಪ್ತನು ನಂದವಂಶದ ದಾಸೀಪುತ್ರನೆಂಬ ಮಾತನ್ನು ಸಂಶೋಧಕರು ತಪ್ಪೆಂದು ತಿರ್ಮಾನಿಸಿದ್ದಾರೆ.

ತನ್ನ ಅಧೀನಪಡಿಸಿಕೊಂಡನು. ಇದೇ ಸಮಯದಲ್ಲಿ ಅಲೆಕ್ಝಾಂಡರನ ಪರಾಕ್ರಮಿ ಸೇನಾಪತಿ ಸೆಲ್ಯೂಕಸನು ಸಿಂಧದ ಆಚೆಯ ದೇಶದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿ ಮುಂದುವರಿಯಬೇಕೆಂಬ ವಿಚಾರದಲ್ಲಿದ್ದನು. ಅವನಿಗೂ ಚಂದ್ರಗುಪ್ತನಿಗೂ ಯುದ್ಧ ವಾಗಿ ಸೆಲ್ಯೂಕಸನು ಸೋತನು. ಈ ವಿಜಯದಿಂದ ಕಾಬೂಲ, ಕಂದಾಹಾರ, ಬಲುಚಿಸ್ತಾನ ಪ್ರಾಂತಗಳು ಚಂದ್ರಗುಪ್ತನಿಗೆ ದೊರೆತವು. ಮುಂದೆ ಸೆಲ್ಯುಕಸನು ಅವನಿಗೆ ತನ್ನ ಮಗಳನ್ನು ಕೊಟ್ಟು ಅವನ ಸಖ್ಯವನ್ನು ಸಂಪಾದಿಸಿದ್ದಲ್ಲದೆ, ಅವನ ದರಬಾರಕ್ಕೆ ಮೇಗಸ್ಥನೀಸನೆಂಬ ತನ್ನ ರಾಯಭಾರಿಯನ್ನು ಕಳಿಸಿದನು.

**ಮೌರ್ಯರ ರಾಜ್ಯವ್ಯವಸ್ಥೆ** : ಚಂದ್ರಗುಪ್ತನ ಕಾಲದ ಲೋಕಸ್ಥಿತಿಯ ಬಗ್ಗೆ ವಿಶ್ವಸನೀಯವಾದ ಸಂಗತಿಗಳು ಉಪಲಬ್ಧವಿವೆ. ಮೆಗಸ್ಥನೀಸನು ಅವನ ರಾಜ್ಯವನ್ನು ವರ್ಣಿಸಿದ್ದಾನೆ; ಮತ್ತು ಅದಕ್ಕೆ ತತ್ಕಾಲೀನ ಅರ್ಥ ಶಾಸ್ತ್ರದಂತಹ ಗ್ರಂಥಗಳಿಂದ ಅನುಮೋದನೆ ದೊರೆಯುತ್ತವೆ. ಆ ಕಾಲದಲ್ಲಿ ಪಾಟಲೀಪುತ್ರ ಪಟ್ಟಣವು ಗಂಗಾ ಮತ್ತು ಶೋಣನದಿಗಳ ನಡುವೆ ಸ್ಥಿತವಾಗಿತ್ತು. ಪಟ್ಟಣದ ಸುತ್ತಲೂ ಕಂದಕವೂ ಭದ್ರವಾದ ಕೋಟೆಯೂ ಇತ್ತು; ಅದಕ್ಕೆ ೬೪ ಬಾಗಿಲುಗಳಿದ್ದವು. ಪಟ್ಟಣದ ವ್ಯವಸ್ಥೆ ಗಾಗಿ ಈಗಿನ ಮುನಸಿಪಾಲಟಿಗಳಂತಹ ಮೂವತ್ತು ಜನರ ಒಂದು ಮಂಡಲವಿತ್ತು; ಅದರ ಆರು ಉಪಸಮಿತಿಗಳಿದ್ದವು. ಕರವಸೂಲಿ, ಹುಟ್ಟು–ಸಾವುಗಳ ನೊಂದಣಿ, ಉದ್ಯೋಗಧಂದೆಗಳ ನಿಯಂತ್ರಣ ಮತ್ತು ಸಂರಕ್ಷಣ ಇತ್ಯಾದಿ ಕಾರ್ಯಗಳನ್ನು ಅವು ಗಳಿಗೆ ವಹಿಸಿ ಕೊಡಲಾಗಿತ್ತು.

**ಗ್ರಾಮಪಂಚಾಯತಿ:** ಮುಖ್ಯ ಜನವಸತಿ ಹಸಿರು ಮುರಿಯುವ ಹೊಲ ಗಳಲ್ಲಿ ಬಿಡಿಬಿಡಿಯಾಗಿ ಹಳ್ಳಿಪಳ್ಳಿಗಳಲ್ಲಿ ವ್ಯಾಪಿಸಿತ್ತು. ಹಳ್ಳಿಗಳು ಸರಕಾರಕ್ಕೆ ಕರ ಕೊಟ್ಟಮೇಲೂ ತಮ್ಮ ಬಹುಮಟ್ಟಿನ ವ್ಯವಸ್ಥೆಯನ್ನು ತಾವೇ ಪಂಚರ ಮುಖಾಂ ತರ ಸ್ವತಂತ್ರವಾಗಿ ನಡೆಸುತ್ತಿದ್ದವು. ಪಂಚರ ನಿಯಮಿಕೆ ಈಗಿನಂತೆ ಸ್ಪರ್ಧೆಯ ಆಯ್ಕೆಯಿಂದಾಗುತ್ತಿರಲಿಲ್ಲ. ಜ್ಞಾನವೃದ್ಧ ಮತ್ತು ವಯೋವೃದ್ಧ ಗೃಹಸ್ಥರ ಸಮಾ ವೇಶವು ಅದರಲ್ಲಿ ತಾನಾಗಿ ಆಗುತ್ತಿತ್ತು. ಆ ಕಾಲದ ಈ ಗ್ರಾಮಸಂಸ್ಥೆಗಳೆಂದರೆ ಚಿಕ್ಕ ಚಿಕ್ಕ ರಾಜ್ಯಗಳೇ ಆಗಿದ್ದವು. ರಾಜರಾಜರಲ್ಲಿ ಕಾದಾಟ ನಡೆದಾಗ ಈ ಹಳ್ಳಿ ಗಳ ವ್ಯವಹಾರವು ನಿರ್ಭಯವಾಗಿ ನಾಗಿರುತ್ತಿತ್ತು. ರಾಜ್ಯದ ಹಿಂದೆ ರಾಜ್ಯಗಳು ಹೋದರೂ ಈ ಚಿಕ್ಕ ರಾಜ್ಯಗಳು ಆಂಗ್ಲರಸಕಾರದ ಆಳಿಕೆಯವರೆಗೂ ಜೀವಂತ ವಾಗಿದ್ದವು.

**ಕಂದಾಯ ಪದ್ಧತಿ** : ಐಯ್ದು ಹಳ್ಳಿಗಳ ಮೇಲಾಧಿಕಾರಿಗೆ 'ಗೋಪ' ಎನ್ನು ತ್ತಿದ್ದರು; ಆತನ ಮೇಲೆ 'ಸ್ಥಾನಿಕ' ರಜ್ಜುಕ' ಎಂಬ ಅಧಿಕಾರಿಗಳಿರುತ್ತಿದ್ದರು. ಅವ ರೆಲ್ಲರೂ 'ಸಮಾಹರ್ತೃ' ಎಂಬ ಖಾಸಗಿ ಕಾರಭಾರಿಗೆ ಅಧೀನರಾಗಿರುತ್ತಿದ್ದರು. ಖಾಸಗಿ

ಕಾರಭಾರಿಯ ಕಡೆ ಇಂದಿನ ಗೃಹಮಂತ್ರಿಯ ಮತ್ತು ಅರ್ಥಮಂತ್ರಿಯ ಕೆಲಸಗಳಿರುತ್ತಿದ್ದವು. ಉತ್ಪನ್ನವು ಮುಖ್ಯವಾಗಿ ಭೂಮಿಯ ತೆರಿಗೆ, ಆಯಾತ ನಿರ್ಯಾತ ವಸ್ತುಗಳ ಮೇಲಿನ ಸುಂಕ, ವ್ಯಾಪಾರೋದ್ಯಮಕಾರರ ನಿಯಂತ್ರಣಕ್ಕಾಗಿ ಹೇರಿದ (ಲೈಸೆನ್ಸ) ಕರ, ದಾರಿಪಟ್ಟಿ, ವಾರಸುದಾರರಿಲ್ಲದ ಆಸ್ತಿಪಾಸ್ತಿ' ಇವುಗಳಿಂದ ಬರುತ್ತಿತ್ತು. ದಂಡು, ರಾಜದರ್ಬಾರು, ದಾರಿ ಮತ್ತು ಕಾಲುವೆಗಳು ಇವು ಮುಖ್ಯವಾಗಿ ವೆಚ್ಚದ ಬಾಬುಗಳು.

**ಸೈನ್ಯವ್ಯವಸ್ಥೆ:** ದಂಡಿನಲ್ಲಿ ಆನೆದಳ, ಕುದುರೆದಳ, ರಥದಳ ಮತ್ತು ಕಾಲ್ದಳ ಎಂದು ನಾಲ್ಕು ಭಾಗಗಳಿದ್ದವು. ಸೈನಿಕರಲ್ಲಿಯೂ ಹಂಗಾಮಿ ಮತ್ತು ಸಂಬಳದ ಸೈನಿಕರೆಂದು ಎರಡು ಭಾಗಗಳಿದ್ದವು. ಅಲ್ಲದೆ ಸಿಬ್ಬಂದಿಯವರ ಮತ್ತು ನಾರಿಗೆಯವರ ಸಹಾಯವೂ ಯಥೇಷ್ಟವಾಗಿರುತ್ತಿತ್ತು. ಸೈನ್ಯದ ಹಿಂಭಾಗ, ಮುಂಭಾಗ, ಇಬ್ಬದಿಗಳು, ಹೆಚ್ಚಾದ ದಂಡು ಮತ್ತು ಶಿಬಿರ ಇವುಗಳ ಬಗ್ಗೆ ನಿಯಮಗಳನ್ನು ಗೊತ್ತುಪಡಿಸಲಾಗಿತ್ತು. ಚಂದ್ರಗುಪ್ತನಲ್ಲಿ ಎಂಟು ಸಾವಿರ ರಥಗಳು, ಒಂಬತ್ತು ಸಾವಿರ ಆನೆಗಳು, ಮೂವತ್ತು ಸಾವಿರ ಕುದುರೆಯಾಳುಗಳು, ಆರು ಲಕ್ಷ ಕಾಲಾಳುಗಳ ಸೈನ್ಯವಿತ್ತು. ಈ ಅವಾಢವ್ಯ ಚತುರಂಗ ಸೇನೆಯಿಂದ ಚಂದ್ರಗುಪ್ತನ ಸಾಮರ್ಥ್ಯದ ಕಲ್ಪನೆ ಕೆಲಮಟ್ಟಿಗೆ ಬರಬಹುದು. ಅವನ ರಾಜ್ಯವ್ಯವಸ್ಥೆಯಲ್ಲಿ ಸೈನ್ಯಶಾಖೆಯ ಪ್ರಾಬಲ್ಯವು ವಿಶೇಷವಾಗಿತ್ತೆಂಬಲ್ಲಿ ಸಂದೇಹವಿಲ್ಲ.

**ಅರ್ಥಶಾಸ್ತ್ರದ ಪರಿಚಯ :** ಕೌಟಿಲ್ಯನ ಅರ್ಥಶಾಸ್ತ್ರದಿಂದ ರಾಜನೀತಿಯ ವಿಶೇಷ ಜ್ಞಾನವಾಗುವಂತಿದೆಯೆಂದುದರಿಂದ ಅದರಲ್ಲಿಯ ಕೆಲವು ಆಯ್ದ ಅವತರಣಿಕೆಗಳನ್ನು ಇಲ್ಲಿ ಕೊಡುತ್ತೇವೆ.

"ವಸತಿ ಶೂನ್ಯವಾದ ಹಳೆ ಸ್ಥಳಗಳಲ್ಲಿ ಅಥವಾ ಹೊಸ ಎಡೆಗಳಲ್ಲಿ ರಾಜನು ಊರು ಕಟ್ಟಬೇಕು; ಅಲ್ಲಿ ನೆಲೆಸುವುದಕ್ಕಾಗಿ ಪರದೇಶದ ಜನರನ್ನು ತರಬೇಕು, ಅಥವಾ ತನ್ನ ರಾಜ್ಯದಲ್ಲಿಯ ದಟ್ಟ ಜನವಸತಿಯ ಭಾಗಗಳಿಂದ ಅಲ್ಲಿಯ ದಟ್ಟಣೆಯನ್ನು ಕಡಿಮೆ ಮಾಡುವದಕ್ಕಾಗಿ ಹೆಚ್ಚಿನ ಜನರನ್ನು ಹೊಸ ಊರಿಗೆ ಕಳಿಸಬೇಕು. ಹಳ್ಳಿಯ ಕ್ಷೇತ್ರಫಲ ಒಂದರಿಂದ ಎರಡು ಕ್ರೋಶವಿರಬೇಕು; ಹಳ್ಳಿಯಲ್ಲಿ ಮನೆಗಳ ಸಂಖ್ಯೆ ೧೦೦ ರಿಂದ ೫೦೦ ಇರಬೇಕು; ಅಲ್ಲಿ ಒಕ್ಕಲಿಗರೂ ಶೂದ್ರರೂ ಹೆಚ್ಚಾಗಿರಬೇಕು; ಈ ಹಳ್ಳಿಗಳು ಸಂಕಟ ಪ್ರಸಂಗದಲ್ಲಿ ಪರಸ್ಪರ ಸಹಾಯ ಮಾಡಲು ಸಾಧ್ಯವಾಗುವಂತೆ ಕ್ಲುಪ್ತ ಅಂತರದಲ್ಲಿರಬೇಕು. ಊರಿನ ಗಡಿಯಲ್ಲಿ ನದಿ, ದಿನ್ನೆ, ಕಾಡು; ಕೊಳ್ಳ, ಸೇತುಗಳದಾಗಲಿ ಆಲ, ಅರಳೆ, ಬನ್ನಿ ಬೋರಿ ಮೊದಲಾದ ಗಿಡಗಳದಾಗಲಿ ಗುರುತಿರಬೇಕು." (ಅಧಿಕರಣ ೨, ಅಧ್ಯಾಯ ೨೨.)

"ಗುಪ್ತಚಾರರು ಮಂತ್ರಿ ಮೊದಲಾದವರ ಹತ್ತಿರ ಆಪ್ತಗಿರಿ, ಪೀಕದಾನಿ, ಬೀಸಣಿಕೆ ಪಾದತ್ರಾಣ, ಆಸನ, ವಾಹನ ಮೊದಲಾದವುಗಳನ್ನು ಧಾರಣ ಮಾಡುವ ನಿಮಿತ್ಯದಿಂದ ಇರಬೇಕು. (ಬೇರೆ ಬೇರೆ) ಗುಪ್ತಚಾರರಿಗೆ ಪರಸ್ಪರರ ವಿಷಯ ಗೊತ್ತಿರಬಾರದು....ಮತ್ತು ಅವರಲ್ಲಿ ಏಕವಾಕ್ಯತೆಯುಳ್ಳ ಸುದ್ದಿಗಳನ್ನು ಮಾತ್ರ ನಂಬಬೇಕು."

"ಎಲ್ಲ ಖಾತೆಗಳ ಅಧಿಕಾರಿಗಳು ಮಾಡತಕ್ಕ ಕೆಲಸ, ಅವುಗಳಲ್ಲಿ ಆದ ಕೆಲಸ, ಉಳಿದ ಕೆಲಸ, ಆಯುವ್ಯಯ, ಉಳಿಕೆ, ಕೆಲಸದವೇಳೆ, ರೂಢಿ ಮತ್ತು ಸ್ವರೂಪ–ಇವೆಲ್ಲವನ್ನೂ ಪುಸ್ತಕದಲ್ಲಿ ಬರೆದಿಡಬೇಕು. ಉತ್ತಮ, ಮಧ್ಯಮ ಮತ್ತು ಕನಿಷ್ಠ ಕೆಲಸಗಳಿಗೆ ಆ ಆ ಯೋಗ್ಯತೆಯ ಅಧಿಕಾರಿಗಳನ್ನು ನಿಯಮಿಸಬೇಕು.....ಕಿರುಕುಳ ತಪ್ಪುಗಳನ್ನು ಕ್ಷಮಿಸಬೇಕು. ಸ್ವಲ್ಪವೇ ಆಗಲಿ ಲಾಭ ತೋರಿಸಿದರೆ ಗೌರವಿಸಬೇಕು. ದೊಡ್ಡ ಉಪಕಾರ ಮಾಡಿದ ಅಧಿಕಾರಿಯ ವೇತನ ಹೆಚ್ಚಿಸಬೇಕು."

ಮೇಲಿನ ಮಾತುಗಳಿಂದ ಆ ಕಾಲದ ರಾಜ್ಯಕರ್ತೃಗಳ ಸಾವಧಾನತೆ ದೂರದೃಷ್ಟಿಗಳೂ ರಾಜ್ಯವ್ಯವಸ್ಥೆಯಲ್ಲಿಯ ಚೊಕ್ಕಟತನ ವ್ಯವಸ್ಥಿತ ಸ್ವರೂಪಗಳೂ ವ್ಯಕ್ತವಾಗುತ್ತವೆ. ಸಾಕಲ್ಯವಾಗಿ ವಿಚಾರಮಾಡಿದರೆ ಆಧುನಿಕ ಕಾಲದಲ್ಲಿಯ ಸೈನಿಕ ನೌಕರಶಾಹಿಯೊಡನೆ ಮೌರ್ಯರ ರಾಜ್ಯಪದ್ಧತಿಯ ಸಾಮ್ಯವು ಕಂಡುಬರುತ್ತದೆ.

**ಬಿಂದುಸಾರ :** ಚಂದ್ರಗುಪ್ತನು ಕ್ರಿ. ಪೂ. ೨೯೮ ರಲ್ಲಿ ಮಡಿದನು.* ಅವನ ತರುವಾಯ ಅವನ ಮಗ ಬಿಂದುಸಾರನು ಪಟ್ಟಕ್ಕೆ ಬಂದನು. ಇವನು ತನ್ನ ರಾಜ್ಯದ ದಕ್ಷಿಣದ ಗಡಿಯನ್ನು ತುಂಗಭದ್ರೆಯ ವರೆಗೆ ಮುಂದೊತ್ತಿದನು. ಈ ರಾಜ್ಯವಿಸ್ತಾರವು ಬೇರೆ ಬೇರೆ ರಾಜ್ಯಗಳ ಆಕ್ರಮಣದಿಂದ ಆಗುತ್ತಿರಲಿಲ್ಲ; ಅಲ್ಲಲ್ಲಿಯ ರಾಜರು ದಿಗ್ವಿಜಯ ಮಾಡುವ ರಾಜನ ಅಧಿರಾಜ್ಯವನ್ನು ಒಪ್ಪಿಕೊಳ್ಳುತ್ತಿದ್ದರು. ಬಿಂದುಸಾರನ ತರುವಾಯ ಅವನ ಮಗ ಅಶೋಕನು ಪಟ್ಟವೇರಿದನು.

## ಪ್ರಶ್ನೆಗಳು :

೧. ಚಂದ್ರಗುಪ್ತ ಮೌರ್ಯನ ರಾಜ್ಯವ್ಯವಸ್ಥೆಯನ್ನು ವರ್ಣಿಸಿರಿ.
೨. ಪರಿಚಯ ಮಾಡಿಕೊಡಿರಿ : (೧) ಅರ್ಥಶಾಸ್ತ್ರ; (೨) ಪಾಟಲೀಪುತ್ರ; (೩) ಮೆಗಸ್ಥನೀಸ್.

---

* ಚಂದ್ರಗುಪ್ತನ ಒಲವು ಜೈನಧರ್ಮದ ಕಡೆಗಿತ್ತು. ಅವನ ಆಳಿಕೆಯ ಕೊನೆಯ ಭಾಗದಲ್ಲಿ ದೇಶದಲ್ಲಿ ಸುಮಾರು ಹನ್ನೆರಡು ವರುಷಗಳ ವರೆಗೆ ದೊಡ್ಡ ಬರಗಾಲ ಬಿದ್ದಿತು. ಆಗ ಚಂದ್ರಗುಪ್ತನಿಗೆ ವಿರಕ್ತಿಯುಂಟಾಗಿ, ಮಗನಿಗೆ ರಾಜ್ಯವನ್ನೊಪ್ಪಿಸಿ, ಆವನು ಜೈನಧರ್ಮಗುರು ಭದ್ರಬಾಹುವಿನೊಡನೆ ದಕ್ಷಿಣಕ್ಕೆ ಹೋದನೆಂದು ಕೆಲವರು ಹೇಳುತ್ತಾರೆ, ಮತ್ತು ಅದಕ್ಕೆ ಮೈಸೂರ ರಾಜ್ಯದಲ್ಲಿಯ ಶ್ರವಣಬೆಳಗೊಳದ ಹತ್ತಿರದ ಚಂದ್ರಗಿರಿ ಪರ್ವತದ ಮೇಲಿನ ಶಿಲಾಲೇಖದ ಆಧಾರ ಕೊಡುತ್ತಾರೆ. ಆದರೆ ಆ ಶಿಲಾಲೇಖದಲ್ಲಿಯ ಚಂದ್ರಗುಪ್ತನು ಮೊದಲನೆಯ ಚಂದ್ರಗುಪ್ತನೋ ಅಶೋಕನ ಮೊಮ್ಮಗ ಸಂಪ್ರತಿಯೋ (ಇವನೂ ಚಂದ್ರಗುಪ್ತನೆಂದೇ ಹೆಸರಾಗಿದ್ದಾನೆ.) ಸಂಶಯಾಸ್ಪದವಾಗಿವೆ.

## ೭. ಶ್ರೇಷ್ಠ ಸಮ್ರಾಟ್ ಅಶೋಕ

**ಧರ್ಮನಿಷ್ಠ ಸಮ್ರಾಟ್ ಅಶೋಕ** (ಕ್ರಿ. ಪೂ. ೨೭೩-೨೩೨): ಪೃಥ್ವಿಯಲ್ಲಿಯ ಅತ್ಯಂತ ದೊಡ್ಡ, ಸಾತ್ತ್ವಿಕ ಮತ್ತು ಪ್ರಜೆಗಳ ಕಲ್ಯಾಣದ ಬಗ್ಗೆ ತಳಮಳಿಸುವ ರಾಜರಲ್ಲಿ ಸಮ್ರಾಟ್ ಅಶೋಕನ ಎಣಿಕೆಯಾಗಬೇಕು. ಕತ್ತಿಯ ಬಲದಿಂದ ದಿಗ್ವಿಜಯ ಮಾಡಿ ಹೆಸರುವಾಸಿಯಾದ ಎಷ್ಟೋ ರಾಜರನ್ನು ಇತಿಹಾಸದಲ್ಲಿ ಕಾಣಬಹುದು. ಆದರೆ ತನ್ನನ್ನು ಪ್ರಜೆಗಳ ಸೇವಕನೆಂದು ತಿಳಿದು, ಅವರ ಇಹ-ಪರ ಕಲ್ಯಾಣವನ್ನು ಸಾಧಿಸುವ ಮತ್ತು ಜಗತ್ತಿನಲ್ಲಿ ಸತ್ಯ, ನ್ಯಾಯ, ನೀತಿಗಳನ್ನು ನೆಲೆಗೊಳಿಸುವುದೇ ಜೀವನದ ಧ್ಯೇಯವೆಂದು ಬಗೆದು ಅದಕ್ಕಾಗಿ ದಣಿವಿಲ್ಲದೆ ಹೆಣಗುವ ರಾಜರು ತೀರ ವಿರಳ. ಭಾರತದ ಇತಿಹಾಸದಲ್ಲಿ ಅತ್ಯಂತ ದೊಡ್ಡ ಸಮ್ರಾಟರು ಇಬ್ಬರು; ಒಬ್ಬ ಅಶೋಕ, ಇನ್ನೊಬ್ಬ ಮೊಗಲಬಾದಶಾಹ ಅಕಬರ (ಕ್ರಿ. ಶ. ೧೫೫೬-೧೬೦೫) ಇವರಿಬ್ಬರಲ್ಲಿ ಕೂಡ ಸಾಮ್ರಾಜ್ಯ ವಿಸ್ತಾರದ ದೃಷ್ಟಿಯಿಂದಲೂ ವೈಯಕ್ತಿಕ ಮಹತಿಯಿಂದಲೂ ಅಶೋಕನೇ ಮೇಲೆನಿಸುತ್ತಾನೆ. ಏಕೆಂದರೆ



ಸಮ್ರಾಟ್ ಅಶೋಕ

ಅಕಬರನ ರಾಜ್ಯವು ದಕ್ಷಿಣದಲ್ಲಿ ಅಹಮ್ಮದನಗರದವರೆಗಿದ್ದರೆ, ಅಶೋಕನ ಸತ್ತೆ ಮೈಸೂರಿನ ವರೆಗೂ ಹಬ್ಬಿತ್ತು. ಹಾಗೆಯೇ ಅಶೋಕನ ಧರ್ಮವೃತ್ತಿ ಅಕಬರನ ಧರ್ಮವೃತ್ತಿಯಂತೆ ಚಂಚಲವಲ್ಲ, ಅಥವಾ ಅದರ ತಳದಲ್ಲಿ ಯಾವ ರಾಜಕೀಯ ಹೇತುವೂ ಇರಲಿಲ್ಲ. ಪ್ರಾಚೀನ ಇತಿಹಾಸದ ಸಾಧನಗಳ ಮಾನದಿಂದ ಅವನ ಕಾಲಾವಧಿಯ ವಿಶ್ವಸನೀಯ ಸಾಧನಗಳು ಹೆಚ್ಚು ಉಪಲಬ್ಧವಿವೆ. ಅವುಗಳೆಂದರೆ, ಬೌದ್ಧರ ಪಾಲೀಭಾಷೆಯ ಧರ್ಮಗ್ರಂಥಗಳು ಮತ್ತು ಅವನು ಕೆತ್ತಿಸಿದ ಶಿಲಾಲೇಖಗಳು.

**ಅಶೋಕನ ಕರ್ತೃತ್ವ**: ಪಟ್ಟಕ್ಕೆ ಬರುವ ಮೊದಲೇ ಅಶೋಕನ ಕರ್ತೃತ್ವವು ಕಂಡುಬಂದಿತು. ಬಿಂದುಸಾರನ ಆಳಿಕೆಯಲ್ಲಿ ತಕ್ಷಶಿಲೆಯಲ್ಲಿ ಬಂಡಾಯವೆದ್ದಾಗ ಅದನ್ನು ಅಡಗಿಸುವ ಕೆಲಸ ಇವನ ಪಾಲಿಗೆ ಬಂದಿತ್ತು. ಆಗ ಅಶೋಕನು ಚಾತುರ್ಯದಿಂದ ಅಲ್ಲಿಯ ಪ್ರಜೆಗಳ ವಿಶ್ವಾಸವನ್ನು ಸಂಪಾದಿಸಿ ರಕ್ತಪಾತವಿಲ್ಲದೆ ಬಂಡನ್ನು ಮುರಿದನು. ಆಮೇಲೆ ಅವನು ಉಜ್ಜಯಿನಿ

ಯಲ್ಲಿ ರಾಜಪ್ರತಿನಿಧಿಯಾಗಿ ನಿಯಮಿತನಾದನು. ಬಿಂದುಸಾರನು ಮಡಿದ ಬಳಿಕ ಅವನ ಅಣ್ಣನಾದ ಸುಸೀಮನನ್ನು ಬದಿಗೊತ್ತಿ ಸಿಂಹಾಸನವನ್ನು ಹಿಡಿದುಕೊಂಡ ನೆಂದು ಅನ್ನುತ್ತಾರೆ. ಮುಂದೆ ನಾಲ್ಕು ವರುಷಗಳ ಮೇಲೆ ಕ್ರಿ. ಪೂ. ೨೬೯ರಲ್ಲಿ ಪಟ್ಟಾಭಿಷೇಕ ಮಾಡಿಸಿಕೊಂಡನು. ಅಶೋಕನು ದೊರೆಯಾಗುವ ಮೊದಲೇ ಮೌರ್ಯ ರಾಜ್ಯವು ಬಹುಮಟ್ಟಿಗೆ ವಿಸ್ತಾರವಾಗಿತ್ತು.

**ಕಲಿಂಗದಮೇಲೆ ದಾಳಿ :** ಕ್ರಿ. ಪೂ. ೨೬೧ ರಲ್ಲಿ ಅಶೋಕನು ಗೋದಾವರಿ ಮತ್ತು ಮಹಾನದಿಗಳ ಮುಖಗಳ ಮಧ್ಯದಲ್ಲಿಯ ಕಲಿಂಗಪ್ರಾಂತದ ಮೇಲೆ ಸಾಗಿ ಹೋಗಿ ಅದನ್ನು ತನ್ನ ರಾಜ್ಯಕ್ಕೆ ಜೋಡಿಸಿದನು. ಈ ದಾಳಿಯಲ್ಲಿ ಒಂದೂವರೆ ಲಕ್ಷ ಜನ ಸೆರೆಸಿಕ್ಕರು; ಒಂದು ಲಕ್ಷ ಜನ ಮಡಿದರು; ಅದಕ್ಕಿಂತ ಹೆಚ್ಚು ಜನ ಯುದ್ಧಾನಂತರದಲ್ಲಿ ಅನೇಕ ಕಾರಣಗಳಿಂದ ಸತ್ತರು. ಈ ಪ್ರಾಣಹಾನಿಯನ್ನು ಕಂಡು ಅಶೋಕನ ಮನಸ್ಸಿಗೆ ಬಹಳ ಪಶ್ಚಾತ್ತಾಪವಾಯಿತು. ತನ್ನ ರಾಜ್ಯವಿಸ್ತಾರದ ಮಹತ್ತ್ವಾಕಾಂಕ್ಷೆಯ ಬಗ್ಗೆಯೂ ನಿರಪರಾಧಿಗಳ ರಕ್ತಪಾತದಿಂದ ದೊರೆತ ವಿಜಯದ ಬಗ್ಗೆಯೂ ವೈಭವದ ಬಗ್ಗೆಯೂ ಹೇಸಿಕೆ ಹುಟ್ಟಿತು. ಆಗ ಅವನು ಇನ್ನು ನಿಷ್ಕಾರಣವಾಗಿ ಯುದ್ಧ ಮಾಡುವುದಿಲ್ಲವೆಂದು ನಿರ್ಧರಿಸಿದನು; ಮತ್ತು ಮುಂದಿನ ಆಯುಷ್ಯದಲ್ಲಿ ಅಕ್ಷರಶಃ ಅದರಂತೆ ನಡೆದನು. ತನ್ನಲ್ಲಿ ಸಾಮರ್ಥ್ಯವಿದ್ದೂ, ಒಂದೇ ಸವನೆ ಗೆಲವಾಗುತ್ತಿದ್ದೂ ಆತ್ಮಸಂಯಮನದಿಂದ ದಿಗ್ವಿಜಯವನ್ನು ತಡೆದ ರಾಜನು ಪೃಥ್ವಿಯಲ್ಲಿ ಅಶೋಕನೊಬ್ಬನೇ ಸರಿ.

**ಬೌದ್ಧಧರ್ಮ ಸ್ವೀಕಾರ :** ಅಶೋಕನು ಇಷ್ಟಕ್ಕೆ ನಿಲ್ಲಲಿಲ್ಲ. ಅವನು ತನ್ನ ಮನಸಿನ ತಳಮಳದ ಶಮನಕ್ಕಾಗಿ ಬೌದ್ಧಧರ್ಮವನ್ನು ಸ್ವೀಕರಿಸಿದನು. ದಿನದಿನಕ್ಕೆ ಅವನ ಮನಸ್ಸು ಬೌದ್ಧಧರ್ಮದ ಅಹಿಂಸೆ, ಭೂತದಯೆ ಪರೋಪಕಾರ ಮುಂತಾದ ಸಾಮಾನ್ಯ ನೀತಿತತ್ತ್ವಗಳ ಪ್ರಭಾವಕ್ಕೊಳಗಾಯಿತು. ಅವನು ರಾಜ್ಯದಲ್ಲಿ ಬೇಟೆಯಾಡುವುದನ್ನು ನಿಲ್ಲಿಸಿದನು. ಅರಮನೆಯ ಪಾಕಶಾಲೆಯಲ್ಲಿ ನಡೆಯುತ್ತಿದ್ದ ಹಿಂಸೆಯನ್ನು ತಡೆದನು. ಕಪಿಲವಸ್ತು, ಗಯೆ, ಸಾರನಾಥ ಮೊದಲಾದ ಬೌದ್ಧರ ಪವಿತ್ರ ಸ್ಥಳಗಳ ಯಾತ್ರೆ ಮಾಡಿದನು. ಮುಂದೆ ಅಶೋಕನಿಗೆ ಉಪಗುಪ್ತನೆಂಬ ಮಹಾನ್ ಬೌದ್ಧಸಾಧುವಿನ ಪರಿಚಯವಾಗಿ ಅವನು ಆತನನ್ನು ಗುರುವಾಗಿ ಸ್ವೀಕರಿಸಿದನು.

**ಲೋಕೋಪಯೋಗೀ ಕಾರ್ಯಗಳು :** ಇನ್ನು ಮುಂದಿನ ಅವನ ಆಯುಷ್ಯವೆಲ್ಲ ಧರ್ಮಪ್ರಸಾರ ಮತ್ತು ಪರೋಪಕಾರಗಳಲ್ಲಿಯೆ ಕಳೆಯಿತು. ಅವನು ಕೊರೆಸಿದ ಏಳನೆಯ ಸ್ತಂಭದಲ್ಲಿ ಅದರ ವರ್ಣನೆಯುಂಟು.

" ದೇವರ ಪ್ರೀತಿಯ ಪ್ರಿಯದರ್ಶಿ ರಾಜನೆನ್ನುತ್ತಾನೆ : ' ಜನರಿಗೆ ಧರ್ಮವನ್ನು ತಿಳಿಸಬೇಕೆಂದು ನನ್ನ ಮನಸಿನಲ್ಲಿ ವಿಚಾರ ಬಂದಿತು.... ಅಂದರೆ ಜನರು ಅದನ್ನು



ಅಶೋಕ ಸ್ತಂಭ

ಕೇಳಿ ಆದರಂತೆ ಆಚರಿಸುವರು. ಈ ಉದ್ದೇಶದಿಂದ....ಅನೇಕ ಜನರ ಮೇಲೆ ನಿಯಮಿತರಾದ ನನ್ನ ಪುರುಷ ಎಂಬ ಅಧಿಕಾರಿಗಳು ನನ್ನ ಉಪದೇಶದ ಪ್ರಚಾರ ಮಾಡುವರು....ಈ ಉದ್ದೇಶದಿಂದಲೇ ನಾನು ಧರ್ಮಸ್ತಂಭಗಳನ್ನು ನಿಲ್ಲಿಸಿದೆನು, ಧರ್ಮಮಹಾಮಾತ್ರರನ್ನು ನಿಯಮಿಸಿದೆನು ಮತ್ತು ಧರ್ಮವನ್ನು ಘೋಷಿಸಿದೆನು."

"........ಹಾದಿಗಳಲ್ಲಿ ಮನುಷ್ಯರಿಗೂ ಪಶುಗಳಿಗೂ ನೆರಳಾಗಲೆಂದು ಮಾವಿನ ಗಿಡಗಳನ್ನು ಹಚ್ಚಿದೆನು; ಅರ್ಧ-ಕ್ರೋಶಕ್ಕೊಂದರಂತೆ ಬಾವಿಗಳನ್ನು ತೋಡಿಸಿದೆನು; ಧರ್ಮಶಾಲೆಗಳನ್ನು ಕಟ್ಟಿಸಿದೆನು; ಅಲ್ಲಲ್ಲಿಗೆ ಜನರಿಗಾಗಿಯೂ ದನಕರುಗಳಿಗಾಗಿಯೂ ಅರವಟ್ಟಿಗೆಗಳನ್ನಿಟ್ಟೆನು. ಆದರೆ ಇವೆಲ್ಲ ಸುಖಸೌಕರ್ಯಗಳು ಕ್ಷುದ್ರಸಂಗತಿಗಳು. ಮೊದಲಿನ ರಾಜರು ಮತ್ತು ನಾನು ಕೂಡ ಜನರಿಗೆ ನಾನಾ ಬಗೆಯ ಸುಖವಿತ್ತೆವು. ಜನರು ಧರ್ಮದಿಂದ ನಡೆಯಲೆಂಬ ಆಸೆಯಿಂದ ನಾನು ಹಾಗೆ ಮಾಡಿದೆನು "

**ಅಲ್ಲಲ್ಲಿಯ ಸಂಭಗಳು ಹಾಗೂ ಲೇಖಗಳು:** ಇಂತಹ ಲೇಖನಗಳನ್ನು ಅಡ್ಡಾಡುವವರಿಗೆ ತಿಳಿಯಬೇಕೆಂಬ ಉದ್ದೇಶದಿಂದ, ಅಲಂಕಾರವಿಲ್ಲದ ಸರಲಭಾಷೆಯಲ್ಲಿ ಬರೆಯಿಸಿ ತೀರ್ಥಯಾತ್ರೆಯ ದಾರಿಯಲ್ಲಿ ನಿಲ್ಲಿಸಲಾಗಿದೆ. ವಿಶೇಷವಾಗಿ, ಅವನ ಹದಿನಾಲ್ಕು ಆಜ್ಞೆಗಳೆಂದು ಹೆಸರಾದ ಗಿರಿಲೇಖವು ದೇಶದ ನಾಲ್ಕೂ ಭಾಗಗಳಲ್ಲಿ ಕಂಡುಬರುತ್ತವೆ. ಪೇಶಾವರ ಹತ್ತಿರ ಶಹಬಾಜಘುಗಡಿಯಲ್ಲಿ, ಠಾಣಾ ಜಿಲ್ಹೆಯ ಸೋಪಾರಾಗ್ರಾಮದಲ್ಲಿ, ಕಾಠೇವಾಡಜಿಲ್ಹೆಯ ಗಿರನಾರ ಎಂಬಲ್ಲಿ, ಓರಿಸಾಪ್ರಾಂತದ ಜಗನ್ನಾಥಪುರಿಯ ಬಳಿ ಧೌಲಿ ಎಂಬಲ್ಲಿ, ದಕ್ಷಿಣದಲ್ಲಿ ಗಂಜಮು ಜಿಲ್ಹೆಯ ಜೌಗಡದಲ್ಲಿ ಈ ಆಜ್ಞೆಗಳನ್ನು ಕಾಣಬಹುದು. ಈ ವರೆಗೆ ಅಶೋಕನ ಮೂವತ್ತುನಾಲ್ಕು ಕಲ್ಬರೆಹಗಳು ಸಿಕ್ಕಿವೆ. ಗುಡ್ಡ ಗುಹೆ, ಅಥವಾ ಕಲ್ಲುಬಂಡೆಗಳಮೇಲೆ ಅವನ್ನು ಕೆತ್ತಿದ್ದಾರೆ. ಬಂಡೆ ಸಿಕ್ಕಲ್ಲಿ ಭವ್ಯ ಸ್ತಂಭವನ್ನು ನಿಲ್ಲಿಸಿದ್ದಾರೆ. ಅವುಗಳಲ್ಲಿ ಅಯೋಧ್ಯಾಪ್ರಾಂತದಲ್ಲಿಯ ಒಂದು ಸ್ತಂಭವು ೫೦ಅಡಿ ಎತ್ತರವಿದ್ದು ಒಂದೇ ಸಮನಾಗಿ ಎಂದು ಗೋಡೆಯಂತೆ ಇದೆ ಆ ಸ್ತಂಭವು ೫೦ ಟನ್ ಭಾರವಾದುದಿರಬೇಕೆಂದು ತಜ್ಞರ ಅಂದಾಜಿದೆ. ಆಧುನಿಕ ಯಂತ್ರ ಸಾಧನಗಳಿಲ್ಲದ ಕಾಲದಲ್ಲಿ, ಎರಡು ಸಾವಿರ ವರ್ಷಗಳ ಪೂರ್ವದಲ್ಲಿ– ಇಂತಹ ಕಲ್ಲನ್ನು ಕಣಿಯಿಂದ ತೆಗೆದು ಆಯಾ ಸ್ಥಳಗಳಿಗೊಯ್ದು ಹೇಗೆ ನಿಲ್ಲಿಸಿದರೆಂಬದು ಒಂದು ಗೂಢವೇ ಸರಿ. ಇದರಿಂದ ಆಗಿನ ಸ್ಥಾಪತ್ಯಶಾಸ್ತ್ರದ ಪ್ರಗತಿಯ ಕಲ್ಪನೆ ಬರುವಂತಿದೆ. ಈ ಸ್ತಂಭವು ಇಷ್ಟು ಅವಾಡವ್ಯವಾಗಿದ್ದರೂ ಅದರಲ್ಲಿಯ ಕೆಲಸ ಸದ್ದಮುದ್ದವಾಗಿಲ್ಲ; ಅಲ್ಲದೆ, ಅದು ಮೋರೆ ಕಾಣುವಷ್ಟು ನುಣುಪಾಗಿಯೂ ತಿಳಿಯಾಗಿಯೂ ಇದೆ. ಅದರಲ್ಲಿಯ ಕುಸುರಿನ ಕೈವಾಡವೂ ಪ್ರಮಾಣಬದ್ಧ ಚಿತ್ರಣವೂ ನೋಡುವಂತಿವೆ. ಕಾಶಿಯ ಸಮೀಪದ ಸಾರನಾಥದ ಬಳಿಯ ಸ್ತಂಭದ ತಳವು ಗಂಟೆಯ ಹಾಗಿದ್ದು, ಅದಕ್ಕೆ ಕಮಲದಳಗಳ ಆಕಾರ ಕೊಡಲಾಗಿದೆ. ಎದುರಿನ ಮಧ್ಯಭಾಗದಲ್ಲಿ ಒಂದು ಚಕ್ರವಿದ್ದು ಬದಿಯಲ್ಲಿ ಪುಷ್ಟವಾದ ಎತ್ತಿನ ಚಿತ್ರವಿದೆ. ದುಂಡುಕಲ್ಲಿನಮೇಲೆ ನಾಲ್ಕು ದಿಕ್ಕುಗಳಿಗೆ ಅಜಸ್ರ ಆಕಾರದ ಹಿಂಭಾಗ ಒಂದಕ್ಕೊಂದು ಹತ್ತಿದ ನಾಲ್ಕು ಸಿಂಹಗಳು ನಿಂತಿವೆ. ಸರ್ ಜಾನ್ ಮಾರ್ಶಲ್ ಎಂಬ ಪ್ರಸಿದ್ಧ ಶಿಲ್ಪ ಶಾಸ್ತ್ರಜ್ಞರು ಈ ಸ್ತಂಭವನ್ನು ಬಹುವಾಗಿ ಹೊಗಳಿದ್ದಾರೆ. ಈ ಅಶೋಕಚಿಹ್ನವು ಸರ್ವಸಂಗ್ರಾಹಕವೂ ಗತಿಶೀಲವೂ ಗೋಧನಾಧಿಷ್ಠಿತವೂ ಸಾರ್ವಭೌಮಸತ್ತೆಯ ನಿದರ್ಶಕವೂ ಆಗಿರುವುದರಿಂದ ಇದನ್ನು ಸ್ವತಂತ್ರ

ಭಾರತವು ರಾಜಮುದ್ರೆಯನ್ನಾಗಿ ಸ್ವೀಕರಿಸಿದೆ; ಮತ್ತು ಪ್ರಾಚೀನ ಅಶೋಕನ ಆದರ್ಶವನ್ನು ತನ್ನೆದುರು ಇಟ್ಟುಕೊಂಡುದನ್ನು ಸೂಚಿಸಿದೆ ! ಈ ಸ್ತಂಭಗಳಂತೆಯೇ ಅಲ್ಲಲ್ಲಿ ದೊಡ್ಡ ದೊಡ್ಡ ಸ್ತೂಪಗಳನ್ನು ಅಶೋಕನು ನಿಲ್ಲಿಸಿದ್ದಾನೆ. ಈ ಅರ್ಧವರ್ತುಲಾಕಾರದ ಸ್ತೂಪವು ಒಂದು ವಿಸ್ತೃತವಾದ ಗಚ್ಚಿಯಲ್ಲಿ ನಡುವೆ ದಂಡವಿಲ್ಲದ ಕೊಡೆಯಂತೆ ನಿಲ್ಲಿಸಲಾಗಿದ್ದು ೫೪ ಅಡಿ ಎತ್ತರವಿದೆ. ಮುಂದೆ ಅಶೋಕನ ಮೊಮ್ಮಗ ಸಂಪ್ರತಿಯು ಅಜೀವಕರ ವಾಸಕ್ಕಾಗಿ ಗುಡ್ಡಗಳಲ್ಲಿ ಗುಹೆಗಳನ್ನು ರಚಿಸಿದನು; ಭಿಕ್ಷುಗಳ ವಾಸಕ್ಕಾಗಿ ಪಾಟಲೀಪುತ್ರದ ಹತ್ತಿರ ಅಶೋಕರಾಮ ಮತ್ತು ಕುಕ್ಕುಟಾರಾಮ ಎಂಬೆರಡು ಭವ್ಯ ಮಠಗಳನ್ನು ಕಟ್ಟಿಸಿದನು. ಅಶೋಕನ ಆಳಿಕೆಯಲ್ಲಿ ಕಾಠೇವಾಡದಲ್ಲಿಯ

ಅಶೋಕನ ಸಾಮ್ರಾಜ್ಯ

ತುಶಾಸ್ಪನೆಂಬ ಪಾರಸಿಕ (ಇರಾಣಿ) ಪ್ರಾಂತಾಧಿಕಾರಿಯು ಗಿರನಾರ ಪರ್ವತದ ಬಳಿ ಪ್ರವಾಹವನ್ನು ಕಟ್ಟಿ ಸುದರ್ಶನವೆಂಬ ದೊಡ್ಡ ಕೆರೆಯನ್ನು ಕಟ್ಟಿಸಿ, ಅಲ್ಲಿಂದ ಕಾಲುವೆಗಳ ಮೂಲಕ ನಿರ್ಜಲ ಪ್ರದೇಶಗಳಿಗೆ ನೀರೊದಗುವಂತೆ ಮಾಡಿದನು. ಕಾಶ್ಮೀರದ ಶ್ರೀನಗರವನ್ನು ನೇಪಾಳದಲ್ಲಿಯ ದೇವಪಾಟಣವೆಂಬ ನಗರವನ್ನು ಅಶೋಕನೇ ಕಟ್ಟಿಸಿದನು.

**ಅವನ ಶಿಲಾಲೇಖಗಳ ಬಗ್ಗೆ ಸಾಮಾನ್ಯವಿಚಾರ:** ಅಶೋಕನ ಶಿಲಾಲೇಖಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು— ೧. ಗಿರಿಲೇಖ ೨. ಸ್ತಂಭಲೇಖ, ೩. ಗುಹಾಲೇಖ. ಇವುಗಳಲ್ಲಿ ಅವನು ಸಾಮಾನ್ಯ ಜನಕ್ಕೆ ಆಜ್ಞೆಗಳನ್ನು ಅಧಿಕಾರಿಗಳಿಗೆ ಸೂಚನೆಗಳನ್ನು ಕೊಟ್ಟಿದ್ದಾನೆ. ಅಶೋಕನ ಶಿಲಾಲೇಖದ ಆಜ್ಞೆಗಳು ಬಹುಶಃ 'ದೇವರ ಪ್ರೀತಿಯ ಪ್ರಿಯದರ್ಶಿರಾಜನು ಹೇಳುತ್ತಾನೆ' ಎಂಬ ನಿರ್ದಿಷ್ಟ ವಾಕ್ಯದಿಂದ ಆರಂಭವಾಗುತ್ತವೆ. ಅವನ ಪರಮೇಶ್ವರ ನಿಷ್ಠೆ ಇದರಿಂದ ವ್ಯಕ್ತವಾಗುತ್ತದೆ. ಪ್ರಿಯದರ್ಶಿ ಎಂಬುದು ಅಶೋಕನ ಹೆಸರು. ಬಹುಮಟ್ಟಿನ ಶಿಲಾಲೇಖಗಳಲ್ಲಿ ಒಂದು ವಿಶಿಷ್ಟ ಧರ್ಮಪಂಥದ ಉಪದೇಶಕ್ಕಿಂತ ಮಾನವಧರ್ಮದ ಸಾಮಾನ್ಯ ನೀತಿತತ್ತ್ವಗಳನ್ನೇ ಪುರಸ್ಕರಿಸಲಾಗಿದೆ. ಧರ್ಮವು ಆಚರಣೆಯಲ್ಲಿ ಬರಬೇಕೆಂದು 'ಧರ್ಮಮಾತ್ರ' ಎಂಬ ಸ್ವತಂತ್ರ ಅಧಿಕಾರಿಯನ್ನು ಅವನು ನಿಯಮಿಸಿದನು. ಅವನ ಧರ್ಮಪ್ರಸಾರದ ತಳಮಳ ಇಷ್ಟಕ್ಕೇ ನಿಲ್ಲಲಿಲ್ಲ. ದೇಶ ದೇಶಗಳಿಗೆ ತನ್ನ ದೂತರನ್ನು ಕಳಿಸಿ ಅವನು ಪಶ್ಚಿಮದಲ್ಲಿ ಸಿರಿಯಾ, ಇಜಿಪ್ತ, ಬಿಕ್ಟ್ರಿಯಾಗಳಿಂದ ಉತ್ತರದಲ್ಲಿ ಚೀನ, ನೇಪಾಳ ಮತ್ತು ದಕ್ಷಿಣದಲ್ಲಿ ಸಿಂಹಲದ್ವೀಪ (ಸಿಲೋನ)ದ ವರೆಗೆ ಧರ್ಮಪ್ರಸಾರ ಮಾಡಿದನು. ಸಿಂಹಲಕ್ಕೆ ತನ್ನ ಮಕ್ಕಳಾದ ಮಹೇಂದ್ರ ಮತ್ತು ಸಂಘಮಿತ್ರೆಯರನ್ನೇ ಕಳಿಸಿದನು.

**ಅವನ ಬೌದ್ಧಧರ್ಮೀಯ ಕಾರ್ಯ :** ಅಶೋಕನು ಬೌದ್ಧಧರ್ಮಕ್ಕಾಗಿ ಅತಿಶಯವಾಗಿ ಶ್ರಮಿಸಿದನು. ತನ್ನ ಶಿಲಾಲೇಖಗಳಲ್ಲಿ ಅವನು ಕ್ವಚಿತ್ತಾಗಿ ಬೌದ್ಧಧರ್ಮದ ಪುರಸ್ಕಾರ ಮಾಡಿದ್ದಾನೆ; ಬೌದ್ಧರು ಓದಬೇಕಾದ ಗ್ರಂಥಗಳ ಪಟ್ಟಿಯನ್ನೂ ಕೊಟ್ಟಿದ್ದಾನೆ. ಭಾಬ್ರೂ ಎಂಬಲ್ಲಿಯ ಶಿಲಾಲೇಖವೊಂದರ ಹೊರತು ಬೌದ್ಧಧರ್ಮದ ಪುರಸ್ಕಾರದ ಲೇಖಗಳು ಉಪಲಬ್ಧವಿಲ್ಲ. ಅಶೋಕನು ಸ್ವಯಂ ಬೌದ್ಧಧರ್ಮೀಯನಾದರೂ ಇತರ ಧರ್ಮಗಳನ್ನು ಸಮದೃಷ್ಟಿಯಿಂದ ನೋಡುತ್ತಿದ್ದನು. ಬೇರೆ ಬೇರೆ ಧರ್ಮಗಳ ಜನರು ಯಾವಾಗಲೂ ಒಂದೆಡೆ ಸೇರುತ್ತಿರಬೇಕೆಂದು ಅವನು ಒಂದು ಆಜ್ಞೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಬೌದ್ಧಧರ್ಮದಲ್ಲಿ ಉದ್ಭವಿಸುವ ವಾದಗ್ರಸ್ತ ವಿಷಯಗಳನ್ನು ನಿರ್ಣಯಿಸಿಕೊಳ್ಳಲು ಅಶೋಕನು ಧರ್ಮಪರಿಷತ್ತನ್ನು ಕೂಡಿಸಿದನು. ಇದು ಮೂರನೆಯ ಅಧಿವೇಶನವು. ಈ ಅಧಿವೇಶನವು ಒಂಬತ್ತು ತಿಂಗಳು ನಡೆದು ಅನೇಕ ಶಂಕೆಗಳ ನಿರಸನವಾಯಿತು.

**ಯೋಗ್ಯತೆ ಮತ್ತು ಮೃತ್ಯು :** ಹಿಂದುಸ್ತಾನದ ಪ್ರಾಚೀನ ಇತಿಹಾಸದಲ್ಲಿ ತನ್ನ ಮಹತ್ಕಾರ್ಯಗಳಿಂದ ಒಮ್ಮೆಲೆ ಕಂಗೊಳಿಸುವ ಮತ್ತು ವಿಪುಲ ಐತಿಹಾಸಿಕ

ಸಾಧನಗಳಿಂದ ಅರ್ವಾಚೀನ ಜನರಿಗೆ ಹೆಚ್ಚು ಸ್ಪಷ್ಟ ಪರಿಚಯವುಳ್ಳವನೆಂದರೆ ಅಶೋಕನೇ ಎನ್ನಬಹುದು. ಅಶೋಕನಂಥವರು ಜಗತ್ತಿನಲ್ಲಿ ಅಪರೂಪವಾಗಿಯೇ ಉದ್ಭವಿಸುವರು. ಅವನ ಭೂತದಯೆ ವಿಶಾಲವಾದುದು. ಜನರಿಗಾಗಿ ಔಷಧಾಲಯಗಳನ್ನು ತೆರೆದುದು ಮಾತ್ರವಲ್ಲ, ಪಶುಗಳಿಗೂ ಔಷಧೋಪಚಾರವಾಗಬೇಕೆಂದು ಅವುಗಳಿಗಾಗಿಯೂ ದವಾಖಾನೆಗಳನ್ನು ಸ್ಥಾಪಿಸಿದನು. ಔಷಧಗಳ ಕೊರತೆಯಾಗಬಾರದೆಂದು ವನಸ್ಪತಿಗಳ ವನಗಳನ್ನು ಬೆಳೆಯಿಸಿದನು. ತನ್ನ ಪ್ರಜೆಗಳ ಸ್ಥಿತಿಯನ್ನು ಪ್ರತ್ಯಕ್ಷವಾಗಿ ಅರಿತುಕೊಳ್ಳಲು ರಾಜ್ಯದಲ್ಲಿ ತಿರುಗಾಡುತ್ತಿದ್ದನು. ಪ್ರಜೆಗಳೆಂದರೆ ತನ್ನ ಮಕ್ಕಳೆಂದು ಅವನು ಹೇಳುತ್ತಿದ್ದನು. ತಾನು ಊಟಕ್ಕೆ ಕುಳಿತಿರಲಿ, ಶಯನಗೃಹದಲ್ಲಿರಲಿ ಎಲ್ಲಿದ್ದರೂ ಪ್ರಜೆಗಳ ವಿಷಯಕವಾದ ಸಮಾಚಾರವನ್ನು ತನಗೆ ಅರುಹಲು ಅಭ್ಯಂತರವಿಲ್ಲವೆಂದು ಗುಪ್ತಚಾರರಿಗೆ ಅವನು ವಿಧಿಸಿದ್ದನು. ಪ್ರಜೆಗಳ ಶಿಕ್ಷಣ ವಿಷಯದಲ್ಲಿ ಅವನಿಗೆ ಬಹಳ ಆಸ್ಥೆಯಿತ್ತು. ನಾಲಂದಾದಲ್ಲಿಯ ಮಹಾವಿದ್ಯಾಲಯವನ್ನು ಸ್ಥಾಪಿಸಿದವನು ಈತನೇ. ಬರುಹೋಗುವವರು ಓದುವಂತಹ ಸ್ಥಳದಲ್ಲಿಯೇ ಅವನ ಶಿಲಾಲೇಖಗಳನ್ನು ಕೆತ್ತಿದರು. ಇದರಿಂದ, ಆಗ ಹೆಚ್ಚಾಗಿ ಭಾರತದಲ್ಲಿ ಸಾಕ್ಷರತೆಯ ಪ್ರಸಾರವು ಹೆಚ್ಚಾಗಿ ಆಗಿರಬೇಕೆಂದು ಹೇಳಬಹುದಾಗಿದೆ. ಕ್ರಿ. ಪೂ. ೨೩೨ರಲ್ಲಿ ಅಶೋಕನು ಮರಣಹೊಂದಿದನು.

**ಅವನ ರಾಜಸತ್ತೆಯ ಸ್ವರೂಪ:** ಅಶೋಕನು ರಾಜ್ಯದಲ್ಲಿ ನಾಲ್ಕು ಭಾಗಗಳನ್ನು ಮಾಡಿದ್ದನು. ಉಜ್ಜಯನಿ (ಮಾಳವಾ), ತೋಸಲಿ (ಕಲಿಂಗ), ಸುವರ್ಣಗಿರಿ (ಮೈಸೂರು), ಮತ್ತು ತಕ್ಷಶಿಲೆ (ಪಂಜಾಬ) ಇವು ಆ ಭಾಗಗಳ ಮುಖ್ಯ ಪಟ್ಟಣಗಳು. ಒಂದೊಂದು ಭಾಗಕ್ಕೆ ಒಬ್ಬೊಬ್ಬ ರಾಜ ಪ್ರತಿನಿಧಿ (ಸುಭೇದಾರ) ಇರುತ್ತಿದ್ದನು. ಕೆಲ ಪ್ರಾಂತಗಳ ಆಡಳಿತ ರಾಜಪುತ್ರರ ಕೈಯಲ್ಲಿರುತ್ತಿತ್ತು. ಇಷ್ಟು ದೊಡ್ಡ ಸಾಮ್ರಾಜ್ಯವು ಅನಿಯಂತ್ರಿತ ಏಕತಂತ್ರೀ ರಾಜಸತ್ತೆಯಲ್ಲಿ ಇರುವುದು ಶಕ್ಯವೇ ಇರಲಿಲ್ಲ. ಅಧಿಕಾರ ವಿಭಜನೆ ಆವಶ್ಯಕವಾಗಿತ್ತು. ಮುಖ್ಯ ರಾಜನ ಅಥವಾ ಪ್ರಾಂತಿಕ ಪ್ರತಿನಿಧಿಯ ಸತ್ತೆಗೆ ಇನ್ನೊಬ್ಬರ ಬಂಧನವಿರಲಿಲ್ಲ. ಆದರೆ ಆ ರಾಜಸತ್ತೆಯನ್ನು ಸಂಪೂರ್ಣವಾಗಿ 'ಅನಿಯಂತ್ರಿತ ರಾಜಸತ್ತೆ' ಯೆಂಬ ಶಬ್ದದಿಂದ ಕರೆಯಲಾಗದು. ತನ್ನ ಮನಸಿಗೆ ಬಂದ ಕಾಯದೆ ಮಾಡಲು ರಾಜನಿಗೆ ಸ್ವಾತಂತ್ರ್ಯವಿರಲಿಲ್ಲ. ಪ್ರಸ್ಥಾಪಿತ ಧರ್ಮ, ರೀತಿ ನಡತೆ, ಪದ್ಧತಿಗಳು ಪ್ರಾಚೀನ ಕಾಲದಿಂದ ನಡೆದುಬಂದವಾಗಿರುತ್ತಿದ್ದವು. ಅವುಗಳಲ್ಲಿ ವ್ಯತಾಸಮಾಡುವ ಮೊದಲು ಧರ್ಮಾಧಿಕಾರಿಗಳ ಹಾಗೂ ಧರ್ಮಪರಿಷತ್ತಿನ ಒಪ್ಪಿಗೆ ಪಡೆಯಬೇಕಾಗಿತ್ತು. ಅವರ ನಿರ್ಣಯವನ್ನು ಬದಿಗೊತ್ತಿ ನಡೆಯಲು ರಾಜರು ಸಹಸಾ ಧೈರ್ಯ ಮಾಡುತ್ತಿರಲಿಲ್ಲ. ಅಲ್ಲದೆ ಜಾತಪಂಚಾಯತಿ, ಗೋತ್ರಪಂಚಾಯತಿ, ಗ್ರಾಮಪಂಚಾಯತಿಗಳು ತಮ್ಮ ತಮ್ಮ ಮಟ್ಟಿಗೆ ಕಾಯಿದೆ ಮಾಡುತ್ತಿದ್ದವು. ಅವುಗಳನ್ನು ರಾಜಸತ್ತೆ ಜಾರಿಗೆ

ತರುತ್ತಿತ್ತು. ರಾಜ್ಯದ ಬೇರೆ ಬೇರೆ ಭಾಗಗಳ ಪ್ರತಿನಿಧಿಗಳನ್ನೊಳಗೊಂಡ ಮಧ್ಯವರ್ತಿ ಶಾಸನಮಂಡಲವೊಂದಿರುತ್ತಿತ್ತು. ಆದರೆ ಅವರ ಚುನಾವಣೆಯಾಗುತ್ತಿರಲಿಲ್ಲ. ಮತ್ತು ರಾಜನ ಮೇಲೆ ಅವರ ವಿಧ್ಯುಕ್ತ (ಕಾಯದೇಶೀರ) ಅಧಿಕಾರವೂ ಇರುತ್ತಿರಲಿಲ್ಲ. ಈ



ಸಾಂಚಿಯ ಸ್ತೂಪ

ಮಂಡಲಕ್ಕೆ ಮಂತ್ರಿಪರಿಷದ್ ಎನ್ನುತ್ತಿದ್ದರು. ರಾಜನು ಬಹುಶಃ ಅವರಲ್ಲೊಬ್ಬನನ್ನು ಪ್ರಧಾನನನ್ನಾಗಿ ಮಾಡಿಕೊಳ್ಳುತ್ತಿದ್ದನು. ಒಟ್ಟಾರೆ, ನಿಜವಾಗಿ ನೋಡಿದರೆ

ರಾಜಸತ್ತೆ ಅನಿಯಂತ್ರಿತವಾದುದಿದ್ದರೂ, ಪ್ರತ್ಯಕ್ಷ ವ್ಯವಹಾರದಲ್ಲಿ ರಾಜನು ಪ್ರಜೆಗಳ ಒಲವನ್ನು ದುರ್ಲಕ್ಷಿಸುವಂತಿರಲಿಲ್ಲ.

**ಪ್ರಾಂತಿಕ ರಾಜ್ಯವ್ಯವಸ್ಥೆ:** ಮಧ್ಯವರ್ತಿ ರಾಜಸತ್ತೆಯ ಅಧೀನದಲ್ಲಿ ಪ್ರತಿ ಪ್ರಾಂತಕ್ಕೆ 'ರಜ್ಜುಕ' ನೆಂಬ ಅಧಿಕಾರಿಯಿದ್ದನು. ಈ ಅಧಿಕಾರಿಗಳ ಬಗ್ಗೆ ಅಶೋಕನು, ತಂದೆತಾಯಿಗಳು ಕುಶಲೆಯಾದ ನಂಬುಗೆಯ ದಾದಿಗೆ ಮಗುವಿನ ಸಂಗೋಪನೆಯ ಭಾರವನ್ನೊಪ್ಪಿಸಿ ನಿಶ್ಚಿಂತರಾಗುವ ಹಾಗೆ; ನಾನು ನನ್ನ ಪ್ರಜೆಗಳ ಸಂವರ್ಧನೆಯ ಕಾರ್ಯವನ್ನು ವಿಶ್ವಾಸಿಗಳಾದ ರಜ್ಜುಕರಿಗೆ ಒಪ್ಪಿಸಿದ್ದೇನೆ. ಎಂದಿದ್ದಾನೆ. ರಜ್ಜುಕನ ಕೈಕೆಳಗೆ 'ಆದೇಶಿಕ' ಎಂಬ ಅಧಿಕಾರಿಯಿದ್ದನು. ಪ್ರತಿಯೊಂದು ಖಾತೆಯ ಮೇಲಾಧಿಕಾರಿಗಳಿಗೆ 'ಮಹಾಮಾತ್ರ' ರೆಂದು ಎನ್ನುತ್ತಿದ್ದರು. ಅವನಿಗೊಪ್ಪಿಸಿದ ಖಾತೆಯ ಹೆಸರನ್ನು ಆ ಮಹಾಮಾತ್ರನ ಪದದ ಹಿಂದೆ ಜೋಡಿಸುತ್ತಿದ್ದರು. ಧರ್ಮ ಮಹಾಮಾತ್ರ ಅಂತ ಮಹಾಮಾತ್ರ (ರಾಜ್ಯಸೀಮಾ ರಕ್ಷಕ), ಮಹಾಮಾತ್ರ ನಗರ ವ್ಯವಹಾರಕ ಇತ್ಯಾದಿ ರಾಜ್ಯಕಾರಭಾರವನ್ನು ನಡೆಸುವ ಕಾರ್ಯಕರ್ತನಿಗೆ 'ಪುರುಷ' ಎಂಬ ಸಂಜ್ಞೆಯಿತ್ತು; ಜಿಲ್ಹಾಧಿಕಾರಿಗೆ 'ಸ್ಥಾನಿಕ' ಎನ್ನುತ್ತಿದ್ದರು. ಪ್ರತಿ ಹಳ್ಳಿಯ ಆಡಳಿತಕ್ಕಾಗಿ ಗ್ರಾಮಪಂಚಾಯತಿ ಇತ್ತು.

ಅಂತೂ, ಹಿಂದಿನ ರಾಜರು ಧರ್ಮಸಭೆಯ ಆಜ್ಞೆಯನ್ನು ಅಲ್ಲಗಳೆಯುತ್ತಿರಲಿಲ್ಲ; ಜನರು ನಡೆಸುತ್ತಿದ್ದ ತಮ್ಮ ಹಳ್ಳಿಯು ಕಾರಭಾರದಲ್ಲಿ ಅವನು ಕೈಹಾಕುತ್ತಿರಲಿಲ್ಲ. ಆದರಿಂದ ರಾಜಸತ್ತೆ ಅನಿಯಂತ್ರಿತವೆಂದು ಕಂಡರೂ ವಾಸ್ತವದಲ್ಲಿ ಮರ್ಯಾದಿತವಾಗಿತ್ತು.

**ಸಮಾರೋಪ:** ಅಶೋಕನ ಆಳಿಕೆಯೆಂದರೆ ಪ್ರಾಚೀನ ರಾಜಸತ್ತೆಯ ಉತ್ಕರ್ಷಕಾಲವು. ಇಷ್ಟು ಸಹಿಷ್ಣುತೆ, ಸರ್ವಸಂಗ್ರಾಹಕತೆ, ಗತಿಶೀಲ ಮತ್ತು ಪ್ರಾಣಿಮಾತ್ರ ಸುಖಸಾಧನವೃತ್ತಿ. ಭಾರತದ ಇತಿಹಾಸದಲ್ಲಿಯೂ ಹಿಂದೆ ಅಥವಾ ಮುಂದೆ ಎಂದೂ ಕಂಡುಬರುವುದಿಲ್ಲ. ಇತರ ದೇಶಗಳ ಇತಿಹಾಸದಲ್ಲಿ ಮಾನವೀ ಕರ್ತೃತ್ವವು ಬೇರೆ ಬಹುವಿಧ ರೂಪಗಳಲ್ಲಿ ಪ್ರಕಟವಾಯಿತು. ಆದರೆ ಅಶೋಕಕಾಲದ ಭಾರತವು ಕಾಲದ ಮರುಭೂಮಿಯಲ್ಲಿ ತನ್ನ ಹೆಜ್ಜೆಗಳನ್ನು ಸ್ಪಷ್ಟವಾಗಿ ಮೂಡಿಸಿದೆಯೆಂಬಲ್ಲಿ ಸಂದೇಹವಿಲ್ಲ. ಕ್ರಿ. ಪೂ. ೬ನೆಯ ಶತಕದಿಂದ ೩ನೆಯ ಶತಕದ ವರೆಗೆ ಮುನ್ನೂರು ವರುಷಗಳಲ್ಲಿ, ಬೌದ್ಧ–ಜೈನ ಧರ್ಮಗಳ ಪ್ರಸಾರ, ಸಾಮಾಜಿಕ ವಿಷಮತೆಯ ವಿರುದ್ಧ ಆಂದೋಲನ, ಸುಸಂಘಟಿತ ಸಾಮ್ರಾಜ್ಯದ ನಿರ್ಮಿತಿ ಆ ಸಾಮ್ರಾಜ್ಯಕ್ಕೆ ಶಾಂತತಾವಾದಿ ರೂಪಕೊಡಲು ಅಶೋಕನ ಪ್ರಯತ್ನ ಇವುಗಳು ಭಾರತದಲ್ಲಿ ಪ್ರಾಮುಖ್ಯವಾಗಿ ಕಂಡುಬರುತ್ತವೆ. ಈ ಖಂಡಪ್ರಾಯ ವಿಶಾಲದೇಶದಲ್ಲಿಯ ವಿವಿಧ ಸಮಾಜಗಳಲ್ಲಿಯ ಸಾಹಚರ್ಯ ಮತ್ತು ಸಂಘರ್ಷಗಳೊಳಗಿಂದ

ಚೊಕ್ಕ ಭಾರತೀಯ ಸಮಾಜವು ನಿರ್ಮಿತವಾಗುತ್ತಲಿತ್ತು. ಈ ನಿರ್ಮಿತಿಗೆ ಮೌರ್ಯರ ಏಕಛತ್ರೀ ಸಾಮ್ರಾಜ್ಯದಿಂದ ದೊಡ್ಡ ಸಹಾಯವಾಯಿತು.

## ಪ್ರಶ್ನೆಗಳು

೧. ಚಂದ್ರಗುಪ್ತ ಮೌರ್ಯನ ರಾಜ್ಯವ್ಯವಸ್ಥೆಯನ್ನು ವರ್ಣಿಸಿರಿ. ೨. 'ಜಾಗತಿಕ ಇತಿಹಾಸದ ರೂಪರೇಷೆ' ಎಂಬ ಗ್ರಂಥವನ್ನು ಬರೆದ ನಾಮಾಂಕಿತ ಎಸ್. ಜಿ. ವೇಲ್ಸರು ಅಶೋಕನ ಬಗ್ಗೆ ಜಗತ್ತಿನಲ್ಲಿಯೇ ಎಲ್ಲಕ್ಕೂ ದೊಡ್ಡ ರಾಜನೆಂದು ಹೇಳಿದ ಮಾತನ್ನು ಸ್ಪಷ್ಟೀಕರಿಸಿರಿ. ೩. ಅಶೋಕನ ಲೇಖಗಳು ದೊರೆತ ಊರುಗಳನ್ನು ಈ ಪುಸ್ತಕದಲ್ಲಿಯ ನಕಾಶದಲ್ಲಿ ನೋಡಿರಿ ಮತ್ತು ಅವನ್ನು ಬರೆಯಿರಿ.

## ಅಷ್ಟಮ ಖಂಡ

# ಕ್ರೈಸ್ತ ಧರ್ಮದ ಉದಯ

---

**ಕ್ರೈಸ್ತಧರ್ಮ** : ಕ್ರೈಸ್ತಧರ್ಮವು ಆಶಿಯದಲ್ಲಿ ಹುಟ್ಟಿತು; ಮೊದಲು ಯುರೋಪ ದಲ್ಲಿ ಭರದಿಂದ ಪ್ರಸಾರವಾಯಿತು. ಈಗ ಜಗತ್ತಿನಲ್ಲಿ ಇತರ ಯಾವುದೇ ಧರ್ಮದವರಿಗಿಂತ ಈ ಧರ್ಮೀಯರ ಸಂಖ್ಯೆ ದೊಡ್ಡದು. ಪೃಥ್ವೀತಲದಲ್ಲಿ ಕ್ರೈಸ್ತ ಧರ್ಮೀಯರು ಹೋಗದಿದ್ದ ದೇಶವೊಂದೂ ಇಲ್ಲ. ಕ್ರೈಸ್ತರು ಮೊದಲು ಕ್ರಿ.ವ. ಹದಿನೈದನೆಯ ಶತಕದಲ್ಲಿ ಪೋರ್ತುಗೀಜರೆಂದು ಭಾರತಕ್ಕೆ ಬಂದರೆಂದು ಹಲವರ ತಿಳಿವಳಿಕೆ. ಆದರೆ ಇದು ಸರಿಯಲ್ಲ. ಮದ್ರಾಸು-ತ್ರಾವಣಕೋರ ಭಾಗದಲ್ಲಿ ಕ್ರೈಸ್ತರ ವಸತಿ ಬಹು ಪುರಾತನವಾಗಿದೆ. ಸೇಂಟ್ ಥಾಮಸ್ ಎಂಬ ಅವರ ಧರ್ಮೋಪದೇಶಕನು ಕ್ರಿ. ವ. ೬೮ರಲ್ಲಿ * ಭಾರತದಲ್ಲಿಯೇ ಮಡಿದನು. ಈತನ ಸಮಾಧಿ ಮದರಾಸಿನ ಬಳಿ

---

* ಕ್ರಿ. ವ. ೬೮ ರ ಅಥವಾ ೭೨ ರ ಎಂಬ ಬಗ್ಗೆ ಸಂಶೋಧಕರಲ್ಲಿ ವಾದವಿದೆ.

ಮೈಲಾಪುರ ಭಾಗದಲ್ಲಿ ಸೇಂಟ್ ಥೋಮಸ್ ಎಂಬಲ್ಲಿದೆ. ಕ್ರೈಸ್ತಧರ್ಮದ ಹುಟ್ಟು ಬೆಳೆವಣಿಗೆಗಳ ಬಗ್ಗೆ ಈ ಖಂಡದಲ್ಲಿ ಸಮಾಲೋಚಿಸಬೇಕಾಗಿದೆ.

**ಜ್ಯೂ :** ಜೀಝುಸ್ ಅಥವಾ ಯೇಸು ಎಂಬವನು ಕ್ರೈಸ್ತಧರ್ಮದ ಸ್ಥಾಪಕನು. ಅವನು ಹುಟ್ಟುವ ಮೊದಲೇ ಎಷ್ಟೋ ಶತಕಗಳ ಪೂರ್ವದಲ್ಲಿ ಪಲೆಸ್ತಾಯಿನ್ ಪ್ರಾಂತದಲ್ಲಿ ಹಿಬ್ರೂ ಜನರು ವಾಸಿಸಿದರು. ಕ್ರಿ. ಪೂ. ದ ೨೦೦೦ ವರುಷಗಳ ಕಾಲ ದಲ್ಲಿ ಅಬ್ರಾಹಮ್ ಎಂಬ ಹಿಬ್ರೂ ನಾಯಕನು ಟೈಗ್ರೀಸ ನದಿಯ ಕೊಳ್ಳದ ಮೂಲಕ ಪಶ್ಚಿಮಕ್ಕೆ ಹೋಗಿ ಪಲೆಸ್ತಾಯಿನಿನಲ್ಲಿ ಮೊದಲು ವಸಾಹತು ಮಾಡಿದನು. ಮುಂದೆ ಈ ಜನರು ಈಜಿಪ್ತಕ್ಕೆ ಹೋದರು. ಆದರೆ ಅಲ್ಲಿ ಫಾರೋಹನು ಅವರನ್ನು ಗುಲಾಮ ರನ್ನಾಗಿ ಮಾಡಿದನು. ಆ ದುಸ್ಥಿತ್ಯದಿಂದ ಅವರನ್ನು ಬಿಡುಗಡೆ ಮಾಡಿದವನು ಮೊಝೆಸ್ ಎಂಬವನು. ಅವರೆಲ್ಲರೂ ಈಜಿಪ್ತದಿಂದ ಪಲೆಸ್ತಾಯಿನಿಗೆ ಮರಳಿ ಬರುತ್ತಿರುವಾಗ ಮೊಝೆಸ್ ಅವರಿಗೆ ಕಾಯಿದೆಯ ಕಾಣಿಕೆಯನ್ನಿ ತ್ತನು. ಈ ಕಾಯಿದೆಯನ್ನು ಆಧರಿಸಿ ಹಿಬ್ರೂ ಜನರು ಪಲೆಸ್ತಾಯಿನಿನಲ್ಲಿ ತಮ್ಮ ಸಮಾಜವನ್ನು ಪುನರ್ಘಟಿಸಿ ಹೊಸ ಜೀವನವನ್ನು ಆರಂಭಿಸಿದರು. ಕ್ರಿ. ಪೂ. ೧೦ ನೆಯ ಶತಕದಲ್ಲಿ ಅವರಲ್ಲಿ ಡೆವಿಡ್ ಎಂಬ ರಾಜನು ಆಗಿಹೋದನು. ಆತನು ಜೆರುಸ್ಲೇಮ್ ನಗರವನ್ನು ಸ್ಥಾಪಿಸಿದನು. ಅವನ ಮಗ ಸಾಲೋಮನ್ ಪಾಲೆಸ್ತಾಯಿನ್‌ರಾಜ್ಯವನ್ನು ಊರ್ಜಿತಗೊಳಿಸಿದನು. ಅವನ ಮೃತ್ಯು ವಿನ (ಕ್ರಿ. ಪೂ. ೯೨೫) ಅನಂತರ ಪಲೆಸ್ತಾಯಿನ್ ರಾಜ್ಯದಲ್ಲಿ ಜಗಳಗಳು ಹುಟ್ಟಿ ಕೊಂಡು ರಾಜ್ಯವು ಎರಡು ತುಂಡುಗಳಾದವು. ಉತ್ತರಭಾಗವು ಇಸ್ರಾಯೆಲ್ ಮತ್ತು ದಕ್ಷಿಣಭಾಗವು ಜ್ಯೂಡಾರಿ, ಜೆರುಸ್ಲೇಮವು ಜ್ಯೂಡಾದಲ್ಲಿದ್ದು ಅಲ್ಲಿಯ ಜನರು ಜ್ಯೂ ಎಂದು ಇತಿಹಾಸದಲ್ಲಿ ಹೆಸರಾಗಿದ್ದಾರೆ.

**ಅವರ ಧರ್ಮಕಲ್ಪನೆಯ ವಿಕಾಸ :** ಈ ಜ್ಯೂ ಜನರು ಬೆಳೆಯಿಸಿದ ಧರ್ಮ ಕಲ್ಪನೆಯನ್ನವಲಂಬಿಯೇ ಮುಂದೆ ಕ್ರೈಸ್ತಧರ್ಮವು ಕಟ್ಟಲ್ಪಟ್ಟಿತು. ಜ್ಯೂಗಳು ಎಂದೂ ಸ್ವಾಸ್ಥ್ಯವೆಂಬುದನ್ನೇ ಕಾಣಲಿಲ್ಲ. ಅವರ ಮೇಲೆ ಸಂಕಟಗಳು ಒದಗಿದಂತೆಲ್ಲ ಅವರ ಧರ್ಮಕಲ್ಪನೆ ವಿಕಾಸವಾಗುತ್ತ ಬಂದಿತು. ದೇವರು ಒಬ್ಬನೇ ಇದ್ದಾನೆ; ರಾಗಲೋಭ ಮೊದಲಾದ ವಿಕಾರಗಳು ಅವನಿಗಿಲ್ಲ; ಸರ್ವಮಾನವರ ಬಗ್ಗೆ ಅವನ ಪ್ರೇಮವಿದೆ— ಈ ಕಲ್ಪನೆಗಳು ಅವರಲ್ಲಿ ಮೊದಲು ತಲೆದೋರಿದವು. ಈಜಿಪ್ತದ ಆಮೆನ್‌ಹಟೆಪ್ಪನಿಂದ ಈ ಜ್ಞಾನವು ಅವರಿಗೆ ಆಗಿದ್ದರೂ ಆಗಿರಬಹುದು. ಕ್ರಿ. ಪೂ. ಏಳನೆಯ ಶತಕದಲ್ಲಿ ಅಸೀರಿ ಜನರು ಅವರನ್ನು ಸೆರೆಹಿಡಿದರು. ಆಗ ತಪ್ಪುಗಾರರನ್ನು ಪರಮೇಶ್ವರನು ದಂಡಿಸುವನೆಂಬ ಕಲ್ಪನೆ ಅವರಲ್ಲಿ ದೃಢವಾಯಿತು. ಮುಂದೆ ಅವರನ್ನು

ನೆಬೂಚಾಡನೇಜರನು ಸೆರೆಹಿಡಿದು ಬಾಬಿಲೋನಿಯಕ್ಕೆ ಒಯ್ದನು. ಆಗ ಅವರಲ್ಲ ನೇಕರು, ಜೆರುಸಲೇಮದಲ್ಲಿಯ ದೇವರನ್ನೂ ಗುಡಿಗಳನ್ನೂ ಬಿಟ್ಟುಹೋಗಬೇಕಾಯಿ ತಲ್ಲಾ ಎಂದು ಅತ್ತರು. ಇಸಾಯಾ ಎಂಬ ಅವರ ಧರ್ಮಗುರು ಅವರಿಗೆ "ಅಳಬೇಡಿರಿ ಪಲೆಸ್ತಾಯಿನಿಯಲ್ಲಿರುವ ದೇವರು ಬಾಬಿಲೋನಿಯದಲ್ಲಿಯೂ ಇದ್ದಾನೆ; ಎಲ್ಲಕಡೆಗೂ ಅವನಿದ್ದಾನೆ; ಆತನನ್ನು ಮೊರೆಹೋಗಿರಿ" ಎಂದು ತಿಳಿಹೇಳಿ ದನು ಮುಂದೆ ಕೆಲದಿನಗಳಲ್ಲಿ ಖಾಲ್ಡಿಯಾ ನಾಶಹೊಂದಿತು; ಜ್ಯೂಗಳು ಮುಕ್ತ ರಾದರು. ಇದೆಲ್ಲ ದೇವರ ಕೃಪೆಯೆಂದು ಅವರು ನಂಬಿದರು. ಅವರಲ್ಲಿಯ ಧರ್ಮೋಪ ದೇಶಕನು, "ದೇವರಲ್ಲಿ ವಿಶ್ವಾಸವಿಡಿರಿ; ಒಮ್ಮೆ‌ಲ್ಲೊಮ್ಮೆ ಅವನು ಭೂಮಿಯಲ್ಲಿ ಅವತರಿಸುವನು, ನಿಮ್ಮೆಲ್ಲರನ್ನೂ ಉದ್ಧಾರಮಾಡುವನು" ಎಂದು ಬೋಧಿಸಿದನು. ಈ ಅವತಾರಕ್ಕೆ ಜ್ಯೂ ಜನರು ಮೆಸಾಯಾ ಎನ್ನುತ್ತಾರೆ. ಈಗ ಅವರು ಧರ್ಮ ಭಾವನೆಯಿಂದ ಪ್ರೇರಿತರಾಗಿ ತಮ್ಮ ತಮ್ಮ ಉದ್ಯೋಗದಲ್ಲಿ ತೊಡಗಿದರು. ಅವರ ಜೀವನಕ್ಕೆ ಬೇರೊಂದು ಬಣ್ಣವೇ ಬಂದಿತು. ಕ್ರಿ. ಪೂ. ಎರಡನೆಯ ಶತಕದಲ್ಲಿ ಗ್ರೀಕರ ಮುಂದಾಳು ಎಂಟಿಕ್ಲೋಕಸ್ ಎಂಬವನು ಅವರ ಮೇಲೆ ದಾಳಿಯಿಟ್ಟನು. ಆಗ ಜ್ಯೂಗಳು ಧರ್ಮಾಭಿಮಾನದಿಂದ ಪ್ರೇರಿತರಾಗಿ, ಒಕ್ಕಟ್ಟಿನಿಂದ ಕಾದಿ ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಂಡರು. ಪಲೆಸ್ತಾಯಿನ್ ತಮ್ಮ ಪವಿತ್ರದೇಶ, ಜರುಸಲೇಮ್ ತಮ್ಮ ಪವಿತ್ರನಗರ, ಜ್ಯೂ ಎಂಬುದು ತಮ್ಮ ಧರ್ಮ, ಮತ್ತು ಹಿಬ್ರೂ ತಮ್ಮ ಭಾಷೆ—ಎಂದು ಇವೆಲ್ಲವನ್ನೂ ಅವರು ಉತ್ಕಟವಾಗಿ ಪ್ರೀತಿಸುತ್ತಿದ್ದರು. ಮುಂದೆ ಜ್ಯೂಗಳು ವ್ಯಾಪಾರದಲ್ಲಿಯೂ ಸಾವುಕಾರಿಕೆ ವ್ಯವಹಾರದಲ್ಲಿಯೂ ಅಭಿ ವೃದ್ಧಿ ಹೊಂದಿದರು. ವ್ಯಾಪಾರ-ವ್ಯವಹಾರಗಳಿಗೆಂದು ಜಗತ್ತನ್ನೆಲ್ಲ ಸುತ್ತಿದರು. ಆದರೆ, ಸಾವುಕಾರಿಕೆಯ ವ್ಯವಹಾರದಿಂದಾಗಿ ಅವರಿಗೆ ಲೋಕಪ್ರಿಯತೆ ಎಲ್ಲಿಯೂ ಲಭಿಸಲಿಲ್ಲ.

* **ಜಿಝುಸನ ಜನ್ಮ**: ಈ ಜ್ಯೂಗಳಲ್ಲಿ ಬೆಥ್‌ಲೆಮ್ ಎಂಬಲ್ಲಿ ಜಿಝುಸನ ಜನನವಾಯಿತು. ಮೇರಿ ಅಥವಾ ಮರ್‍ಯಾ ಎಂಬುದು ಆತನ ತಾಯಿಯ ಹೆಸರು. ಹೆರಿಗೆಗಿಂತ ಸ್ವಲ್ಪದಿನ ಮಾತ್ರ ಮುಂಚೆ ಬೆಥ್ಲೆಮಿಗೆ ಬಂದಿದ್ದಳು. ಅವಳಿಗೆ ಅಲ್ಲಿ ಒಳ್ಳೆಯ ಸ್ಥಳ ಸಿಕ್ಕಲಿಲ್ಲ; ಒಂದು ಕೊಟ್ಟಿಗೆಯಲ್ಲಿಯೇ ಇಳಿದುಕೊಂಡಳು. ಅಲ್ಲಿಯೇ ಯೇಸುವನ್ನು ಹೆತ್ತಳು. ಅವನು ಹುಟ್ಟುವ ವೇಳೆಯಲ್ಲಿ ಕೆಲ ಕುರಿಗಾಹಿಗಳು

* ಯೇಸು ಎಂಬುದು ಯುರೋಪಿಯನ್ ಜಿಝುಸ್ ಎಂಬುದರ ದೇಶೀಯ ರೂಪ.

# ಯೇಸು ಕ್ರಿಸ್ತ



"ನೀವು ನಿಮ್ಮ ಶತ್ರುಗಳನ್ನು ಸಹ ಪ್ರೀತಿಸಿರಿ. ಯಾರನ್ನೂ ದ್ವೇಷಿಸಬೇಡಿರಿ. ನಿಮ್ಮನ್ನು ಶಪಿಸುವವರಿಗೂ ನೀವು ಒಳ್ಳೆಯದನ್ನು ಮಾಡಿರಿ. ಹೀಗೆ ಮಾಡಿದರೇನೆ ದೇವನು ಪ್ರಸನ್ನನಾಗುತ್ತಾನೆ.

ನೀವು ನಿಮ್ಮ ಸತ್ಕಾರ್ಯಗಳನ್ನು ಗುಪ್ತವಾಗಿ ಇರಿಸಿರಿ. ಬಲಗೈಯಿಂದ ಕೊಟ್ಟ ದಾನವನ್ನು ಎಡಗೈಗೂ ತಿಳಿಯಗೊಡಬೇಡಿರಿ.

—ಯೇಸುವಿನ ಪರ್ವತದ ಮೇಲಿನ ಉಪದೇಶ

ಅಗ್ಗಿಷ್ಟಿಗೆ ಹೊತ್ತಿಸಿಕೊಂಡು ಕುಳಿತಿದ್ದರು. ಆಗ ಮುಗಿಲಿನಿಂದ ಹೊಳೆ ಹೊಳೆ ಯುವ ಗೋಲವೊಂದು ಬಂದುದನ್ನು ಅವರು ಕಂಡರು. ಪ್ರಕಾಶದ ರೆಕ್ಕೆ ಯುಳ್ಳ ದೇವದೂತನೊಬ್ಬನು ಅದರಿಂದ ಹೊರ ಹೊರಟು “ಈ ದಿವಸ ನಿಮ್ಮ ಊರಲ್ಲಿ ದೇವರ ಪ್ರೀತಿಯ ಮಗನು ಹುಟ್ಟಿದ್ದಾನೆ; ಅವನ ದರ್ಶನ ತೆಗೆದುಕೊಳ್ಳಿರಿ. ಅವನು ಒಂದು ಹಟ್ಟಿಯಲ್ಲಿ ಇದೀಗ ಹುಟ್ಟಿದ ಸ್ಥಿತಿಯಲ್ಲಿ ನಿಮಗೆ ಕಾಣುವನು” ಎಂದು ಹೇಳಿದನು ಕುರಿಗಾಹಿಗಳು ಹೋಗಿ ನೋಡಲು ನಿಜವಾಗಿ ಯೇಸು ಅವರಿಗೆ ಸಿಕ್ಕನು. ಹೀಗೆ ಅವನ ಜನ್ಮಕಥೆಯನ್ನು ಹೇಳಲಾಗುತ್ತದೆ

**ಅವನ ಚರಿತ್ರ ಮತ್ತು ಉಪದೇಶ:** ಯೇಸು ಬೆಳೆ ಬೆಳೆದಂತೆ ಅವನ ಗುಣಗಳ ಪರಿಚಯು ಜನರಿಗಾಗಹತ್ತಿತು. ಜೆರುಸ್ಲೇಮಿನ ಒಂದು ಜಾತ್ರೆಯಲ್ಲಿ ಹತ್ತು–ಹನ್ನೆರಡು ವರುಷದ ಯೇಸು ಧರ್ಮಪಂಡಿತರೊಡನೆ ವಾದಿಸಿ ಅವರನ್ನು ನಾಚಿಸಿದನು. ದೇವಾಲಯದ ಸುತ್ತಲೂ ಅಂಗಡಿ ಹೂಡಿದ್ದಕ್ಕಾಗಿ ಅವನು ಜನರನ್ನು ಕಟುವಾಗಿ ಟೀಕಿಸಿದನು. ಬರಬರುತ್ತ ಅವನು ಧರ್ಮಪಂಡಿತರ ನಡೆನಳಿಕೆಯನ್ನು ಜರಿಯತೊಡಗಿದನು. ಅವರಿಗೆ ಸಿಟ್ಟು ಬರುತ್ತಿತ್ತು. ಆದರೆ ಯೇಸುವಿನ ಮಾತು ಸತ್ಯವಾಗಿತ್ತು; ಆದ್ದರಿಂದ ಅವರಿಗೆ ಏನು ಮಾಡಲೂ ಬರುವಂತಿರಲಿಲ್ಲ. ಆಗ ಎಲ್ಲ ಕಡೆಗೂ ರೋಮ ಸಾಮ್ರಾಜ್ಯವು ಸ್ಥಾಪಿತವಾಗಿತ್ತು, ಸಾವಿರಾರು ಜನರು ರೋಮನರ ಗುಲಾಮರಾಗಿದ್ದರು. ರೋಮನರು ಅವರನ್ನು ಬಹಳ ಪೀಡಿಸುತ್ತಿದ್ದರು. ಅದರಿಂದ ಗುಲಾಮರಿಗೆ ಜೀವನ ಬಗ್ಗೆಯೇ ಬೇಸರವಾಗಿತ್ತು. ಈ ದೀನ ದರಿದ್ರರ ಸಮೂಹದಲ್ಲಿ ಯೇಸೂ ಸಂಚರಿಸುತ್ತ ಅವರಿಗೆ ಧೈರ್ಯಹೇಳುತ್ತಿದ್ದನು. “ನೀವು ಪರಮೇಶ್ವರನಿಗೆ ಶರಣುಹೋದರೆ ಪರಮೇಶ್ವರನ ರಾಜ್ಯವು ನಿಮಗೆ ಸಿಕ್ಕುವದು. ಅದಕ್ಕಾಗಿ ಇನ್ನೇನು ಮಾಡಬೇಕಾಗಿಲ್ಲ—ನೀವು ಮಾಡಿದ ಪಾಪಗಳ ಬಗ್ಗೆ ಪಶ್ಚಾತ್ತಾಪಪಡಿರಿ. ಪರಮೇಶ್ವರನನ್ನು ಪ್ರಾರ್ಥಿಸಿರಿ; ನಿಮ್ಮ ನೆರೆಹೊರೆಯವರನ್ನು ಪ್ರೀತಿಸಿರಿ; ಇಷ್ಟೇ ಅಲ್ಲ, ನಿಮ್ಮ ವೈರಿಗಳನ್ನು ಪ್ರೀತಿಸಿರಿ. ಯಾರಾದರೂ ನಿಮ್ಮನ್ನು ಹೊಡೆದರೆ ತಿರುಗಿ ಹೊಡೆಯಬೇಡಿರಿ. ಇದರಿಂದ ಕೊನೆಗೆ ಶತ್ರುಗಳ ಮನಸ್ಸಿನಲ್ಲಿಯೂ ನಿಮ್ಮ ಬಗ್ಗೆ ಪ್ರೇಮ ಹುಟ್ಟಿ ವೈರವು ಅಳಿದುಹೋಗುವದು. ನಾನು ಹೇಳುವ ಪರಮೇಶ್ವರನ ರಾಜ್ಯವೆಂದರೆ ಈ ಪ್ರೇಮಮಯ ಜೀವನವೇ” ಎಂದು ಉಪದೇಶಿಸಿ ಮತ್ತೆ, “ನನ್ನ ಹೇಳಿಕೆಯನ್ನು ನಂಬಿರಿ. ಏಕೆಂದರೆ ದೇವನ ಪ್ರೀಯಪುತ್ರ ನಾನು ದೇವದೂತನು” ಎಂದು ಹೇಳಿದನು.

**ಯೇಸುವಿನ ವಿಚಾರಣೆ :** ಯೇಸುವಿನ ಉಪದೇಶದಿಂದ ಜ್ಯೂಗಳು ಹುರುಪುಗೊಂಡರು. ಯೇಸು ತಮ್ಮ ಕಲ್ಯಾಣಕರ್ತನೆಂದು ಅವರಿಗೆನಿಸತೊಡಗಿತು. ಯೇಸುವಿನ ಸಮಯವೆಲ್ಲ ರೋಗಿಗಳ ಶುಶ್ರೂಷೆ, ಮತ್ತು ದುಃಖಿತರಿಗೆ ಧೈರ್ಯಹೇಳುವುದು ಇವುಗಳಲ್ಲಿಯೆ ಕಳೆಯುತ್ತಿತ್ತು. ಪಾಪಿಗಳ ಬಗ್ಗೆ ಅವನಿಗೆ ಮರುಕವೆನಿಸುತ್ತಿತ್ತು.

ಒಮ್ಮೆ ಊರಲ್ಲಿಯ ಒಬ್ಬ ಪಾಪಿಹೆಂಗಸಿನ ಮೇಲೆ ಜನರು ರೇಗಿಗೆದ್ದಿದ್ದರು ಅನೇಕರು ಅವಳನ್ನು ಹೊಡೆಯಲು ಏರಿಹೋದರು. ಅಲ್ಲಿದ್ದ ಯೇಸು ಅವರಿಗೆ "ತಾಳಿರಿ ಕೈ ಬಿಗಿಹಿಡಿಯಿರಿ; ಆಯುಷ್ಯದಲ್ಲಿ ಒಂದೂ ಪಾಪವನ್ನು ಮಾಡಿದವರು. ಯಾರಿದ್ದೀರೋ ಅವರು ಮಾತ್ರ ಅವಳಿಗೆ ಒಂದೊಂದು ಕಲ್ಲು ಒಗೆಯಿರಿ" ಎಂದು ಹೇಳಿದನು ಆಗ ಅವರು ಮನಸ್ಸಿನಲ್ಲಿ ವಿಚಾರಮಾಡಿದರು; ಕಲ್ಲು ಒಗೆಯಲು ಒಬ್ಬನೂ ಮುಂದೆ ಬರಲಿಲ್ಲ. ಯೇಸುವಿನ ಈ ನಡತೆಯಿಂದ ಎಲ್ಲರಿಗೂ ಧೈರ್ಯ ಬಂದಿತು. ಯೇಸು ಲೋಕಪ್ರಿಯನಾದಂತೆ ಅವನ ಬಗ್ಗೆ ಅಧಿಕಾರಿಗಳ ದ್ವೇಷ ಹೆಚ್ಚಿತು. ಅವನನ್ನು ಹೇಗಾದರೂ ಹಿಡಿಯಬೇಕೆಂದು ಹಂಚಿಕೆ ಹಾಕುತ್ತಿದ್ದರು. ಇದರಿಂದ ತಾನಿನ್ನು ಹೆಚ್ಚು ದಿವಸ ಒದುಕುವದಿಲ್ಲವೆಂದು ಯೇಸುವಿಗೆ ಎನಿಸತೊಡಗಿತು. ಆಗ ಒಮ್ಮೆ ಜೆರುಸ್ಲೇಮಿಗೆ ಹೋಗಿಬರಬೇಕೆಂದು ಅವನಿಗೆನಿಸಿತು. ಅಲ್ಲಿ ಹೋದಾಗ ದೇವಾಲಯದಲ್ಲಿ ಹೊಲಸಾಗಿತ್ತು ಅದನ್ನು ನೋಡಿ ಯೇಸು ಪೂಜಾರಿಗೆ, "ಪರಮಾತ್ಮನು ನಮ್ಮೆಲ್ಲರ ತಂದೆ; ಅವನ ಗುಡಿಯಲ್ಲಿ ನೀವು ಹೀಗೇಕೆ ಹೊಲಸು ಮಾಡುತ್ತೀರಿ? ಇಲ್ಲಿಯ ಅಂಗಡಿಗಳನ್ನು ಪಾರಿವಾಳಗಳ ಗೂಡುಗಳನ್ನು ಮೊದಲು ತೆಗೆದೊಗೆಯಿರಿ" ಎಂದನು. ಅದರಿಂದ ಮುನಿಸುಗೊಂಡ ಪೂಜಾರಿ ಧರ್ಮಗುರುವಿನ ಕಡೆಗೆ ದೂರಿಕೊಂಡನು. ಧರ್ಮಗುರು ಏನಾದರೂ ನೆವಕ್ಕಾಗಿ ಕಾದಿದ್ದನು. ಅವನು ಏಸುವಿನ ಮೇಲೆ ಆರೋಪವಿಟ್ಟು ವಿಚಾರಣೆ ನಡೆಸಿದನು. ರೋಮನ್ಅಧಿಕಾರಿಗಳೆದುರು ನಡೆದ ಈ ಮೊಕದ್ದಮೆ ಜಗತ್ತಿನ ಪ್ರಸಿದ್ಧ ಮೊಕದ್ದಮೆಗಳಲ್ಲಿ ಒಂದು. ಸಾಕ್ರೆಟೀಸ್, ಯೇಸು, ಟಿಳಕ, ಮತ್ತು ಗಾಂಧಿ ಮೊದಲಾದವರ ಮೇಲೆ ನಡೆದ ಮೊಕದ್ದಮೆಗಳಲ್ಲಿ ನ್ಯಾಯಾಸನದಲ್ಲಿ ಕುಳಿತಿದ್ದ ವ್ಯಕ್ತಿಗಿಂತ ಆರೋಪಿ ಪಂಜರದಲ್ಲಿ ನಿಂತ ವ್ಯಕ್ತಿ ಶ್ರೇಷ್ಠತರವಾದದ್ದು; ಅವರು ತಮ್ಮ ಹೇಳಿಕೆಯಿಂದ ಮಾನವತೆಗೆ ಮಾರ್ಗದರ್ಶಕರಾಗಿದ್ದಾರೆ ತನ್ನ ವಿಚಾರಣೆಯಲ್ಲಿ ಯೇಸು, "ಈ ಜಗತ್ತಿನಲ್ಲಿ ಪರಮೇಶ್ವರನ ಸತ್ತೆ ಸ್ಥಾಪಿತವಾಗಬೇಕೆಂದು ನನ್ನ ಉದ್ದೇಶವಿದೆ. ಸತ್ಯದ ಆಗ್ರಹವನ್ನು ಹಿಡಿದರೆ, ಮತ್ತು ಅಂತಃಕರಣವನ್ನು ಶುದ್ಧಗೊಳಿಸಿದರೆ ಅದು ಸಾಧ್ಯವಾಗುವುದೆಂದು ನಾನು ನಂಬಿದ್ದೇನೆ" ಎಂದು ಹೇಳಿದನು. ಕೊನೆಗೆ, ಯೇಸುವಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಡುವದೆಂದು ತೀರ್ಪಾಯಿತು. ಹಳೆ ಧರ್ಮಗುರು ಯೇಸುವನ್ನು ತಪ್ಪುಗಾರನೆಂದು ಒಗೆದು, ಅವನಿಗೆ ಮುಳ್ಳಿನ ಮುಕುಟವನ್ನು ಹಾಕಿ ಕಿರಮಂಜಿ ಬಣ್ಣದ ಬಟ್ಟೆಗಳನ್ನು ಕೊಟ್ಟನು. ಢಣಾಡಂಗುರವಾಗಿ ಅವನ ಅವಹೇಳನೆಯಾಯಿತು! ಆದರೂ ಯೇಸು ಶಾಂತನಾಗಿದ್ದನು. ಕೊನೆಗೆ ಅವನನ್ನು ಸಿಲುಬೆಗೇರಿಸಲಾಯಿತು; ಅವನ ಕೈಕಾಲುಗಳಿಗೆ ಮೊಳೆ ಹೊಡೆದರು. ಆ ಭಯಂಕರ ಯಾತನೆಯಲ್ಲಿಯೂ ಯೇಸು ಹೀಗೆ ಉದ್ಗಾರ ತೆಗೆದನು: "ದೇವಾ, ಇವರನ್ನು ಕ್ಷಮಿಸು; ತಾವು ಏನು ಮಾಡುತ್ತಿದ್ದಾರೆಂಬುದು ತಮಗೇ ತಿಳಿಯುವದಿಲ್ಲ!"

ಹೀಗೆ ತನ್ನ ತತ್ತ್ವದಲ್ಲಿ ದೃಢನಿಶ್ಚಯವುಳ್ಳವನಾಗಿ, ಅದಕ್ಕಾಗಿ ಜೀವವನ್ನು ಬಲಿದಾನ ಮಾಡಿದ ಯೇಸು ಮುಂದೆ ಎಲ್ಲರ ಆದರಕ್ಕೆ ಪಾತ್ರನಾದನು.

**ಯೇಸುವಿನ ಧರ್ಮ** : "ದೇವರು ಒಬ್ಬನೇ. ಅವನು ಪ್ರೇಮಮಯನು. ಎಲ್ಲೆಲ್ಲಿಯೂ ಅವನಿದ್ದಾನೆ. ತನ್ನ ಶರಣಾಗತರನ್ನು ಅವನು ಮುಕ್ತಮಾಡುತ್ತಾನೆ. ಹೀಗೆ ಮುಕ್ತಗೊಳಿಸುವ ಮಹಾತ್ಮನು ಇಂದಿಲ್ಲ ನಾಳೆ ಹುಟ್ಟಿಬರುವನು ಎಂಬ ಧರ್ಮಕಲ್ಪನೆಯನ್ನು ಜ್ಯೂಗಳು ಬೆಳಸಿಕೊಂಡುಬಂದಿದ್ದರು. ಯೇಸು, " ದೇವರು ಎಲ್ಲರ ತಂದೆ; ಅವನು ಆಕಾಶದಲ್ಲಿದ್ದಾನೆ; ಪಶ್ಚಾತ್ತಾಪಯುಕ್ತ ಚಿತ್ತದಿಂದ ತನಗೆ ಶರಣು ಬಂದವರಿಗೆ ಅವನು ತನ್ನ ರಾಜ್ಯದಲ್ಲಿ ಸ್ಥಾನಕೊಡುವನು. ಸಂಪತ್ತಿಯು ಪರಮೇಶ್ವರನ ರಾಜ್ಯಮಾರ್ಗದಲ್ಲಿ ಅಡ್ಡ-ಬಂಡೆಗಲ್ಲಾಗಿದೆ. ಎರಡನೆಯವರು ತನ್ನೊಡನೆ ಹೇಗಿರಬೇಕೆಂದು ಎನಿಸುವದೋ ಹಾಗೆ ತಾನು ಅವರೊಡನೆ ಆ ರೀತಿ ನಡತೆ ಇಡಬೇಕು. ಪರಮಾತ್ಮನ ರಾಜ್ಯದಲ್ಲಿ ಪಕ್ಷಪಾತವಿಲ್ಲ. ಶರಣುಹೋದ ಯಾವನಿಗೂ ಆತನು ದೊರಕುತ್ತಾನೆ. ಎಲ್ಲರ ಪಾಪಪುಣ್ಯಗಳ ವಿಚಾರಣೆಯ ದಿನವು ಒಮ್ಮೆ ಬಂದೇ ಬರುವುದು. ಆಗ ಪರಮೇಶ್ವರನಿಗೆ ಮನೋಭಾವದಿಂದ ಶರಣು ಹೋದವನಿಗೆ ಸ್ವರ್ಗವು ಪ್ರಾಪ್ತವಾಗುವುದು " ಎಂಬುದಾಗಿ ಯೇಸು ಹೇಳಿದನು. ಈ ಧರ್ಮ ತತ್ತ್ವಗಳು ಅಷ್ಟೇನು ಹೊಸವೇನಲ್ಲ. ಜಗತ್ತಿನಲ್ಲಿಯ ಯಾವ ಧರ್ಮದ ಮೂಲ ತತ್ತ್ವಗಳೂ ಒಂದೇ ಇರುತ್ತವೆ. ಮಲಗಿದ ಯುರೋಪು ಯೇಸುವಿನ ಉಪದೇಶದಿಂದ ಎಚ್ಚತ್ತಿತು. ರೋಮದ ದಸ್ಯುತ್ವದಲ್ಲಿ ನುಗ್ಗಾಗುತ್ತಿದ್ದ ಜನರು ಅವನ ಉಪದೇಶದಿಂದ ಕೃತನಿಶ್ಚಯಿಗಳಾದರು ವಾಸ್ತವವಾಗಿ, ರೋಮದ ಸತ್ತೆಯನ್ನು ಯೇಸುವಿನ ಉಪದೇಶವು ನಡುಗಿಸಿತು. ಕಾಡುಜನರು ರೋಮದ ನಾಶಕ್ಕೆ ನಿಮಿತ್ತಮಾತ್ರರು. ಜ್ಯೂಗಳಿಗೂ ಯೇಸುವಿನ ಉಪದೇಶ ಸೇರಲಿಲ್ಲ. ಏಕೆಂದರೆ, ಅವನ ದೇವರ ರಾಜ್ಯವು ಬಡವರ ರಾಜ್ಯವಾಗಿತ್ತು. ಅಲ್ಲಿ ಜ್ಯೂಗಳಿಗೆ ಅಂತಹ ವಿಶೇಷಸ್ಥಾನವಿರಲಿಲ್ಲ. ಯೇಸುವಿನ ಉಪದೇಶದಿಂದ ಪೆಲೆಸ್ಟೈನಿನಲ್ಲಿಯ ಜ್ಯೂಗಳ ಪ್ರತಿಷ್ಠೆಗೆ ಭಂಗ ಬಂದಿತು. ಸಾಮಾನ್ಯರು ಅವನನ್ನು ಮೆಸಾಯಾ ( ಎಂದರೆ ಅವತಾರೀಪುರುಷರು ) ಎಂದು ಭಾವಿಸಿದರು. ಜ್ಯೂಗಳು ಮಾತ್ರ ಯೇಸುವನ್ನು ಭೂಮಿಗೆ ಬಂದ ದೇವರ ಮಗನೆಂದು ಎಂದೂ ಒಪ್ಪಲಿಲ್ಲ. ಕ್ರೈಸ್ತರ ಪವಿತ್ರಗ್ರಂಥವು ಬೈಬಲ್. ಅದರಲ್ಲಿ ಹಳೆಯ ಒಡಂಬಡಿಕೆ, ಹೊಸ ಒಡಂಬಡಿಕೆ ಎಂಬ ಎರಡು ಭಾಗಗಳುಂಟು. ಹಳೆಯ ಒಡಂಬಡಿಕೆಯಲ್ಲಿ ಜ್ಯೂಗಳ ಧರ್ಮಕಲ್ಪನೆಗಳಿದ್ದು ಹೊಸ ಒಡಂಬಡಿಕೆಯಲ್ಲಿ ಕ್ರಿಸ್ತನ ಚರಿತ್ರೆ, ಅವನ ಉಪದೇಶಗಳನ್ನು ಹೇಳಿದೆ. ಹಳೆಯ ಒಡಂಬಡಿಕೆಗಳನ್ನು ಮಾತ್ರ ಜ್ಯೂಗಳು ಮನ್ನಿಸುತ್ತಾರೆ. ಕ್ರೈಸ್ತರಿಗೆ ಎರಡೂ ಭಾಗಗಳನ್ನೊಳಗೊಂಡ ಇಡೀ ಗ್ರಂಥವು ಪವಿತ್ರವಾಗಿದೆ.

**ಸೇಂಟ್‌ಪಾಲ್** ( ಕ್ರಿ. ಪ. ೨-೬೭ ) : ಜೇರ್ಸುಸ್ ಕ್ರಿ. ಪೂ. ೪ನೆಯ ವರುಷದಲ್ಲಿ ಜನಿಸಿ ಕ್ರಿ. ಪ. ೩೦ ರಲ್ಲಿ ಮರಣ ಹೊಂದಿದನು. ಈ ಕಾಲಗಣೆಯಲ್ಲಿ ಅಲ್ಪಸ್ವಲ್ಪ ಮತಭೇದವಿದ್ದರೂ ಯೇಸುವಿಗೆ ಅಲ್ಪಾಯುಷ್ಯವಿತ್ತೆಂಬಲ್ಲಿ ಸಂದೇಹವಿಲ್ಲ. ಸೇಂಟ್‌ಪಾಲ್ ಎಂಬವನು ಆತನ ಶಿಷ್ಯರಲ್ಲೊಬ್ಬನು. ಮೊದಲು ಅವನು ಯೇಸುವಿನ ದ್ವೇಷಿಯಾಗಿದ್ದನು. ಅವನು ಮೂಲತಃ ಗ್ರೀಕನು. ಅಲೆಕ್ಝಾಂಡ್ರಿಯದಲ್ಲಿ ಅಭ್ಯಾಸ ಮುಗಿಸಿಕೊಂಡು ಮುಂದಿನ ಅಭ್ಯಾಸಕ್ಕಾಗಿ ದಮಾಸ್ಕಸಿಗೆ ಹೊರಟಿದ್ದನು. ದಾರಿಯಲ್ಲಿ ಜೇರುಸಲೇಮ್ ಹತ್ತಿ ಅವನ ಜೀವನಮಾರ್ಗವೇ ಬದಲಾಯಿತು. ಅವನು ಯೇಸುವಿನ ಅನುಯಾಯಿಯಾದನು. ಯೇಸುವಿನ ಜನಪ್ರಿಯತೆಯನ್ನು ಹೆಚ್ಚಿಸುವುದಕ್ಕಾಗಿ, ಸಂಕಟಕಾಲದಲ್ಲಿ ಅವನ ಬೆಂಬಲಕ್ಕಾಗಿ, ಅವನ ವಚನಗಳನ್ನು ಸಂಗ್ರಹಿಸುವುದಕ್ಕಾಗಿ, ಅವನ ಸಂದೇಶವನ್ನು ಎಲ್ಲೆಡೆ ಹರಡುವುದಕ್ಕಾಗಿ ಸೇಂಟ್ ಪಾಲ್ ದುಡಿದನು. ಸೇಂಟ್ (ಸಂತ) ಪಾಲ್ ಈ ಕೆಲಸ ಮಾಡಿರದಿದ್ದರೆ ಯೇಸು ಇತಿಹಾಸದಲ್ಲಿ ಬರೀ ಒಬ್ಬ ದೊಡ್ಡ ಪುರುಷನಾಗಿ ಉಳಿಯುತ್ತಿದ್ದ, ಧರ್ಮ ಸಂಸ್ಥಾಪಕನಾಗುತ್ತಿರಲಿಲ್ಲ ಎಂದು ಅಭ್ಯಾಸಕರು ಅಭಿಪ್ರಾಯಪಟ್ಟಿದ್ದಾರೆ. ಆತನು ಕ್ರಿ. ಪ. ೬೭ ರಲ್ಲಿ ಮಡಿದನು. ಇವನನ್ನೂ ಜನರು ಹಿಂಸಿಸಿ ಕೊಂದರೆಂದು ಕೆಲವರೆನ್ನುತ್ತಾರೆ. ಬಹುಶಃ ಇದು ದಂತಕಥೆಯಾಗಿರಬಹುದು.

**ಕ್ರೈಸ್ತಧರ್ಮ ಸಂಘಟನೆ** : ಯೇಸು ಕ್ರಿಸ್ತ,* ಸೇಂಟ್ ಪಾಲ್ ಇವರ ಬಳಿಕ ಈ ಖಂಡದ ಪ್ರಾರಂಭದಲ್ಲಿ ಹೇಳಿದ ಸೇಂಟ್ ಥಾಮಸ್, ಕ್ರಿ. ಪ. ೬ ನೆಯ ಶತಕದಲ್ಲಿ ಇಂಗ್ಲಂಡಿಗೆ ಹೋದ ಸೇಂಟ್ ಅಗಸ್ಟಾಯಿನ್ ಮತ್ತು ೧೬ ನೆಯ ಶತಕದಲ್ಲಿ ಪೋರ್ತುಗೀಜರೊಡನೆ ಹಿಂದುಸ್ಥಾನಕ್ಕೆ ಬಂದ ಸೇಂಟ್ ಝೇವಿಯರ—ಹೀಗೆ ಎಷ್ಟೋ ಸಾಧುಗಳು ಕ್ರೈಸ್ತರಲ್ಲಿ ಆಗಿಹೋಗಿದ್ದಾರೆ. ಅವರು ಯುರೋಪಿನಲ್ಲಿ ಪ್ರಚಂಡ ಧರ್ಮಸಂಘಟನೆ ಮಾಡಿದರು. ದೊಡ್ಡ ದೊಡ್ಡ ರಾಜ್ಯಗಳೂ ಕೂಡ ಆ ಸಂಘಟನೆಯ ಎದುರು ನಡುಗುತ್ತಿದ್ದವು; ಅಷ್ಟು ಬಲಿಷ್ಠವಾಗಿತ್ತು ಆ ಸಂಘಟನೆ. ಕ್ರೈಸ್ತರ ಮುಖ್ಯ ಧರ್ಮಗುರುವಿಗೆ ಪೋಪ್ ಎಂದು ಹೆಸರು. ಒಂದು ಕಾಲದಲ್ಲಿ ಪೋಪನು ಪ್ರತಿ ಚಕ್ರವರ್ತಿಯೇ ಆಗಿದ್ದನು. ಮುಂದೆ ಅವನು ಸತ್ತಾಧೀಶನಾಗುವ ಹವ್ಯಾಸಕ್ಕೆ ಬಿದ್ದನು. ಆಗ ಐಹಿಕ ಸತ್ತಾಧಾರಿ ರಾಜರಿಗೂ ಧರ್ಮಪ್ರಮುಖ ಪೋಪನಿಗೂ ಜಗಳ ಹುಟ್ಟಿತು. ಅದರಲ್ಲಿ ಕೊನೆಗೆ ಪೋಪನು ಅಧಿಕಾರ ಲೋಭವನ್ನು ಬಿಡಬೇಕಾಯಿತು. ಇದು ನಿಜವಿದ್ದರೂ, ಯುರೋಪಿನಲ್ಲಿ ಕಟ್ಟಿದ ಧರ್ಮ ಸಂಘಟನೆಯ ಚೌಕಟ್ಟಿನಿಂದಾಗಿ ಅನೇಕ ರಾಜ್ಯಗಳಿದ್ದ ಯುರೋಪಿನಲ್ಲಿ ಸಾಂಸ್ಕೃ

---

* ಕ್ರಿಸ್ತ ಎಂದರೆ "ಕುಂಕುಮಿತ" (Annointed): ಜಗತ್ತಿನಲ್ಲಿ ದೊಡ್ಡ ಕಾರ್ಯ ಮಾಡುವುದಕ್ಕಾಗಿಯೇ ಅವತರಿಸಿದವನು, ಮೆಸಾಯಾ ಎಂದರೂ ಇದೇ ಅರ್ಥ. ಕ್ರಿಸ್ತ ಎಂಬುದು ಗ್ರೀಕಶಬ್ದ ; ಮೆಸಾಯಾ ಎಂಬುದು ಹಿಬ್ರೂ ಶಬ್ದ.

ತಿಕ ಐಕ್ಯವು ಅಬಾಧಿತವಾಯಿತು. ಕ್ರಿಶ್ಚನ್‌ಧರ್ಮವು ಆ ಸಾಂಸ್ಕೃತಿಕ ಐಕ್ಯದ ಅಧಿಷ್ಠಾನವಾಗಿತ್ತು. ಭಾರತದಲ್ಲಿಯ ಅನೇಕ ರಾಜ್ಯಗಳಿಗೆ ಹಿಂದೂಸಂಸ್ಕೃತಿಯು ಐಕ್ಯದ ಅಧಿಷ್ಠಾನವಿದ್ದಿತು. ಆದರೆ ಪ್ರಭಾವಿ ಧರ್ಮಸಂಘಟನೆಯ ಅಭಾವದಿಂದ ಆ ಸತ್ಕಾಲದಲ್ಲಿ ಅದು ಕೆಲಸಕ್ಕೆ ಬರಲಿಲ್ಲ. ಯುರೋಪಿನಲ್ಲಿ ಕ್ರೈಸ್ತರು ಮುಸಲ್ಮಾನೀ ದಾಳಿಗಳನ್ನು ಎದುರಿಸಿದ ಹಾಗೆ, ಹಿಂದುಗಳು ನಿಕರದಿಂದ ಎದೆಗೊಟ್ಟು ಎದುರಿಸ ಲಿಲ್ಲವೆಂದು ಹೇಳಬೇಕಾಗುತ್ತದೆ.

**ಪ್ರಾಚೀನ ಭಾರತದಲ್ಲಿ ಕ್ರೈಸ್ತಧರ್ಮ :** ಕ್ರೈಸ್ತರು ಜಗತ್ತಿನಲ್ಲೆಲ್ಲ ಹರಿ ಬಿದ್ದಿದ್ದರು; ಅದರಂತೆ ಭಾರತಕ್ಕೂ ಬಂದರು. ಆ ಒಗ್ಗೆ ದೊರಕುವ ತ್ರೋಟಕ ಸಂಗತಿಗಳನ್ನು ಹೇಳಿ ಈ ಖಂಡವನ್ನು ಮುಗಿಸಬೇಕಾಗಿದೆ. ಪ್ರಾಚೀನ ಭಾರತ ದೊಡನೆ ಕ್ರೈಸ್ತರ ಸಂಬಂಧವನ್ನು ಕುರಿತು ಅನೇಕ ದಂತಕಥೆಗಳೇನೋ ತ್ರಾವಣಕೋರದ ಕಡೆ ಪ್ರಚಲಿತವಾಗಿವೆ. ಆದರೆ ವಿಶ್ವಸನೀಯ ಅಂಶಗಳು ಕಡಿಮೆ. ಈ ಖಂಡದ ಆರಂಭದಲ್ಲಿ ಹೇಳಿದಂತೆ ಸೇಂಟ್ ಥಾಮಸನು ಕ್ರಿ. ಶ. ಮೊದಲನೆಯ ಶತಕದಲ್ಲಿ ಬಂದು ಕ್ರಿ. ಶ. ೬೮ರಲ್ಲಿ ತೀರಿಕೊಂಡನು. ಆಗ ಬಲುಚಿಸ್ತಾನ, ಸಿಂಧ ಮೊದಲಾದ ಪ್ರದೇಶಗಳಲ್ಲಿ ಗೊಂಡೋಫ್ರೋರ್ನಿಸ್ ಪಾರ್ಥಿಯನ್ ರಾಜನ ರಾಜ್ಯ ವಿತ್ತು. ಸೇಂಟ್ ಥಾಮಸ್ ಅವನ ಓಲಗಕ್ಕೆ ಹೋಗಿದ್ದನು. ಅವನ ಉಪದೇಶ ದಂತೆ ಗೊಂಡೋಫೋಸಿಸ್ ಕ್ರೈಸ್ತನಾದನೆಂದು ತಿಳಿದುಬರುತ್ತದೆ. ಕೆಲವರು ಯೇಸುಕ್ರಿಸ್ತನು ಭಾರತಕ್ಕೆ ಬಂದಿದ್ದನೆಂದು ಹೇಳುವುದು ಅತಿಶಯೋಕ್ತಿ. ಕಿ. ಶ. ಎರಡನೆಯ ಶತಕದಲ್ಲಿ ಪಾಂತೆನಸ್ ಎಂಬ ಕ್ರೈಸ್ತ ಪ್ರಚಾರಕನು ಇಲ್ಲಿಗೆ ಬಂದಾಗ, ಅನೇಕ ಕ್ರೈಸ್ತಮತೀಯರು ಅವನಿಗೆ ಕಂಡರೆಂಬ ವರ್ಣನೆಯುಂಟು. ಮುಂದೆ ಐದ ನೆಯ ಶತಕದಲ್ಲಿ ಸೂಡೊ–ಕೆಲಿಸ್ಥೆನಿಸ್ ಎಂಬವನು ಭಾರತಕ್ಕೆ ಬಂದಾಗ ದಕ್ಷಿಣದಲ್ಲಿ ಕ್ರೈಸ್ತಧರ್ಮಸಂಘಟನೆ ಅವನಿಗೆ ಕಂಡುಬಂದಿತು. ಅಲ್ಲಿಯ ಮೋಝೆಸ್ ಎಂಬ ಬಿಶಪ್ಪನೂ ಅವನನ್ನು ಸಂದರ್ಶಿಸಿದನೆಂದು ರೊಲಿನ್ಸನನು ಹೇಳಿದ್ದಾನೆ. ಹೀಗೆ ಕ್ರಿ. ಶ. ಮೊದಲನೆಯ ಶತಕದಿಂದ ಐದನೆಯ ಶತಕದ ವರೆಗೆ ಮುಂದೆ ಕೂಡ ಕ್ರೈಸ್ತ ಮಿಶನರಿಗಳು ಈ ದೇಶಕ್ಕೆ ಬರುತ್ತಲಿದ್ದರೂ ಅವರ ಉಪದೇಶದ ಪರಿಣಾಮವು ಹಿಂದೂ ಧರ್ಮದ ಮೇಲೆ ವಿಶೇಷವಾಗಿ ಆಯಿತೆಂದು ಹೇಳುವಂತಿಲ್ಲ. ಧಾರ್ಮಿಕ ವಿಷಯದಲ್ಲಿ ಭಾರತವು ಮೊದಲಿನಿಂದ ಉದಾರಮತವಾದಿಯಾಗಿದೆ. ಅನೇಕ ಧರ್ಮಗಳ ಉಪದೇಶಕರು ಬಂದರು, ಅದರಂತೆಯೆ ಕ್ರೈಸ್ತರು. ಅವರಿಗೆ ಕೆಲವು ಅನುಯಾಯಿ ಗಳು ದೊರೆತರು; ಅದರಿಂದ ಯಾರಿಗೇನು ದುಃಖವಿಲ್ಲ, ಹರ್ಷವಿಲ್ಲ.

**ಕೈಗಡದ ಆರೋಪ :** ಭಾರತದಲ್ಲಿಯ ಉಲ್ಲೇಖನೀಯವೆನಿಸುವ ವಿಷಯಗಳನ್ನೆಲ್ಲ ಭಾರತೀಯರು ಪಾಶ್ಚಾತ್ಯರಿಂದ ತೆಗೆದುಕೊಂಡರೆಂದು ಆರೋಪಿಸುವ ಪ್ರವೃತ್ತಿ ಯುರೋಪಿಯನ್ ಪಂಡಿತರಲ್ಲಿ ಮತ್ತು ಅವರ ಮಾತಿಗೆ

ತಲೆದೂಗುವ ಕೆಲ ಭಾರತೀಯರಲ್ಲಿ ಈ ಮೊದಲು ಕಂಡು ಬರುತ್ತಿತ್ತು. ಈ ಪ್ರವೃತ್ತಿಗನುಸಾರವಾಗಿ ವಾಲ್ಮೀಕಿಯ ರಾಮಾಯಣವು ಹೋಮರನ ಇಲಿಯಡ್ಡಿನಿಂದ ಕೈಗಡ ತಕ್ಕೊಂಡದ್ದು; ಮಹಾಕವಿ ಕಾಲಿದಾಸನ ಲೇಖನಗಳ ಮೇಲೆ ಗ್ರೀಕರಾಜನಾದ ಮಿನಂಡರ್ ಅಥವಾ ಮಿಲಿಂದನು ಕೇಳಿದ ಪ್ರಶ್ನೆಗಳ, 'ಮಿಲಿಂದದ-ಪನ್ಹೊ'ವಿನ ಮತ್ತು ಅದರಲ್ಲಿಯ ಬೌದ್ಧವಿಚಾರ ಸರಣಿಯ ಪ್ರಭಾವವುಂಟೆಂದು ನಾಮಾಂಕಿತ ವಿದ್ವಾಂಸರು ಹೇಳಿದ್ದಾರೆ. ನ್ಯಾ. ಮೂ. ತೇಲಂಗರು ವಾಲ್ಮೀಕಿ-ಹೋಮರ್ ಪ್ರಶ್ನೆಯನ್ನು ಚೆನ್ನಾಗಿ ಪರಿಶೀಲಿಸಿ ಕೈಗಡದ ಆರೋಪದ ಜೊಳ್ಳುತನವನ್ನು ನಿಚ್ಚಳವಾಗಿ ತೋರಿಸಿದರು. ಕಾಲಿದಾಸನು ಮಿಲಿಂದನಿಂದ ಕೈಗಡ ಪಡೆದ ಮಾತನ್ನು ಡಾ. ಮುಜುಮದಾರರು ಅವಿಶ್ವಸನೀಯವೆಂದು ಖಂಡಿಸಿದ್ದಾರೆ.* ಕೃಷ್ಣ ಮತ್ತು ಜೇಝಸ್ ಇವರಿಬ್ಬರ ಜನ್ಮ ಬಾಲ್ಯಗಳಲ್ಲಿ ಕಂಡುಬರುವ ಕೆಲವೊಂದು ಸಾಮ್ಯಗಳು, ಭಗವದ್ಗೀತೆ-ಬೈಬಲುಗಳಲ್ಲಿ ಪ್ರತಿಪಾದಿತವಾದ ಕೆಲವೊಂದು ತತ್ತ್ವಗಳಲ್ಲಿಯ ಸಾಮ್ಯ ಇಷ್ಟರಮೇಲಿಂದ ಯೇಸು ಕ್ರಿಸ್ತನ ಕಥೆಯಿಂದಲೇ ಯಶೋದಾ ಕೃಷ್ಣನ ಕಥೆ ಭಾರತದಲ್ಲಿ ಸಿದ್ಧವಾಯಿತೆಂದೂ ಕೆಲವರ ಮತ. ಆಂಗ್ಲರ ಆಳಿಕೆಯಲ್ಲಿ ಅಶಿಕ್ಷಿತ ಹಿಂದುಗಳನ್ನು ಕ್ರೈಸ್ತ ಧರ್ಮಕ್ಕೆ ಒಲಿಸಿಕೊಳ್ಳುವದಕ್ಕಾಗಿ ಯೇಸುಕ್ರಿಸ್ತನೇ ಯಶೋದಾ ಕೃಷ್ಣನೆಂದು ಮಿಶನರಿಗಳು ಹೇಳುತ್ತಿದ್ದರು. ಆದರೆ ಬಿಸನಗರ (ಭೇಲಸಾ) ಎಂಬಲ್ಲಿ ಹೇಲಿಪ್ರೋಡೋರಸ್ ಎಂಬ ಗ್ರೀಕ ರಾಯಭಾರಿ ಕ್ರಿ. ಪೂ. ಎರಡನೆಯ ಶತಕದಲ್ಲಿ ಗರುಡಧ್ವಜವನ್ನು ನಿಲ್ಲಿಸಿ ತನ್ನ ವಿಷ್ಣುಭಕ್ತಿಯನ್ನು ಪ್ರಕಟಿಸಿದನು; ಈ ಸಂಗತಿ ತಿಳಿದಂದಿನಿಂದ ವಿಷ್ಣುವಿನ ಮತ್ತು ಅವನ ರಾಮಕೃಷ್ಣಾದಿ ಅವತಾರಗಳ ಕಥೆಗಳು ನೂರಿನ್ನೂರು ವರುಷ ಕ್ರಿಸ್ತಪೂರ್ವದಲ್ಲಿಯೇ ಭಾರತದಲ್ಲಿ ಪರಿಚಿತವಾಗಿದ್ದವೆಂದು ನಿರ್ವಿವಾದ ಸಿದ್ಧವಾಗಿದೆ.

**ಇನ್ನು ಕೆಲವು ಉಲ್ಲೇಖಗಳು** : ಕ್ರಿ. ವ. ಮೊದಲನೆಯ ಶತಕದಿಂದ ಐದನೆಯ ಶತಕದ ವರೆಗಿನ ಕ್ರೈಸ್ತರ ಭಾರತಸಂಬಂಧವನ್ನು ಮೇಲೆ ಹೇಳಿದೆ. ಕಿ. ವ. ೬ನೆಯ ಶತಕದಲ್ಲಿ ಈಜಿಪ್ತದಲ್ಲಿಯ ಕಾಸ್ಮಸ್ ಎಂಬ ಕ್ರೈಸ್ತ ಮಿಶನರಿ ಭಾರತಕ್ಕೆ ಬಂದು ಹೋದನು. ಅವನು ತನ್ನ 'ಕ್ರಿಶ್ಚನ್ ಟೊಪಾಗ್ರಫಿ' ಗ್ರಂಥದಲ್ಲಿ ಹೂಣರ ಭಾರತ ದಾಳಿಗಳನ್ನು ಉಲ್ಲೇಖಿಸಿದ್ದಾನೆ. ಅಲ್ಲದೆ ಅವನು, "ಮಾಲೆ (ಎಂದರೆ ಮಲಬಾರ) ಎಂಬ ಪ್ರದೇಶದಲ್ಲಿ, ಮೆಣಸು ಬೆಳೆಯುವ ಭಾಗದಲ್ಲಿ, ಕ್ರೈಸ್ತರ ಚರ್ಚು ಇದೆ. ಇನ್ನೊಂದು ಕಡೆ ಕಲಿಯಾನಾ ಎಂಬಲ್ಲಿರುವ ಕ್ರೈಸ್ತ ಬಿಶಪನನ್ನು ಇರಾಣವು ನಿಯಮಿಸುತ್ತದೆ. ಹೀಗೆಯೆ ಸಿಲೋನಿನಲ್ಲಿಯೂ ಚರ್ಚು ಇದೆ, ಅಲ್ಲಿಯ

* ಭಾರತೀಯ ವಿದ್ಯಾಭವನದಿಂದ ಪ್ರಕಾಶಿತವಾದ ಭಾರತದ ಇತಿಹಾಸ– ೨ನೆಯ ಖಂಡ (ಏಜ್ ಆಪ್ ಇಂಪಿರೀಯಲ್ ಯುನಿಟಿ— ಪು. ೬೨೪)

ಬಿಶಪನ ನಿಯಮಿಕೆಯೂ ಇರಾಣದಿಂದ ಆಗುತ್ತದೆ. ಸಿಲೋನದ ಮುಖ್ಯ ವಸತಿ ಮಾತ್ರ ಕ್ರೈಸ್ತೇತರ ( ಬೌದ್ಧ ) ವಾಗಿದೆ. *

ಕ್ರಿ. ವ. ೩೨೫ ರಲ್ಲಿ ಕ್ರೈಸ್ತ ಧರ್ಮಗುರುಗಳ ಮಹಾಸಭೆ ಯುರೋಪಿನಲ್ಲಿ ಸೇರಿತ್ತು. ಅಲ್ಲಿಗೆ ಬಂದಿದ್ದವರಲ್ಲೊಬ್ಬನು ' ಇರಾಣ ಮತ್ತು ಮಹಾನ್ ಭಾರತದ ಬಿಶಪ್ ಜಾನ್ ' ಎಂದು ರುಜು ಮಾಡಿದ್ದಾನೆ. ಇದರಿಂದ ಆ ಕಾಲದಲ್ಲಿ ಕ್ರೈಸ್ತರೂ ಅವರ ಧರ್ಮ ಸಂಘಟನೆಯೂ ದಕ್ಷಿಣ ಭಾರತದ ಪೂರ್ವ-ಪಶ್ಚಿಮ ತೀರಗಳಲ್ಲಿ ಇದ್ದಿರ ಬೇಕೆಂದು ಸಿದ್ಧವಾಗುತ್ತದೆ. ಕ್ರಿ. ವ. ೧೫೪೭ ರಲ್ಲಿ ಮದರಾಸಿನ ಹತ್ತಿರ ಮೈಲಾಪುರ ಭಾಗದಲ್ಲಿ ಸೇಂಟ್ ಥಾಮಸ್ ಮೌಂಟಿನ ಬಳಿಯಲ್ಲಿ ಒಂದು ಕ್ರಾಸು ಸಿಕ್ಕಿದೆ, ಅದರ ಮೇಲೆ ಪೆಹಲವೀ ಭಾಷೆಯ ಲೇಖವಿದೆ; ಅದು ಏಳೆಂಟನೆಯ ಶತಕದ್ದಾಗಿರ ಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ' ಹೇ ಪ್ರಭೋ ಕ್ರಿಸ್ತ ! ಆಘ್ರಾಸನ ಮೇಲೆ ದಯೆ ದೋರು!' ಎಂಬ ಶಬ್ದಗಳು ಅದರಲ್ಲಿವೆ. ಇಂತಹದೆ ಕ್ರಾಸು ತ್ರಾವಣಕೋರ ಭಾಗದಲ್ಲಿಯೂ ಸಿಕ್ಕಿದೆ. ಒಟ್ಟಾರೆ, ಹದಿನೈದನೆಯ ಶತಕದ ಕೊನೆಯಲ್ಲಿ ಪೋರ್ತುಗೀಜರು ಭಾರತಕ್ಕೆ ಬಂದರು. ಅದಕ್ಕೂ ಎಷ್ಟೋ ಶತಕಗಳ ಹಿಂದೆ ಕ್ರೈಸ್ತ ಧರ್ಮವು ದಕ್ಷಿಣ ಹಿಂದುಸ್ಥಾನಕ್ಕೆ ಬಂದಿತ್ತು; ಕ್ರೈಸ್ತರ ಧರ್ಮಸಂಘಟನೆ ಇಲ್ಲಿತ್ತು; ಎಂಬುದು ಗಮನಕ್ಕೆ ಬರುತ್ತದೆ.

### ಪ್ರಶ್ನೆಗಳು

೧. ಯೆಸು ಕ್ರಿಸ್ತನ ಜೀವನ ಕಾರ್ಯಗಳನ್ನು ವಿವರಿಸಿರಿ.

೨. ಸೇಂಟ್ ಪಾಲ್, ಪ್ರಾಚೀನ ಭಾರತದಲ್ಲಿ ಕ್ರೈಸ್ತಧರ್ಮ, ಯೇಸುವಿನ ವಿಚಾರಣೆ— ಈ ಕುರಿತು ಮಾಹಿತಿ ಬರೆಯಿರಿ.

---

## ನವಮ ಖಂಡ

# ಮೌರ್ಯ ಸಾಮ್ರಾಜ್ಯೋತ್ತರ ಆಂದೋಲನಗಳು

[ ಯವನ-ಶಕ-ಕುಶಾನರ ರಾಜ್ಯಗಳು ] ಕ್ರಿ. ಪೂ. ೨೩೨ ರಿಂದ ಕ್ರಿ. ವ. ೩೨೦

**ಸಾಮ್ರಾಜ್ಯೋತ್ತರ ಕಾಲದ ಸ್ವರೂಪ :** ಅಶೋಕನ ತರುವಾಯ ಅವನ ಸಾಮ್ರಾಜ್ಯವು ಬೇಗನೆ ಮುರಕಳಿಗೆ ಬಂದಿತು; ದೂರದೂರದ ಪ್ರಾಂತಗಳು ಸ್ವತಂತ್ರ ವಾದವು. ಅಶೋಕನ ಮೃತ್ಯುವಿನಿಂದ ಗುಪ್ತ ಮನೆತನದ ಸ್ಥಾಪನೆಯ ವರೆಗಿನ ಕಾಲವು ( ಕ್ರಿ. ಪೂ. ೨೩೨ ರಿಂದ ಕ್ರಿ. ವ. ೩೨೦ ) ಹಿಂದುಸ್ಥಾನದ ಇತಿಹಾಸದಲ್ಲಿ

---

* ಭಾರತೀಯ ವಿದ್ಯಾಭವನದಿಂದ ಪ್ರಕಾಶಿತವಾದ ಭಾರತದ ಇತಿಹಾಸ, ೩ ನೆಯ ಖಂಡ ( ಕ್ಲಾಸಿಕಲ್ ಏಜ. ಪು. ೪೫೭ )

ಬಹಳ ತೊಡಕಿನದಾಗಿದೆ; ಆ ಕಾಲದ ಸಂಗತಿಗಳನ್ನು ತಿಳಿಸುವ ಸಾಧನಗಳೂ ಅಲ್ಪ. ಅವುಗಳಲ್ಲಿ ಪುರಾಣಗಳು ಮತ್ತು ನಾಣ್ಯಗಳು ಮುಖ್ಯ. ಈ ಪುರಾಣಗಳಲ್ಲಿ ಕಾಲ್ಪನಿಕ ಸಂಗತಿಗಳೊಡನೆ ಕಲಕುಮಲಕಾಗಿರುವ ಐತಿಹಾಸಿಕ ಸಂಗತಿಗಳನ್ನು ಬೇರ್ಪಡಿಸಿಕೊಳ್ಳುವುದು ಅತಿ ದುಷ್ಕರವಾಗಿದೆ. ಪುರಾಣವೆಂದರೆ ಪ್ರಾಚೀನ ಕಥೆ. ಉಪನಿಷತ್ತುಗಳಲ್ಲಿಯೂ ಬೌದ್ಧ ಗ್ರಂಥಗಳಲ್ಲಿಯೂ ಪುರಾಣಗಳಿಗೆ 'ಐದನೆಯ ವೇದ' ಎಂಬ ತಕ್ಕ ಹೆಸರು ಕೊಡಲಾಗಿದೆ. ಎಂದರೆ ಸಾಮಾನ್ಯ ಮನುಷ್ಯನಿಗೆ ಧರ್ಮವನ್ನು ತಿಳಿದುಕೊಳ್ಳಲು ವೇದಗಳಿಗಿಂತ ಸುಲಭ ಕಥೆಗಳಿಂದೊಡಗೂಡಿದ ಪುರಾಣಗಳು ಹೆಚ್ಚು ಉಪಯುಕ್ತವಾಗಿವೆ. ಸೃಷ್ಟಿಯ ಉತ್ಪತ್ತಿ ಮತ್ತು ಗತಕಾಲೀನ ಕರ್ತೃಪುರುಷನ ವಿಷಯದಲ್ಲಿ ಜನರಿಗಿದ್ದ ಉತ್ಸುಕತೆಯನ್ನು ಪೂರ್ತಿಗೊಳಿಸುವುದಕ್ಕಾಗಿ ಪುರಾಣಗಳು ಹುಟ್ಟಿದವು. ಕಾಲಾಂತರದಲ್ಲಿ ಧರ್ಮೋಪದೇಶಕರು ಜನರಿಗೆ ಇಹಲೋಕದ ನಶ್ವರತೆಯನ್ನು ಧರ್ಮದ ಶ್ರೇಷ್ಠತ್ವವನ್ನು ಬಿಂಬಿಸುವುದಕ್ಕಾಗಿ ಅವುಗಳನ್ನು ಉಪಯೋಗಿಸಿಕೊಂಡರು. ಅಲ್ಲದೆ, ಕಾಲಕಾಲಕ್ಕೆ ಅವುಗಳಲ್ಲಿ ಸೇರ್ಪಡೆಗಳೂ ಆಗುತ್ತಬಂದವು. ಹೀಗೆ ಹದಿನೆಂಟು ಪುರಾಣಗಳು ತಯಾರಾಗುತ್ತಾಗುತ್ತ ಅವುಗಳಿಗೆ ಇಂದಿನ ಸ್ವರೂಪ ಬಂದಿತು. ಈ ಪುರಾಣಗಳಲ್ಲಿ ಅರಸುಮನೆತನಗಳ ವಂಶಾವಳಿ ಬಂದಿವೆ. ಆದರೆ ಅವರು ಕೊಟ್ಟ ಕಾಲಗಣಗೆ ವಿಶ್ವಸನೀಯವೆನಿಸುವುದಿಲ್ಲ. ಆದುದರಿಂದ ನಾಣ್ಯಗಳ ಸಾಧನಗಳಿಂದ ಅಥವಾ ಸಮಕಾಲೀನ ಗ್ರಂಥಕಾರರ ಪ್ರಾಸಂಗಿಕ ಉಲ್ಲೇಖಗಳಿಂದ-ಸಮರ್ಥನೆ ದೊರೆಯುವಂತಹ ಪೌರಾಣಿಕ ಸಂಗತಿಗಳನ್ನಷ್ಟು ನಂಬುತ್ತಾರೆ. ಹೀಗೆ ಈ ಐದೂವರೆ ನೂರು ವರುಷಗಳ ಇತಿಹಾಸವನ್ನು ಹೊಂದಿಸಿಕೊಳ್ಳಲಾಗುತ್ತದೆ.

**ಮಗಧರಾಜ್ಯದ ತುಂಡುಗಳು:** ಸುಮಾರು ಕ್ರಿ. ಪೂ. ೧೯೦ರಲ್ಲಿ ಬಕ್ಟ್ರಿಯದ* ಗ್ರೀಕರಾಜನಾದ ಡೆಮಿಟ್ರಿಯುಸನು ಹಿಂದುಕುಶ ಪರ್ವತವನ್ನು ದಾಟಿ ಮೌರ್ಯರ ಕೊನೆಯ ರಾಜನಾದ ಬೃಹದ್ರಥನೆಂಬವನನ್ನು (ಅಶೋಕನಿಂದ ಏಳನೆಯವನು) ಸೋಲಿಸಿದನು. ಮತ್ತು ಕಾಬೂಲದ ನೆರೆಯ ಬಹು ದೊಡ್ಡ ಪ್ರದೇಶದಲ್ಲಿ ತನ್ನ ಸತ್ತೆಯನ್ನು ಸ್ಥಾಪಿಸಿದನು. ಇದಕ್ಕೂ ಮೊದಲು ಎಂದರೆ ಕ್ರಿ. ಪೂ. ೨೨೦ ರಲ್ಲಿ ಆಂಧ್ರರು ಗೋದಾವರಿಯ ದಕ್ಷಿಣದಲ್ಲಿ ಸ್ವತಂತ್ರರಾಜ್ಯವನ್ನು ಸ್ಥಾಪಿಸಿದರು. ಈ ಸುಮಾರಿಗೇ ಕಲಿಂಗಪ್ರಾಂತವೂ ಸ್ವತಂತ್ರವಾಗಿರಬಹುದು. ಏಕೆಂದರೆ ಕಲಿಂಗ (ಓರಿಸಾ) ಪ್ರಾಂತದಲ್ಲಿ ಉದಯಗಿರಿ ಪರ್ವತದ ಮೇಲಿನ ಹಾಥಿಗುಂಫವೆಂಬಲ್ಲಿಯ ಕ್ರಿ. ಪೂ. ೧೫೦ರ ಕಲ್ಬರೆಹದಲ್ಲಿ ಖಾರವೇಲನೆಂಬ ಅರಸು ಅದನ್ನಾಳುತ್ತಿದ್ದನೆಂದೂ ಅವನು ಆ ವಂಶದಲ್ಲಿ ನಾಲ್ಕನೆಯವನೆಂದೂ ಉಲ್ಲೇಖವಿದೆ. ಈ ಖಾರವೇಲನು ದಕ್ಷಿಣದ ಆಂಧ್ರರನ್ನು ಸೋಲಿಸಿ ಅದನ್ನು ಕೆಲಕಾಲ ಆಳಿದನೆಂದೂ

* ಬಕ್ಟ್ರಿಯಾ ಎಂದರೆ ಹಿಂದುಕುಶ ಪರ್ವತ ಮತ್ತು ಆಕ್ಸಸ್ ನದಿಗಳ ನಡುವಿನ ಪ್ರದೇಶ.

ಹಿಂದುಸ್ಥಾನದ ವಾಯವ್ಯ ಸರಹದ್ದಿನಲ್ಲಿಯ ಪ್ರದೇಶ

ಕ್ರಿ. ಪೂ. ೧೭೧ರಲ್ಲಿ ಮಗಧರಾಜ್ಯವನ್ನೂ ತನ್ನ ವರ್ಚಸ್ವಕ್ಕೆ ಒಳಪಡಿಸಿಕೊಂಡನೆಂದೂ ತಿಳಿಯುತ್ತಿದೆ. ಇರಲಿ. ಹೀಗೆ ಮಗಧಸಾಮ್ರಾಜ್ಯದಲ್ಲಿ ತುಂಡುಗಳಾಗುತ್ತಿರುವಾಗ ಬೃಹದ್ರಥನ ಸೇನಾಪತಿಯಾದ ಪುಷ್ಯಮಿತ್ರನು ಅವನನ್ನು ಕೊಂದು ಪಾಟಲೀಪುತ್ರದ ಸಿಂಹಾಸನವನ್ನು ಹಿಡಿದುಕೊಂಡು ಅಲ್ಲಿ ಶುಂಗಮನೆತನವನ್ನು ಸ್ಥಾಪಿಸಿದನು. (ಕ್ರಿ. ಪೂ. ೧೮೮)

# ಗ್ರೀಕ ದೊರೆ ಮಿಲಿಂದ

**ರಾಜ್ಯವಿಸ್ತಾರ:** ಗಡಿನಾಡಿನಲ್ಲಿ ರಾಜ್ಯಸ್ಥಾಪನೆಯನ್ನು ಮಾಡಿದ ಗ್ರೀಕ ರಾಜರು ಈ ರಾಜ್ಯಕ್ರಾಂತಿಯ ಲಾಭವನ್ನು ಸಂಪೂರ್ಣವಾಗಿ ಪಡೆದುಕೊಂಡರು. ಅಲ್ಲಿಯ ಅರಸನಾದ ಮಿನಂಡರ್ ಅರ್ಥಾತ್ ಮಿಲಿಂದನು ಅಯೋಧ್ಯಾ ಪ್ರಾಂತದ ವರೆಗೂ ನಾಗಿಬಂದು ಸಾಕೇತ ನಗರವನ್ನೂ ರಾಜಪುತಾನದಲ್ಲಿ ಚಿತೋಡದ ಹತ್ತಿರದ ಮಧ್ಯಮಿಕಾ ಅಥವಾ ನಾಗರೀ ಪಟ್ಟಣವನ್ನು ಹಿಡಿದುಕೊಂಡನು. ಮಿಲಿಂದನ ಪ್ರಭುತ್ವವು ಮಧ್ಯ ಅಫಗಾಣಿಸ್ತಾನ, ವಾಯುವ್ಯ ಸೀಮಾಪ್ರಾಂತ, ಪಂಜಾಬ, ಸಿಂಧ, ರಾಜಪುತಸ್ತಾನ, ಮತ್ತು ಕಾಠೇವಾಡಗಳ ವರೆಗೂ ಇದ್ದಿತೆಂದು ತೋರುತ್ತದೆ. ಏಕೆಂ-ದರೆ ಅಲ್ಲೆಲ್ಲ ಅವನ ನಾಣ್ಯಗಳು ಹೆಚ್ಚು ಪ್ರಮಾಣದಲ್ಲಿ ದೊರೆತಿವೆ. ಮಿಲಿಂದನು ಪಂಜಾಬದಲ್ಲಿ ಸಿಯಾಲಕೋಳದಲ್ಲಿರುತ್ತಿದ್ದನು.

**ಬೌದ್ಧಧರ್ಮಸ್ವೀಕಾರ:** ಈ ಗ್ರೀಕರಾಜನು ಬೌದ್ಧಧರ್ಮವನ್ನು ಸ್ವೀಕರಿಸಿದ್ದನು. ಬೌದ್ಧ ವಾಙ್ಮಯದಲ್ಲಿ 'ಮಿಲಿಂದ ಪ್ರಶ್ನ' ಎಂಬ ತಾತ್ವಿಕ ಪ್ರಶ್ನೆಗಳು ಪ್ರಸಿದ್ಧವಾಗಿವೆ. ಬೌದ್ಧ ಭಿಕ್ಷು ನಾಗಸೇನ ಮತ್ತು ಮಿಲಿಂದರಲ್ಲಿ ನಡೆದ ಸಂಭಾಷಣೆ ಇದು. ರಾಜನ ಸಂದೇಹಗಳಿಗೆ ನಾಗಸೇನನು ಸಮಾಧಾನ ಹೇಳಿದ್ದಾನೆ. ಇದರಲ್ಲಿ ಕಾಲಿದಾಸನ ಮಾಲವಿಕಾಗ್ನಿಮಿತ್ರದಲ್ಲಿ, ಭವಿಷ್ಯಕಾರ ಪತಂಜಲಿಯ ಗ್ರಂಥದಲ್ಲಿ, ಗಾರ್ಗೀಸಂಹಿತೆಯಲ್ಲಿ ಮತ್ತು ಪುರಾಣದಲ್ಲಿ ಈ ಮಿಲಿಂದನ ದಾಳಿಯ ಹಾಗೂ ಸಾಕೇತ ಮುತ್ತಿಗೆಯ ಉಲ್ಲೇಖವಿದೆ. ಅಲ್ಲಿ ಬಹಳ ಕಡೆಯಲ್ಲಿ ಗ್ರೀಕರಿಗೆ ಯವನ ಎಂಬ ಸಂಜ್ಞೆಯಿದೆ. ಯವನರೆಂದು ಗ್ರೀಸದ ದಕ್ಷಿಣದಲ್ಲಿದ್ದ ಆಯೋನಿಯನ್ ನಡುಗಡ್ಡೆಗಳ ನಿವಾಸಿಗಳೆಂಬ ಅರ್ಥವಿರಬೇಕು.

**ಲೋಕಪ್ರಿಯತೆ:** ಮಿಲಿಂದನು ಯವನನಾದರೂ ಭಾರತೀಯರಲ್ಲಿ ಬೆರೆತನು. ಯೋಗ್ಯ ನ್ಯಾಯದಾನದಲ್ಲಿ ಅವನು ಪ್ರಸಿದ್ಧನಿದ್ದನು. ಪ್ರಜೆಗಳಿಗೆ ಪ್ರಿಯನಾಗಿದ್ದನು. ಅವನ ಮೃತ್ಯುವಿನ ನಂತರ, ಅವನ ಅಸ್ಥಿಮತ್ತು ಬೂದಿ ತಮಗೆಬೇಕೆಂದು ಅನೇಕ ನಗರಗಳು ಅಪೇಕ್ಷೆಪಟ್ಟವೆಂದು ಕಥೆಯಿದೆ. ಕಾಬೂಲ ಭಾಗದಲ್ಲಿಯ ಈ ಯವನ ರಾಜ್ಯವು ಸುಮಾರು ಎರಡು ನೂರು ವರುಷ ಬಾಳಿತು. ಮುಂದೆ ಕ್ರಿ. ವ. ೨೫ ರಲ್ಲಿ ಕುಶಾಣರ ದಾಳಿಯಾಗಿ ಈ ರಾಜ್ಯವು ಅಳಿಯಿತು.

**ಗ್ರೀಕರನ್ನು ಸೋಲಿಸಿದ ಪುಷ್ಯಮಿತ್ರ ಶುಂಗ:** ಉತ್ತರ ಹಿಂದುಸ್ತಾನದಲ್ಲಿಯ ಮಿಲಿಂದನ ವಿಜಯ ಪರಂಪರೆ ಹೆಚ್ಚುಕಾಲ ತಡೆಯಲಿಲ್ಲ. ಕಾಬೂಲದಲ್ಲಿ ಬಂಡಾಯವೆದ್ದುದರಿಂದ ಅವನು ಅವಸರದಿಂದ ಸ್ವದೇಶಕ್ಕೆ ಮರುಳಬೇಕಾಯಿತು. ಇತ್ತ ಪುಷ್ಯಮಿತ್ರನು ಮಗಧದಲ್ಲಿ ಕೆಲಮಟ್ಟಿಗೆ ಸ್ಥಿರತೆಯುಂಟಾದೊಡನೆ ಸಿಂಧೂ ನದಿಯ ವರೆಗೆ ದಂಡನ್ನು ಕಳಿಸಿ, ಮಿಲಿಂದನನ್ನು ಸೋಲಿಸಿ, ತಾನು ಕಳೆದುಕೊಂಡಿದ್ದ

ಆ ಕಡೆಯ ಪ್ರದೇಶಗಳನ್ನೆಲ್ಲ ತಿರುಗಿ ತಕ್ಕೊಂಡನು. ಈ ದಿಗ್ವಿಜಯುವನ್ನು ಸಾರುವುದ ಕ್ಕಾಗಿ ಪುಷ್ಯಮಿತ್ರನು ದೊಡ್ಡ ಅಶ್ವಮೇಧಯಾಗವನ್ನು ಮಾಡಿದನು. ಇವನು ಮಹಾ ಶಿವಭಕ್ತನು. ಅಶೋಕನ ಕಾಲದಿಂದ ಮೂಲೆಗುಂಪಾಗಿದ್ದ ಹಿಂದೂ ಧರ್ಮಕ್ಕೆ ಉತ್ತೇ ಜನವಿತ್ತನು. ಇವನ ಆಳಿಕೆ ಒಟ್ಟು ೩೬ ವರುಷ. ಇವನ ತರುವಾಯ ಇವನ ಮಗ ಅಗ್ನಿಮಿತ್ರನು ಪಟ್ಟವೇರಿದನು. ಈತನೇ ಕಾಲಿದಾಸನ ಮಾಲವಿಕಾಗ್ನಿಮಿತ್ರ ನಾಟ ಕದ ನಾಯಕನು. ಶುಂಗ ಮನೆತನದಲ್ಲಿ ಒಟ್ಟು ಹತ್ತುಜನ ರಾಜರಾದರು.

**ವೈಷ್ಣವ ಧರ್ಮೀಯ ಗ್ರೀಕ ರಾಯಭಾರಿ :** ಶುಂಗ ವಂಶದಲ್ಲಿ ಭಾಗ ಭದ್ರನೆಂಬವನೊಬ್ಬ ಪುರುಷನಾಗಿ ಹೋದನು. ಅವನು ವಿದಿಶಾ (ಮಧ್ಯಹಿಂದುಸ್ತಾನ ದಲ್ಲಿಯ ಭೇಲಸಾ) ದಲ್ಲಿ ಆಳುತ್ತಿದ್ದಾಗ ಹೆಲಿಓಡೋರಸನೆಂಬ ಗ್ರೀಕ (ಯವನ) ಗೃಹಸ್ಥನು ತಕ್ಷಶಿಲೆಯ ಬಕ್ಟ್ರಿಯನ್ ರಾಜನ ವಕೀಲನಾಗಿ ಕೆಲವರ್ಷ ಇಲ್ಲಿದ್ದನು. ( ಕಿ. ಪೂ. ೧೫೫ ). ಆಗವನಿಗೆ ವೈಷ್ಣವಧರ್ಮದಲ್ಲಿ ಆಸಕ್ತಿಯುಂಟಾಗಿ ವಿದಿಶೆಯಲ್ಲಿ ಗರುಡಧ್ವಜಸ್ತಂಭವನ್ನು ನಿಲ್ಲಿಸಿದನು; ಮತ್ತು 'ಇಂದ್ರಿಯ ದಮನ, ತ್ಯಾಗ ಸದ್ವರ್ತನಗಳ ಆಚರಣದಿಂದ ಮನುಷ್ಯನು ಸ್ವರ್ಗವನ್ನು ಸೇರುತ್ತಾನೆ' ಎಂದು. ಅದರ ಮೇಲೆ ಕೆತ್ತಿಸಿದನು. ಪ್ರಾಚೀನ ಗ್ರೀಕಭಾರತೀಯ ಸಾಂಸ್ಕೃತಿಕ ಸಂಬಂಧದ ಸಾಕ್ಷಿಯಾಗಿ ಈ ಗರುಡಧ್ವಜಸ್ತಂವು ಭೇಲಸಾದಲ್ಲಿ ಈಗಲೂ ನಿಂತಿದೆ.

**ಕಣ್ವಮನೆತನ (ಕ್ರಿ. ಪೂ. ೭೩—೨೮) :** ದುರ್ವ್ಯಸನಿಯಾದ ದೇವಭೂಮಿ ಯೆಂಬ ಶುಂಗರ ಕೊನೆಯ ರಾಜನನ್ನು ಅವನ ಮಂತ್ರಿಯಾದ ವಾಸುದೇವನು ಕೊಂದು ( ಕಿ. ಪೂ. ೭೩ ), ಮಗಧಸಿಂಹಾಸನದ ಮೇಲೆ ಕಣ್ವಮನೆತನವನ್ನು ಸ್ಥಾಪಿಸಿದನು. ಇದು ಬ್ರಾಹ್ಮಣ ವಂಶ. ಈ ಮನೆತನದ ನಾಲ್ವರು ೪೫ ವರುಷ ಆಳಿದರು. ಈ ಕಾಲದಲ್ಲಿ ಕುಶಾಣರ ದಾಳಿಗಳಿಂದ ಮಗಧ ಸತ್ತೆ ತೀರ ಸಂಪುಷ್ಟಕ್ಕೆ ಬಂದಿತ್ತು. ನಾಲ್ಕನೆಯ ಕಣ್ವದೊರೆ ಸುಶರ್ಮನ ಆಳಿಕೆಯಲ್ಲಿ ಆಂಧ್ರರು ದಾಳಿಮಾಡಿ ಈ ಮನೆತನವನ್ನು ಕೊನೆಗೊಳಿಸಿದರು.

**ಶಕರ ದಾಳಿಗಳು ಮತ್ತು ರಾಜ್ಯಗಳು :** ಮಗಧರಾಜ್ಯದಲ್ಲಿ ಈ ರೀತಿ ಘಟನೆ ಗಳು ನಡೆಯುತ್ತಿದ್ದಾಗ ಮಧ್ಯಆಶಿಯಾದಲ್ಲಿಯೂ ಹಿಂದುಸ್ತಾನದ ವಾಯವ್ಯ ದಲ್ಲಿಯೂ ಇನ್ನೊಂದು ಕ್ರಾಂತಿಯಾಯಿತು. ಇದರಿಂದ ಹಿಂದುಸ್ತಾನದ ಮೇಲೆ ಬಲು ದೊಡ್ಡ ಪರಿಣಾಮವಾಯಿತು. ಬಕ್ಟ್ರಿಯದ ಉತ್ತರದಲ್ಲಿ ಆಕ್ಸಸ್ ಮತ್ತು ಜಕ್ಸಾರ್ಟಿಸ್ ನದಿಗಳ ನಡುವಿನ ನಾಡಿನಲ್ಲಿ ಸಿಥಿಯನ್ ಅಥವಾ ಶಕರೆಂಬ ಕಾಡುಜನರಿರುತ್ತಿದ್ದರು. ಅದರ ಪೂರ್ವದಲ್ಲಿ ಚೀನದೊಳಗೆ ಯುಎಚಿ ಎಂಬ ಜನರೂ ಅದರಾಚೆ ಹೂಣರೂ ನೆಲೆಸಿ ದ್ದರು. ಕ್ರಿ. ಪೂ. ದ ಎರಡು ಶತಕಗಳಲ್ಲಿ ಹೂಣರು, ಯುಎಚಿ ಅಥವಾ ಕುಶಾಣರು, ಶಕರು ಮತ್ತು ಯವನರು ಒಬ್ಬರಿಗೊಬ್ಬರು ಅವರು ದೇಶದಿಂದ ಹೋಕೊಡುತ್ತ ಹಿಂದು

ಸ್ತಾನದ ಕಡೆಗೆ ನುಗ್ಗಿದರು. ಎಂದರೆ ಹೂಣರು ಕಶಾನರನ್ನೂ ಶಕರನ್ನೂ ಅವರ ದೇಶ ದಿಂದ ಹೊರಡಿಸಿದರು. ಆಗ ಶಕರು ಬಕ್ಟ್ರಿಯಾ ಪ್ರಾಂತವನ್ನು ಆಕ್ರಮಿಸಿದರು (ಕ್ರಿ. ಪೂ. ೧೨೦). ಆದುದರಿಂದ ಬಕ್ಟ್ರಿಯಾದಲ್ಲಿಯ ಗ್ರೀಕರು ಹಿಂದುಕುಶದ ಆಚೆಯ ತಮ್ಮ ಕಾಬೂಲ ರಾಜ್ಯವನ್ನು ಆಶ್ರಯಿಸಿದರು. ಇತ್ತ ಶಕರು ಬಕ್ಟ್ರಿಯದ ದಕ್ಷಿಣಕ್ಕೆ ಪಾರ್ಥಿಯಾ ರಾಜ್ಯದಲ್ಲಿ ಹೊಕ್ಕರು; ಅಲ್ಲಿ ಸೀಸ್ತಾನ ಅಥವಾ ಶಕಸ್ತಾನ ಪ್ರಾಂತದಲ್ಲಿ ಅವರ ಬಂಧುಗಳೇ ಬಹು ಪ್ರಾಚೀನ ಕಾಲದಿಂದ ನೆಲೆಸಿದ್ದರು. ಶಕರು ಅವರೊಡನೆ ಗೆಳೆತನ ಬೆಳೆಸಿ, ಅಲ್ಲಿಂದ ಬಲುಚಿಸ್ತಾನ ಮಾರ್ಗವಾಗಿ ಬೋಲನ ಘಟ್ಟದೊಳಗಿಂದ ಸಿಂಧ–ಪಂಜಾಬ ಪ್ರಾಂತಗಳಲ್ಲಿ ಹೊಕ್ಕರು. ಇದರ ಮುಂದಿನ ಕಾಲದಲ್ಲಿ ಭಾರತದ ಪಶ್ಚಿಮೋತ್ತರ ಭಾಗದಲ್ಲಿ ತಕ್ಷಶಿಲೆ, ಉಜ್ಜಯಿನಿ, ಮಥುರೆ ಮತ್ತು ಕಾಠೇವಾಡದ ಪ್ರಾಂತಗಳಲ್ಲಿ ಶಕರ ಸಣ್ಣ ಸಣ್ಣ ರಾಜ್ಯಗಳು ಪಸರಿಸಿದವು. ಅಲ್ಲಿಯ ರಾಜರು ತಮ್ಮನ್ನು ಸತ್ರಪ–ಛತ್ರಪ ಅಥವಾ ಮಹಾಕ್ಷತ್ರಪ ಎಂದುಕೊಳ್ಳುತ್ತಿದ್ದರು. ಈ ಭಾಗದಲ್ಲಿ ಶಕರ ಆಳಿಕೆ ಕ್ರಿ. ವ. ೫ ನೆಯ ಶತಕದ ವರೆಗೆ ಇತ್ತು. ಆಂಧ್ರರ ವಿರೋಧ ದಿಂದ ಭಾರತದಲ್ಲಿ ಶಕರಿಗೆ ದೊಡ್ಡ ಸಾಮ್ರಾಜ್ಯ ಸ್ಥಾಪನೆ ಅಸಾಧ್ಯವಾಯಿತು. ಉತ್ತರದಲ್ಲಿ ಕುಶಾಣರು, ಪೂರ್ವದಲ್ಲಿ ಗುಪ್ತರು, ದಕ್ಷಿಣದಲ್ಲಿ ಆಂಧ್ರರು ಇತ್ಯಾದಿ ರಾಜ್ಯಕರ್ತರೊಡನೆ ಶಕರು ಕಾದಬೇಕಾಯಿತು; ಅದರಿಂದ ಅವರ ಅರಸೊತ್ತಿಗೆ ಮುಂದೆ ಬಾಳಲಿಲ್ಲ.

## ಕುಶಾನ–ಕನಿಷ್ಕ ಸಮ್ರಾಟ್

**ಕುಶಾನರ ದಾಳಿಗಳು :** ಹೂಣರ ಪೀಡೆಯಿಂದಾಗಿ ಯುಯೋಚಿಗಳು ಜಕ್ಸಾರ್ಟಿಸ್ ಮತ್ತು ಆಕ್ಸಸ್ ನದಿಗಳ ನಡುವೆ ನೆಲೆಸಿದರೆಂದು ಹಿಂದೆ ಹೇಳಿದೆ. ಅಲ್ಲಿಯೂ ಹೂಣರು ಅವರನ್ನು ಬೆನ್ನಟ್ಟಿದರು. ಆಗ ಯುಯೋಚಿಗಳು ಶಕರನ್ನು ಬಕ್ಟ್ರಿಯದಿಂದ ಹೊಡೆದಟ್ಟಿ ಅಲ್ಲಿ ತಾವು ಪ್ರಬಲರಾದರು. ಬಕ್ಟ್ರಿಯದಲ್ಲಿ ಅವರು ಸುಮಾರು ನೂರುವರುಷ ನೆಲೆನಿಂತರು. ಯುಯೋಚಿ ಜನರಲ್ಲಿಯ ಕುಶಾನ ಗುಂಪಿನವರು ಕಾಡ್ಫಿಸೆಸ್ ದೊರೆಯ ನೇತೃತ್ವದಲ್ಲಿ ಹಿಂದುಕುಶ ಪರ್ವತವನ್ನು ದಾಟಿ ಕಾಬೂಲ ಪ್ರಾಂತದ ಮೇಲೆ, ದಾಳಿಯಿಟ್ಟು ಗ್ರೀಕರನ್ನು ಸೋಲಿಸಿದರು. ಮುಂದೆ ಅವನ ಮಗ ಎರಡನೆಯ ಕಾಡ್ಫಿಸೆಸನಂತೂ ಭಾರತದಲ್ಲಿ ಕಾಶಿಯ ವರೆಗಿನ ಪ್ರದೇಶವನ್ನು ಗೆದ್ದನು.

**ರಾಜಧಾನಿ ಪೇಶಾವರ :** ಎರಡನೆಯ ಕಾಡ್ಫಿಸೆಸನ ತರುವಾಯ ಕ್ರಿ. ವ. ೧೨೦ ರಲ್ಲಿ ಕನಿಷ್ಕನೆಂಬವನು ಕುಶಾನರ ರಾಜನಾದನು. ಪುರುಷಪುರವನ್ನು

ಎಂದರೆ ಪೇಶಾವರವನ್ನು ಅವನು ರಾಜಧಾನಿಯನ್ನಾಗಿ ಮಾಡಿಕೊಂಡನು. ಕನಿಷ್ಕನ ಸಾಮ್ರಾಜ್ಯವು ದೊಡ್ಡದಿತ್ತು. ಕಾಶ್ಮೀರ, ಸಿಂಧ, ಕಾಬೂಲಗಳಲ್ಲದೆ ಕಾಶಗರ, ಚಾಸಕಂದ, ಖೋತಾನ ಮೊದಲಾದ ಕಾಶ್ಮೀರದ ಉತ್ತರಕಡೆಯ ಚೀನದ ಪ್ರಾಂತಗಳೆಲ್ಲವೂ ಅವನ ಆಳಿಕೆಗೆ ಸೇರಿದ್ದವು. ಪೂರ್ವದಲ್ಲಿ ಕಾಶಿ, ದಕ್ಷಿಣದಲ್ಲಿ ವಿಂಧ್ಯಪರ್ವತದ ವರೆಗೆ ಅವನ ರಾಜ್ಯ ಹಬ್ಬಿತ್ತು. ಪಾರ್ಥಿಯನ್ ಮತ್ತು ಶಕಸತ್ರಪರ ಸಣ್ಣ ಸಣ್ಣ ರಾಜ್ಯಗಳೂ ಅವನ ಅಧಿಕಾರಕ್ಕೆ ಒಳಪಟ್ಟಿದ್ದವು. ಅಶೋಕನ ಅನಂತರ ಹೇಳಿಕೊಳ್ಳುವಂತಹ ದೊಡ್ಡ ಸಾಮ್ರಾಜ್ಯವೆಂದರೆ ಕನಿಷ್ಕನದೇ. ಆದರೆ ಇವನ ರಾಜ್ಯದ ಬಹುಭಾಗ ಭಾರತದ ಹೊರಗಿತ್ತು. ಇದರಿಂದ ಕನಿಷ್ಕನು ಭಾರತೀಯರಿಗೆ ಹೇಗೋ ಹಾಗೆ ಹೊರಗಿನ ಜನಕ್ಕೂ ತಮ್ಮ ಸಮ್ರಾಟನೆಂದು ಎನಿಸುತ್ತಿತ್ತು. ಉತ್ತರಭಾರತದಲ್ಲಿ ಕನಿಷ್ಕನ ಆಳಿಕೆ ನಡೆದಾಗ ಪಶ್ಚಿಮದಲ್ಲಿ ರೋಮವು ವೈಭವಶಾಲಿಯಾಗಿತ್ತು. ಎರಡೂ ರಾಜ್ಯಗಳಲ್ಲಿ ವ್ಯಾಪಾರೀ ಸಂಪರ್ಕವಿದ್ದ ಬಗ್ಗೆ ಪ್ರಮಾಣಗಳು ದೊರೆತಿವೆ. ಅನೇಕ ರೋಮನ್ ನಾಣ್ಯಗಳು ಕುಶಾನ ರಾಜ್ಯದಲ್ಲಿ ದೊರೆತಿವೆ.

**ರೋಮದ ವರೆಗೆ ಬೌದ್ಧ ಧರ್ಮದ ಪ್ರಚಾರ :** ಕನಿಷ್ಕನು ಬರೀ ಸಾಮ್ರಾಜ್ಯ ಸಂಸ್ಥಾಪಕನಾಗಿರದೆ ವಿದ್ಯಾಪ್ರಿಯನೂ, ಬೌದ್ಧ ಧರ್ಮದ ಪುರಸ್ಕರ್ತನೂ ಆಗಿದ್ದನು. ಮೌರ್ಯರು ಆಳಿದಂದಿನಿಂದ ಬೌದ್ಧ ಧರ್ಮಕ್ಕೆ ದೊಡ್ಡ ಆಶ್ರಯ ತಪ್ಪಿದಂತಾಗಿತ್ತು; ಕನಿಷ್ಕನು ಆ ಕೊರತೆಯನ್ನು ಹೋಗಲಾಡಿಸಿ ಬೌದ್ಧ ಧರ್ಮದ ಪ್ರಸಾರಕ್ಕಾಗಿ ಪ್ರಯತ್ನಪಟ್ಟನು. ಅದಕ್ಕಾಗಿ ಪೂರ್ವದಲ್ಲಿ ಚೀನಕ್ಕೂ ಪಶ್ಚಿಮದಲ್ಲಿ ರೋಮ ರಾಜ್ಯಕ್ಕೂ ಬೌದ್ಧ ಭಿಕ್ಷುಗಳನ್ನು ಕಳಿಸಿದನು. ವಿದ್ವಾಂಸರ ಸಭೆ ಕೂಡಿಸಿ ಅವನು ಬೌದ್ಧ ಗ್ರಂಥಗಳ ಚರ್ಚೆಯನ್ನು ನಡೆಯಿಸುತ್ತಿದ್ದನು. ಆಗ ಈ ಬಗ್ಗೆ ಎಷ್ಟೋ ಸಂಗತಿಗಳು ಉಪಲಬ್ಧವಾದವು. ಪ್ರಸಿದ್ಧ ಬೌದ್ಧ ತತ್ತ್ವಜ್ಞಾನಿಯೂ ಕಲಿಯೂ ಆದ ಅಶ್ವಘೋಷನು ಕನಿಷ್ಕನ ಆಶ್ರಯದಲ್ಲಿದ್ದನು. ಇವನ 'ಬುದ್ಧ ಚರಿತಮ್' ಎಂಬ ಗ್ರಂಥ ಬಹು ಪ್ರಸಿದ್ಧವಿದೆ.

**ಉದಾರ ವರ್ತನ:** ಕನಿಷ್ಕನ ಕೆಲವು ನಾಣ್ಯಗಳ ಮೇಲೆ ಬುದ್ಧನ ಚಿತ್ರಗಳು ಕಾಣುತ್ತವೆ. ಆದರೆ ಕೆಲವುಗಳ ಮೇಲೆ ಶಿವ, ಸೂರ್ಯ ಮೊದಲಾದ ಹಿಂದು ದೇವತೆಗಳ ಚಿಹ್ನಗಳಿವೆ. ಪಾರಶಿ ದೇವತೆಗಳ ಚಿತ್ರಗಳೂ ಕೆಲವು ನಾಣ್ಯಗಳ ಮೇಲಿವೆ. ತನ್ನ ಬೇರೆ ಬೇರೆ ಧರ್ಮದ ಪ್ರಜೆಗಳ ಸಂಪ್ರೀತಿಗಾಗಿ ಇಂತಹ ನಾಣ್ಯಗಳನ್ನು ಬಳಕೆಗೆ ತಂದಿರಬಹುದು.

**ಗಾಂಧಾರ ಕಲೆ :** ಕನಿಷ್ಕನು ಗ್ರೀಕ ಶಿಲ್ಪಿಗಳನ್ನು ಕರೆತಂದು ಅವರಿಂದ ಬುದ್ಧಮೂರ್ತಿಯನ್ನು ತಾನೇ ಕಲ್ಪನೆ ಕೊಟ್ಟು ಮಾಡಿಸಿದನು. ಇಬ್ಬರೂ ಬೇರೆ ಬೇರೆ ದೇಶದವರಾದುದರಿಂದ ಅವರು ಸಿದ್ಧಪಡಿಸಿದ ಬುದ್ಧಮೂರ್ತಿ ಬಹ್ವಂಶದಲ್ಲಿ ಗ್ರೀಕ

ದೇವನಾದ ಅಪೆಲೋವನ್ನು ಹೋಲುತ್ತಿದ್ದರೆ ಆಶ್ಚರ್ಯವಲ್ಲ. ಈ ಗ್ರೀಕಶಿಲ್ಪಿ ಜಾತಕ ಕಥೆಗಳಲ್ಲಿಯ ಅನೇಕ ಪ್ರಸಂಗಗಳನ್ನು ಗೋಡೆಯಮೇಲೆ ಚಿತ್ರಿಸಿದ್ದಾನೆ. ಅವುಗಳಲ್ಲಿ ಭಾರತೀಯ ಮತ್ತು ಗ್ರೀಕ ಕಲಾ-ಕಲ್ಪನೆಗಳ ಬೆರಕೆಯಾಗಿದೆ. ಈ ಚಿತ್ರಕಲೆಯ ಸಂಪ್ರದಾಯವು 'ಇಂಡೊ' ಅಥವಾ 'ಗಾಂಧಾರ' ಸಂಪ್ರಾದಾಯವೆಂದು ಹೆಸರಾಗಿದೆ. ಏಕೆಂದರೆ ಈ ಮಾದರಿಯ ಬಹಳ ಚಿತ್ರಗಳು ಗಾಂಧಾರಪ್ರಾಂತದಲ್ಲಿ ಕಂಡುಬರುತ್ತವೆ. ಇರಲಿ. ಕನಿಷ್ಕನು ಬಹುಶಃ ೧೬೨ ರಲ್ಲಿ ಮರಣಹೊಂದಿರಬಹುದು. ಕನಿಷ್ಕನ ಒಂದು ದೊಡ್ಡ ಮೂರ್ತಿ ಮಥುರೆಯ ಬಳಿಯಲ್ಲಿ ಸಿಕ್ಕಿದೆ. ಅದರ ತಲೆ ಒಡೆದಿದೆ. ಆದರೆ, ಅದರಿಂದ ಆಗಿನ ಕಾಲದ ಉಡಿಗೆ ತೊಡಿಗೆ ಮೊದಲಾದವುಗಳಬಗ್ಗೆ ಕೆಲಮಟ್ಟಿಗೆ ಕಲ್ಪನೆ ಬರುವಂತಿದೆ.

**ಕೊನೆ :** ಕನಿಷ್ಕನು ಒಳ್ಳೇ ಮಹತ್ವಾಕಾಂಕ್ಷಿ ಅನೇಕ ರಾಜ್ಯಗಳನ್ನು ಗೆಲ್ಲಬೇಕೆಂದು ಅವನಿಗೆನಿಸಹತ್ತಿತು. ಆದರೆ ಚೀನದೊಡನೆ ನಡೆದ ಸತತ ಯುದ್ಧದಿಂದ ಅವನ ಸೈನಿಕರು ಬೇಸತ್ತರು. ಅವರ ಸಂಭಂಧಿಕರು ಯಾರೋ ಕನಿಷ್ಕನ ಕೊಲೆ ಮಾಡಿದರೆಂದು ದಂತಕಥೆಯಿದೆ (ಕ್ರಿ. ವ. ೧೫೨) ಭಾರತದ ವಾಯುವ್ಯ ಪ್ರದೇಶದಲ್ಲಿ ಅವನ ಸಾಮ್ರಾಜ್ಯವಿತ್ತು. ಅದು ಭಾರತದ ಹೊರಗೂ ಕೆಲವೊಂದು ಪ್ರದೇಶವನ್ನು ವ್ಯಾಪಿಸಿತ್ತು. ಅವನ ಮರಣದ ತರುವಾಯ ಸಾಮ್ರಾಜ್ಯದೊಳಗಿನ ಪ್ರಾಂತಗಳೆಷ್ಟೋ ಸ್ವತಂತ್ರವಾದವು. ಹುವಿಷ್ಕನೆಂಬ ಅವನ ವಂಶಜನು ಮಥುರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅದನ್ನು ಸುಂದರ ನಗರವನ್ನಾಗಿ ಮಾಡಿದನು. ಕುಶಾನರ ಆಳಿಕೆ ಕ್ರಿ. ವ. ಮೂರನೆಯ ಶತಕದ ವರೆಗೆ ನಡೆದಿತ್ತು.

**ಅಶೋಕ ಮತ್ತು ಕನಿಷ್ಕ :** ಅಶೋಕನ ಅನಂತರದ ಪರಾಕ್ರಮಿಯಾದ ಬೌದ್ಧಧರ್ಮಪ್ರಸಾರಕರಾಜನೆಂದು ಕನಿಷ್ಕನ ಪ್ರಸಿದ್ಧಿಯಿದೆ. ಇಬ್ಬರೂ ಭಿಕ್ಷುಗಳಿಗೆ ಸಹಾಯಮಾಡಿದರು. ಪರದೇಶಗಳಿಗೆ ಧರ್ಮಪ್ರಚಾರಕರನ್ನು ಕಳಿಸಿದರು. ಇಬ್ಬರಲ್ಲಿ ಕಾಣುವ ಒಂದು ದೊಡ್ಡ ವ್ಯತ್ಯಾಸವೆಂದರೆ, ಅಶೋಕನು ಕಲಿಂಗ ಯುದ್ಧದ ತರುವಾಯ ಯುದ್ಧಮಾಡಬಾರದೆಂದು ನಿಶ್ಚಯಿಸಿ ಹಾಗೆ ಕೊನೆವರೆಗೆ ನಡೆದನು; ಆದರೆ ಕನಿಷ್ಕನ ಯುದ್ಧಾಪೇಕ್ಷೆ ಎಂದೂ ತಣಿಯಲಿಲ್ಲ. ಸಾಮ್ರಾಜ್ಯವನ್ನು ಹೆಚ್ಚಿಸುವ ಇಚ್ಛೆ ಅಶೋಕನಿಗಿರಲಿಲ್ಲ; ಕನಿಷ್ಕನಿಗೆ ಮಾತ್ರ ಇತ್ತು. ಕನಿಷ್ಕನು ಪ್ರದೇಶಗಳನ್ನು ಗೆದ್ದನು; ಆದರೆ ಅಶೋಕನು ಜನರ ಹೃದಯಗಳನ್ನು ಗೆದ್ದನು. ಅಶೋಕ ಮತ್ತು ಕನಿಷ್ಕ ಇಬ್ಬರ ಸಾಮ್ರಾಜ್ಯಗಳೂ ಅವರ ಮರಣಾನಂತರದಲ್ಲಿ ನಷ್ಟವಾದವು. ಆದರೆ ಅಶೋಕನು ಮಾನವೀಯ ಚಿತ್ತದಲ್ಲಿ ಪಡೆದುಕೊಂಡ ಸ್ಥಾನವು ಮಾತ್ರ ಇಂದು ಎರಡು ಸಾವಿರ ವರುಷಗಳ ತರುವಾಯವೂ ಶಾಶ್ವತವಾಗಿದೆ.

**ಕುಶಾಣ ಸತ್ತೆಯು ಕೊನೆ:** ಕನಿಷ್ಕನ ಮರಣದ ತರುವಾಯ ಕುಶಾಣರ ರಾಜ್ಯವು * ಕ್ರಿ. ವ. ಮೂರನೆಯ ಶತಕದ ವರೆಗೆ ( ಕ್ರಿ ವ. ೨೨೦ ) ಬಾಳಿತು. ಕಾಶ್ಮೀರ ಪ್ರಾಂತದಲ್ಲಿ ಅವರ ಆಳಿಕೆ ಆರನೆಯ ಶತಕದ ವರೆಗಿತ್ತು. ಆದರೆ ರಾಜಪುತಾನದಲ್ಲಿ ಉದಯಹೊಂದಿದ ಯೌಧೇಯವೆಂಬ ಜನಾಂಗವು ಕ್ರಿ. ವ. ಎರಡನೆಯ ಶತಕದಲ್ಲಿಯೇ ಉತ್ತರ ಹಿಂದುಸ್ತಾನದ ಬಹುಭಾಗದಲ್ಲಿಯ ಕುಶಾಣರ ಪರಕೀಯ ಸತ್ತೆಯಾಗಿ ಉಚ್ಚಾಟನೆ ಮಾಡಿತು. ಈ ಕೆಲಸದಲ್ಲಿ ಮಾಳವೆಯುವರು ಅವರಿಗೆ ನೆರವಾದರು. ಆದರೆ ಈ ಎರಡು ಜನಾಂಗಗಳು ಇಲ್ಲಿ ಏಕಛತ್ರೀ ರಾಜ್ಯವನ್ನು ಕಟ್ಟಲಿಲ್ಲ. ಬುಂದೇಲ ಖಂಡದಲ್ಲಿ ಉದಯಹೊಂದಿದ ಭಾರಶಿವರು ಆ ಕೆಲಸ ಮಾಡಿದರು. ಭಾರಶಿವರು ಶಿವಭಕ್ತರು. ಸಾಮ್ರಾಜ್ಯ ಸ್ಥಾಪನೆಯ ನಿದರ್ಶನವೆಂದು ಅವರು ಹತ್ತು ಅಶ್ವಮೇಧ ಯಜ್ಞಗಳನ್ನು ಮಾಡಿದರು. ಅವರಲ್ಲಿ ವೀರಸೇನನೆಂಬವನು ಪರಾಕ್ರಮಿಯಾದ ರಾಜನು.

**ಪಾರ್ಥಿಯನ್ ಜನರ ದಾಳಿಗಳು:** ಕ್ರಿ. ಪೂ. ೨೫೦ರ ಸುಮಾರಿಗೆ ಪಾರ್ಥಿಯದಲ್ಲಿ † ಪಾರ್ಥಿಯನ್ ರಾಜ್ಯದ ಸ್ಥಾಪನೆಯಾಯಿತು. ಅವರ ಮೊದಲನೆಯ ರಾಜನಾದ ಮಿಥ್ರಿಡೇಟ್ಸನು ( ಕ್ರಿ. ಪೂ. ೧೭೧–೧೩೮ ) ಸಿಂಧೂ ನದಿಯ ವರೆಗೆ ಸಾಗಿ ಬಂದನು. ಮುಂದಿನ ಕಾಲದಲ್ಲಿ ಪಾರ್ಥಿಯನರೂ ಶಕರೂ ಪಾರ್ಥಿಯದಲ್ಲಿ ಮತ್ತು ಹಿಂದುಸ್ತಾನದ ಗಡಿಯಲ್ಲಿ ನೆರೆಹೊರೆಯಾಗಿ ಇರತೊಡಗಿದರು. ಸಿಂಧದ ದಕ್ಷಿಣ ಭಾಗದಲ್ಲಿ ಪಾರ್ಥಿಯನರ ಆಳಿಕೆಯಿತ್ತು. ಪಾರ್ಥಿಯನ್ ಮತ್ತು ಶಕ ರಾಜರಲ್ಲಿ ಶರೀರ ಸಂಬಂಧವೂ ಆಗಿರಬೇಕು. ಕ್ರಿ. ವ. ಮೊದಲ ಶತಕದಲ್ಲಿ ಗೋಂಡೋಫರ್ನಿಸ್ ಎಂಬ ಪಾರ್ಥಿಯನ್ ರಾಜನು ಬಲುಚಿಸ್ತಾನ ಸಿಂಧ ಮೊದಲಾದ ಪ್ರಾಂತಗಳನ್ನು ಆಳುತ್ತಿದ್ದನು. ಅವನ ಓಲಗಕ್ಕೆ ಕ್ರೈಸ್ತ ಮಿಶನರಿ ಸೇಂಟ್ ಥಾಮಸನು ಕಳಿಸಲ್ಪಟ್ಟಿದ್ದನು. ಅವನ ಉಪದೇಶದಿಂದ ಗೋಂಡೋಫರ್ನೀಸನು ಕ್ರೈಸ್ತನಾದನು. ಕ್ರಿ. ವ. ಎರಡನೆಯ ಶತಕದಲ್ಲಿ ಪಾರ್ಥಿಯನ್ ರಾಜ್ಯವು ಕುಶಾಣ ಸಾಮ್ರಾಜ್ಯದಲ್ಲಿ ಸೇರಿತು. ದಕ್ಷಿಣದಲ್ಲಿಯ ಪಲ್ಲವ ರಾಜರೊಡನೆ ಈ ಪಾರ್ಥಿಯನರ ಸಂಬಂಧ ಜೋಡಿಸಲಾಗುತ್ತಿದೆ; ಅದು ತಪ್ಪು.

* ದಕ್ಷಿಣದಲ್ಲಿ ಶಾಲಿವಾಹನ ಶಕವೆಂದು ಹೆಸರಾಗಿದ್ದ ಶಕವನ್ನು ಕುಶಾಣರಾಜನು ಆರಂಭಿಸಿರಬೇಕು, ಮತ್ತು ಶಾಲಿವಾಹನನ ಪರಾಕ್ರಮದ ಮೂಲಕ ಆ ಕಾಲಗಣನೆ ಮುಂದೆ ಅವನ ಹೆಸರಿನಿಂದ ನಡೆದಿರಬೇಕು. ಶಾಲಿವಾಹನ ಶಕವು ಕ್ರಿ. ವ. ೭೮ ರಿಂದ ಆರಂಭವಾಗುತ್ತದೆ.

† ಪಾರ್ಥಿಯಾ ಎಂದರೆ ಬಕ್ಟ್ರಿಯದ ನೈರುತ್ಯದ ಕಡೆಯ ಪ್ರದೇಶ. ( ನಕ್ಷೆಪು )

# ಆಂಧ್ರರ ರಾಜ್ಯ

**ಆಂಧ್ರರ ಪ್ರಾಚೀನತೆ:** ಭಾರತದ ಪಶ್ಚಿಮೋತ್ತರ ಭಾಗದಲ್ಲಿ ಯವನ, ಶಕ, ಕುಶಾಣ, ಪಾರ್ಥಿಯನ್ ಇತ್ಯಾದಿ ಪರಕೀಯರ ಗೊಂದಲ ನಡೆದಿರುವಾಗ, ದಕ್ಷಿಣದಲ್ಲಿ ಆಂಧ್ರರ ರಾಜ್ಯವು ಪ್ರಬಲವಾಯಿತು. ಆಂಧ್ರರನ್ನು ಆರ್ಯವಂಶಗಳಲ್ಲಿ ಎಣಿಸಲಾಗುವುದಿಲ್ಲ; ಆದರೆ ಅವರು ಕಾಡುಜನರಾಗಿರಲಿಲ್ಲ. ಅವರ ರಾಜ್ಯವು ನರ್ಮದೆಯ ದಕ್ಷಿಣದಲ್ಲಿ, ಗೋದಾವರೀ-ಕೃಷ್ಣೆಗಳ ನಡುವಿನ ಪ್ರದೇಶದಲ್ಲಿ, ವಿಶೇಷತಃ ಪೂರ್ವಭಾಗದಲ್ಲಿ ಹಬ್ಬಿತ್ತು. ಅದರ ಉತ್ತರ ಸೀಮೆಯಲ್ಲಿ ಕಲಿಂಗರಾಜ್ಯವಿತ್ತು. ಗೋದಾ–ಕೃಷ್ಣಾ ಪಟ್ಟೆಯಲ್ಲಿ ಆಂಧ್ರವು ಬಹು ಪ್ರಾಚೀನ ಕಾಲದಿಂದಲೂ ಇದ್ದಿರಬೇಕು. ಏಕೆಂದರೆ, ಅದರ ಉಲ್ಲೇಖವು ಐತರೇಯ ಬ್ರಾಹ್ಮಣದಲ್ಲಿಯ ಒಂದು ದಂತಕಥೆಯಲ್ಲಿ ಕಂಡು ಬರುತ್ತದೆ; ಈ ಐತರೇಯ ಬ್ರಾಹ್ಮಣದ ಕಾಲವು ಸುಮಾರು ಕ್ರಿ. ಪೂ. ೮೦೦ ವರುಷವೆಂದು ತಿಳಿಯಲಾಗಿದೆ.

**ಚಂದ್ರಗುಪ್ತನ ಕಾಲದಲ್ಲಿ :** ಕ್ರಿ. ಪೂ. ನಾಲ್ಕನೆಯ ಶತಕದ ಅಂತ್ಯದಲ್ಲಿ ಆಂಧ್ರರ ರಾಜ್ಯವು ಬಹು ಪ್ರಬಲವಾಗಿದ್ದು ಅಲ್ಲಿ ಒಂದು ಲಕ್ಷ ಕಾಲಾಳುಗಳೂ ಎರಡು ಸಾವಿರ ಕುದುರೆಗಳೂ ಒಂದು ಸಾವಿರ ಆನೆಗಳೂ ಇದ್ದವೆಂದೂ ಪ್ಲೀನೀ ಎಂಬ ರೋಮನ್ ಇತಿಹಾಸಕಾರನು ಹೇಳಿದ್ದಾನೆ. ಈ ಮಾಹಿತಿ ಅವನಿಗೆ ಮೆಗಸ್ಥನೀಸನಿಂದ ದೊರೆತಿರಬೇಕು. ಅಶೋಕನ ಕಾಲದಲ್ಲಿ ಆಂಧ್ರ ರಾಜ್ಯವು ಬಹುಶಃ ಅವನ ಸಾಮ್ರಾಜ್ಯದಲ್ಲಿ ಎಣಿಸಲ್ಪಟ್ಟಿರಬಹುದು. ಆದರೆ ಅವನು ತೀರಿದಬಳಿಕ ಶಾತವಾಹನ ಮನೆತನದ ಸೀಮೂಕ ರಾಜನು ಮೌರ್ಯರ ಸಾಮ್ರಾಜ್ಯ ಸತ್ತೆಯನ್ನು ಹಾರಿಸಿ ಆಂಧ್ರರ ಸ್ವಾತಂತ್ರ್ಯವನ್ನು ಸಾರಿದನು. ಶಾತವಾಹನರಿಗೆ ಶಾಲಿವಾಹನ ಅಥವಾ ಶಾತಕರ್ಣಿ ಎಂದೂ ಅನ್ನುತ್ತಾರೆ. ಶಾತವಾಹನ ಅಥವಾ ಶಾಲಿವಾಹನ ಎಂದು ಒಬ್ಬ ರಾಜನ ಹೆಸರಾಗಿರದೆ ಒಂದು ಮನೆತನದ ಹೆಸರು. ಈ ಮನೆತನದಲ್ಲಿ ಎಷ್ಟೋ ವ್ಯಕ್ತಿಗಳಾದರು. ಶಾತವಾಹನರ ನೆಲೆವೀಡು ಮೊದಲು ಕೃಷ್ಣೆಯ ಮುಖದ ಬಳಿ ಧನಕಟಕ ಎಂಬಲ್ಲಿತ್ತು. ಆದರೆ ಮುಂದೆ ಪಶ್ಚಿಮದಲ್ಲಿ ನಾಶಿಕದವರೆಗೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ ಮೇಲೆ-ಗೋದಾವರೀ ತೀರದ ಪ್ರತಿಷ್ಠಾನ ಅಥವಾ ಪೈಠಣ ಎಂಬುದು ಅವರ ರಾಜಧಾನಿಯಾಯಿತು.

**ಪುಲುಮಾಯಿ ಶಾಲಿವಾಹನ :** ಶಾತವಾಹನರ ಆಳಿಕೆಯಲ್ಲಿ ಆಂಧ್ರರ ಸತ್ತೆ ಒಂದೇಸವನೆ ಬೆಳೆಯಿತು. ಆಗ ಅವರು ಉತ್ತರದ ಕಡೆ ಕಣ್ಣಿಟ್ಟರು. ಕ್ರಿ. ಪೂ. ೨೭ರಲ್ಲಿ ಕಣ್ವಮನೆತನದ ಕೊನೆಯ ರಾಜನಾದ ಸುಶರ್ಮನನ್ನು ಪದಚ್ಯುತಗೊಳಿಸಿ ಮಗಧರಾಜ್ಯವನ್ನು ಹಿಡಿದುಕೊಂಡರು. ಅಲ್ಲಿ ಅವರ ಆಳಿಕೆ ಮುಂದೆ

ಸುಮಾರು ೩೦೦ ವರುಷ ಇತ್ತು. ಸಾಮ್ರಾಜ್ಯಸತ್ತೆ ಆಂಧ್ರರ ಕೈಗೆ ಬಂದಮೇಲೆ ಅವರು ಪರಕೀಯರ ದಾಳಿಗಳನ್ನು ತಡೆಯುವ ಕಠಿಣಕಾರ್ಯವನ್ನು ಮಾಡಬೇಕಾಯಿತು ! ಶಕರ ಪ್ರಭುತ್ವವು ಹಿಂದುಸ್ತಾನದ ಪಶ್ಚಿಮೋತ್ತರ ಭಾಗದಲ್ಲಿ ಬೆಳೆಯುತ್ತಿತ್ತು. ಪಂಜಾಬ, ರಾಜಪುತನ, ಮಾಳವ, ಕಾಠೇವಾಡ ಮತ್ತು ಗುಜರಾಥಗಳನ್ನು ಅವರು ಆಕ್ರಮಿಸಿ ನರ್ಮದೆಯನ್ನು ದಾಟಿದರು; ಆಂಧ್ರರ ಅಧೀನದಲ್ಲಿದ್ದ ನಾಶಿಕ ಪಟ್ಟಣವನ್ನು ವಶಪಡಿಸಿಕೊಂಡರು. ಶಕರ ಪುಂಡಾಟಿಕೆಯಿಂದ ದೇಶ ಹಾಳಾಯಿತು, ಧರ್ಮಬಂಧನಗಳು ಕಡಿದುಹೋದವು, ಎಲ್ಲೆಡೆಗೂ ಅವ್ಯವಸ್ಥೆಯುಂಟಾಯಿತು. ಸುದೈವದಿಂದ ಈ ಕಾಲದಲ್ಲಿ ಶಾತವಾಹನ ಮನೆತನದಲ್ಲಿ ಗೌತಮಿಪುತ್ರ ಶಾಲಿವಾಹನನೆಂಬ ಪರಾಕ್ರಮಿಯು ಹುಟ್ಟಿದನು. ಅವನು ಕ್ರಿ. ವ. ೧೦೬ ರಲ್ಲಿ ಪಟ್ಟವೇರಿದನು. ಅವನು ಶಕರನ್ನು ಸೋಲಿಸಿ ನರ್ಮದೆಯಾಚೆಗೆ ಅಟ್ಟಿದುದಲ್ಲದೆ, ಅವರ ಪ್ರಾಂತಗಳಾದ ಕಾಠೆವಾಡ ಮಾಳವ ರಾಜಪುತಾನಗಳಲ್ಲಿ ನುಗ್ಗಿ ಅವರನ್ನು ಬೆನ್ನಟ್ಟಿದನು. ಶಕರ ಈ ಪರಾಭವದಿಂದ ಪುನಃ ಸ್ಥೈರ್ಯಶಾಂತಿಗಳುಂಟಾದುದನ್ನು ಕಂಡು ಶಾಲಿವಾಹನನ ತಾಯಿ ಗೌತಮಿಗೆ ಪರಮಾನಂದವಾಯಿತೆಂದು ಕಾರ್ಲೆಯ ಒಂದು ಕೊರೆದ ಗವಿಯಲ್ಲಿರುವ ಶಿಲಾಲೇಖದಿಂದ ತಿಳಿಯುತ್ತದೆ. ಗೌತಮೀಪುತ್ರ ಶಾಲಿವಾಹನನು ೨೫ ವರುಷ ಆಳಿದ ಬಳಿಕ ಕ್ರಿ. ವ. ೧೩೦ ರಲ್ಲಿ ಅವನ ಮಗನು ದೊರೆಯಾದನು. ಅವನೇ ಪ್ರಸಿದ್ಧ ಶಕಪುರುಷನಾದ ಪುಲುಮಾಯಿ ಶಾಲಿವಾಹನನು. ೧೫೮ ರಲ್ಲಿ ಆಳಿದನು. ಅವನ ಕಾಲದಲ್ಲಿ ಶಕರೊಡನೆ ಆಂಧ್ರರ ಅನೇಕ ಯುದ್ಧಗಳಾದವು.

**ಆಂಧ್ರರ ಕಾರ್ಯ** : ಶಕರ ಪರಾಭವದ ಅನಂತರ ನರ್ಮದೆಯ ದಕ್ಷಿಣದಲ್ಲಿ ಪೂರ್ವ ಸಮುದ್ರದಿಂದ ಪಶ್ಚಿಮ ಸಮುದ್ರದ ವರೆಗೂ ಶಾಲಿವಾಹನರ ರಾಜ್ಯ ಪಸರಿಸಿತು. ಅವನ ಕಾಲದಲ್ಲಿ ಬೌದ್ಧ ಮತ್ತು ಹಿಂದೂ ಎರಡೂ ಧರ್ಮಗಳ ಪ್ರಸಾರ ನಡೆದಿತ್ತು. ಬೌದ್ಧರು ಕಾರ್ಲೆ, ಅಜಂತೆ, ವೇರೂಳ, ಪಾಂಡವ ಇತ್ಯಾದಿ ಸ್ಥಳಗಳಲ್ಲಿ ಗುಡ್ಡಗಳಲ್ಲಿ ದೊಡ್ಡ ದೊಡ್ಡ ವಿಹಾರಗಳನ್ನು, ಸ್ತೂಪಗಳನ್ನು ಕೊರೆದರು. ಆಂಧ್ರರು ವಿದ್ವಾಂಸರಿಗೆ ಆಶ್ರಯವಿತ್ತರು. ಹಿಂದುಸ್ತಾನದ ಇತಿಹಾಸದಲ್ಲಿ ಆಂಧ್ರರ ಕಾರ್ಯ ಅತಿ ಮಹತ್ತ್ವದ್ದು. ಶಕರಂತಹ ಪರಕೀಯ ಸತ್ತಾಧೀಶರ ದಾಳಿಗಳನ್ನು ತಡೆಗಟ್ಟಿದ ಮುಖ್ಯ ಶ್ರೇಯಸ್ಸು ಆಂಧ್ರರಾಜರಿಗೇ ಸಲ್ಲಬೇಕು. ಆಂಧ್ರರು ಆಂಧ್ರಭೃತ್ಯರೆಂದೂ ಪರಿಚಿತರಾಗಿದ್ದಾರೆ. ಆಂಧ್ರರ ಇತಿಹಾಸದ ಬಹ್ವಂಶವು ಇನ್ನೂ ಅಜ್ಞಾತವಾಗಿರುವುದರಿಂದ ಅವರ ಸಂಬಂಧದ ವಿಷಯಗಳು ಅನಿಶ್ಚಿತವಾಗಿವೆ.

## ಶಕರಾಜ - ರುದ್ರದಾಮನ್

**ಆಂಧ್ರರೊಡನೆ ಯುದ್ಧ** : ಮಾಳವಾ ಪ್ರಾಂತದ ಉಜ್ಜಯಿನಿಯ ಶಕರಾಜನಾದ ರುದ್ರದಾಮನ್ ಎಂಬವನು ಎಲ್ಲೆಡೆಯ ಶಕರನ್ನು ಒಂದು ಗೂಡಿಸಿ ಆಂಧ್ರರನ್ನು

ಹಿಂದಕ್ಕಟ್ಟಿ ನರ್ಮದೆಯನ್ನು ದಾಟಿಸಿದನು. ರುದ್ರದಾಮನ್ನನು ತನ್ನ ಮಗಳಾದ ದಕ್ಷ ಮಿತ್ರೆಯನ್ನು ಪುಲುಮಾಯಿಗೆ ಕೊಟ್ಟಿದ್ದನು. ಆದರೆ ಈ ನಂಟಿನಿಂದ ಆಂಧ್ರ-ಶಕರ ಲ್ಲುಂಟಾಗಿದ್ದ ಸಖ್ಯವೇನೂ ಹೆಚ್ಚು ದಿನ ಬಾಳಲಿಲ್ಲ. ರುದ್ರದಾಮನನು ದಕ್ಷಿಣಕ್ಕೆ ದಂಡೆತ್ತಿ ಬಂದನು. ಶಾಲಿವಾಹನನು ಅವನ ಬೇಳೆ ಬೇಯಗೊಡಲಿಲ್ಲ. ರುದ್ರದಾಮ ನನು ಕೈಬೀಸುತ್ತ ತಿರುಗಿ ಹೋಗಬೇಕಾಯಿತು. ಆದರೆ ರುದ್ರದಾಮನ್ ಪರಾ ಕ್ರಮಿಯಾದುದರಿಂದ ಅವನ ಉಚ್ಚಾಟನೆ ಶಾಲಿವಾಹನನಿಗೆ ಸಾಧ್ಯವಾಗಲಿಲ್ಲ. ಆಂಧ್ರ-ಶಕರ ಈ ಜಗಳಗಳಿಗೂ ಅನಂತರದ ಕಾಲದ ಮರಾಠಾ-ಮುಸಲ್ಮಾನರ ಜಗಳ ಗಳಿಗೂ ಅನೇಕ ದೃಷ್ಟಿಗಳಿಂದ ಸಾಮ್ಯ ಕಂಡುಬರುತ್ತದೆ.

**ಸುದರ್ಶನ ಸರೋವರವನ್ನು ಮರಳಿ ಕಟ್ಟಿದ್ದು :** ಅಶೋಕ ಮೌರ್ಯನ ಕಾಲ ದಲ್ಲಿ ಕಟ್ಟಿದ ಸುದರ್ಶನ ಸರೋವರವು ಕೆಟ್ಟು ಹಾಳಾಗಿತ್ತು. ಆ ಕೆಲಸಕ್ಕೆ ವಿಶೇಷ ಗಮನಕೊಟ್ಟು ರುದ್ರದಾಮನನು ಅದನ್ನು ಪುನಃ ಕಟ್ಟಿಸಿದನೆಂದು ಜುನಾಗಡದ ಶಿಲಾಲೇಖವೊಂದರಲ್ಲಿ ಹೇಳಿದೆ. (ಕ್ರಿ. ವ. ೧೫೧-೫೨) ಆ ಭಾಗದ ಒಕ್ಕಲು ತನವು ಈ ಸರೋವರವನ್ನು ಅವಲಂಬಿಸಿತ್ತು. ಅದನ್ನು ಸರಿಪಡಿಸಿದ್ದರಿಂದ ಒಕ್ಕಲಿಗ ರಿಗೆ ಬಹು ಸಂತೋಷವಾಯಿತು.

**ಲೇಖಕ, ಕವಿ, ಗಾಯಕ :** ರುದ್ರದಾಮನನು ತನ್ನ ಪ್ರಜೆಗಳನ್ನು ರೋಗರುಜಿಗಳಿಂದಲೂ ಕಳ್ಳರು-ಕಾಕರಿಂದಲೂ ಸಂರಕ್ಷಿಸಿದನು. ಅವನಿಗೆ ಸಂಸ್ಕೃತ ಭಾಷೆಯಲ್ಲಿ ವಿಶೇಷ ಆಸಕ್ತಿಯಿತ್ತು. ವ್ಯಾಕರಣ, ತರ್ಕಶಾಸ್ತ್ರ, ಸಂಗೀತಗಳಲ್ಲಿ ಅವನು ಪ್ರವೀಣನು; ಸಂಸ್ಕೃತದಲ್ಲಿ ಗದ್ಯ ಪದ್ಯಗಳನ್ನು ಬರೆಯುತ್ತಿದ್ದನು. ಅವನ ನಗರ ಉಜ್ಜಯನಿ ಭಾರತದ ಮಹತ್ತ್ವದ ಅಭ್ಯಾಸ ಕೇಂದ್ರವೆಂದು ಪ್ರಸಿದ್ಧವಿತ್ತು.

## ತತ್ಕಾಲೀನ ಪ್ರಗತಿ

**ಧಾರ್ಮಿಕ ಸ್ಥಿತಿ :** ಕಾಲದ ಅನಿಶ್ಚಿತತೆಯೊಳಗಿಂದ ಮತ್ತು ರಾಜರ ನಾಮಾವ್ಳಿ ಯೊಳಗಿಂದ ಹೇಗೆಹೇಗೋ ದಾರಿ ಸಾಗಿದ ಮೇಲೆ, ಆಗಿನ ಧಾರ್ಮಿಕ ಸ್ಥಿತ್ಯಂತರದ ಕಡೆ ಹೊರಳುವದು ಅಗತ್ಯ. ಪರಕೀಯರ ದಾಳಿಗಳಿಂದ ಸಾಂಸ್ಕೃತಿಕ ದೃಷ್ಟಿಯಿಂದ ವಿಶೇಷ ಪರಿಣಾಮವೇನಾಗಲಿಲ್ಲ. ಹೊರಗಿಂದ ಬಂದು ಇಲ್ಲಿ ನೆಲೆಯೂರಿದ ಶಕ; ಕುಶಾಣ ಮೊದಲಾದವರು ಹಿಂದು ಇಲ್ಲವೆ ಬೌದ್ಧಧರ್ಮವನ್ನು ಸ್ವೀಕರಿಸಿ, ಇಲ್ಲಿಯ ಸಮಾಜ ದಲ್ಲಿ ವಿಲೀನರಾದರು. ಇದು ಏತದ್ದೇಶಿಯ ಸಂಸ್ಕೃತಿಯ ದೊಡ್ಡ ವಿಜಯವೇ ಸರಿ. ಕನಿಷ್ಕನಂತಹ ಕುಶಾಣರಾಜರು ಬೌದ್ಧಧರ್ಮದ ಪ್ರಸಾರಕ್ಕೆ ನೆರವಾದನು. ಶುಂಗ ಮತ್ತು ಕಣ್ವರಾಜರು ಹಿಂದುಧರ್ಮದ ಪುನರುಜ್ಜೀವನಕ್ಕೆ ಶ್ರಮಿಸಿದರು. ಬೌದ್ಧ ಧರ್ಮದ ಸಹವಾಸದಿಂದ ಹಿಂದುಧರ್ಮದಲ್ಲಿ ಮಹತ್ತ್ವದ ಮಾರ್ಪಾಟುಗಳಾದವು. ಹಳೆಯ ಕರ್ಮಠತನವೂ ಯಜ್ಞಯಾಗಗಳೂ ಮುಗ್ಗಿದವು. ಬೌದ್ಧರ ವಿಹಾರಗಳನ್ನು

ನೋಡಿ ಹಿಂದುಗಳು ಗುಡಿಗಳನ್ನು ಕಟ್ಟತೊಡಗಿದರು. ಅವುಗಳಲ್ಲಿ ವಿಶ್ವದ ಉತ್ಪಾದಕ, ರಕ್ಷಕ, ಸಂಹಾರಕ ದೇವತೆಗಳಾದ ಬ್ರಹ್ಮ, ವಿಷ್ಣು ಮಹೇಶ್ವರರ ಪೂಜೆ ಆರಂಭವಾಯಿತು. ಮೂಲ ಬೌದ್ಧಧರ್ಮದಲ್ಲಿ ಮೂರ್ತಿಪೂಜೆಯಿಲ್ಲ. ಆನರೆ ಕನಿಷ್ಕನ ಕಾಲದ ಮಹಾಯಾನ ಪಂಥದ ಬೌದ್ಧ ವಿಹಾರಗಳಲ್ಲಿ ಬುದ್ಧಮೂರ್ತಿಗಳಿರುತ್ತಿದ್ದವು. ಇದರಿಂದ ಮೂರ್ತಿಪೂಜೆ ಅಸ್ತಿತ್ವದಲ್ಲಿ ಬಂದು ಹಿಂದೂ ಧರ್ಮದಲ್ಲಿಯೂ ಅದರ ಪ್ರವೇಶವಾಯಿತು. ಬುದ್ಧ ಪೂರ್ವಕಾಲದಲ್ಲಿ ಆರ್ಯಧರ್ಮದಲ್ಲಿ ಮೂರ್ತಿಪೂಜೆಯಿದ್ದಿಲ್ಲ. ಒಟ್ಟಾರೆ, ಅಶೋಕನ ತರುವಾಯದ ಕಾಲದಲ್ಲಿ ಬೌದ್ಧ ಮತ್ತು ಹಿಂದು ಧರ್ಮಗಳು ತಮ್ಮ ತಮ್ಮ ಪರಿಯಲ್ಲಿ ಪ್ರಸಾರಹೊಂದುತ್ತಿದ್ದವು. ರಾಜ್ಯಕರ್ತರ ಕಾಲಕ್ಕೆ ತಕ್ಕಂತೆ ಒಮ್ಮೆ ಒಂದು ಧರ್ಮಕ್ಕೆ ಇನ್ನೊಮ್ಮೆ ಇನ್ನೊಂದು ಧರ್ಮಕ್ಕೆ ಬಲ ಬರುತ್ತಿತ್ತು. ಆದರೆ ಇವೆರಡರಲ್ಲಿ ಜಗಳವಿರಲಿಲ್ಲ.

**ಮನುಸ್ಮೃತಿ :** ಪ್ರಸಿದ್ಧ 'ಮನುಸ್ಮೃತಿ' ಎಂಬ ಗ್ರಂಥ ಹುಟ್ಟಿದ ಕಾಲ ಇದೇ. ಈ ಗ್ರಂಥ ಮೂಲದಲ್ಲಿ ಭೃಗುಋಷಿ ಬರೆದದ್ದು. ಮುಂದೆ ಅದರಲ್ಲಿ ಎಷ್ಟೋ ಸೇರ್ಪಡೆಗಳಾದವೆಂದು ತೋರುತ್ತದೆ. ಕ್ರಿ. ವ. ೨ನೆಯ ಶತಕದಲ್ಲಿ ಅದಕ್ಕೆ ಇಂದಿನ ಸ್ವರೂಪ ಬಂದಿತೆಂದು ವೇಬರನ ಅಭಿಪ್ರಾಯವಿದೆ. ಮನುಸ್ಮೃತಿಯ ಮೂಲಸ್ವರೂಪವನ್ನು ತಿಳಿಯುವುದು ಕಠಿಣ. ಭೌದ್ಧಧರ್ಮದ ಪ್ರಸಾರದಮೂಲಕ ವರ್ಣಗಳ ಉಚ್ಚನೀಚಭಾವವೂ ರಕ್ತದ ಶುದ್ಧಾಶುದ್ಧತೆಯ ಮಹತ್ವವೂ ಇಲ್ಲವಾದವು. ಅವುಗಳ ಪುನರುಜ್ಜೀವನವಾಗಬೇಕೆಂದು ಮನುಸ್ಮೃತಿಯು ಪ್ರಯತ್ನವಿದ್ದಂತೆ ತೋರುತ್ತದೆ. ಮನಸ್ಮೃತಿಯಲ್ಲಿ ಕಾಣುವ ಹಿಂದೂ ಧರ್ಮದ ಸ್ವರೂಪವು ಪ್ರಾಗತಿಕವಾಗಿಲ್ಲ. ಕೆಲವೊಮ್ಮೆ ಸಮಾಜವು ಪ್ರಗಮನಶೀಲವಾಗಿದ್ದರೆ, ಕೆಲವೊಮ್ಮೆ ಹೊರಗಿನ ಆಪತ್ತನ್ನು ಎದುರಿಸಿ ತಮ್ಮ ತಮ್ಮ ಕಲ್ಪನೆಯಂತೆ ಅದರ ಶುದ್ಧ ಸ್ವರೂಪವನ್ನು ಕಾಯ್ದುಕೊಳ್ಳುವದಕ್ಕಾಗಿ ಕಡುತರವಾದ ನಿರ್ಬಂಧಗಳನ್ನು ಹಾಕಬೇಕಾಗುತ್ತದೆ. ಮನುಸ್ಮೃತಿ ನಿರ್ಮಾಣವಾದುದು ಇಂತಹ ಸಂರಕ್ಷಕ ಕಾಲದಲ್ಲಿ. ಆ ಕಾಲದ ಕಲ್ಪನೆಯ ಮೇರೆಗೆ ಸಮಾಜದಲ್ಲಿಯ ಬೇರೆ ಬೇರೆ ವರ್ಗಗಳ ಕರ್ತವ್ಯಗಳನ್ನು ಈ ಗ್ರಂಥದಲ್ಲಿ ವಿವರಿಸಿದೆ. ವರ್ಣಾಶ್ರಮಗಳ ಮಹತ್ವವನ್ನು ವರ್ಣಿಸಲಾಗಿದೆ. ಬೌದ್ಧಧರ್ಮದ ಅವನತಿ ಆರಂಭವಾಗಿ ಹಿಂದೂ ಧರ್ಮವು ಮರಳಿ ತಲೆಯೆತ್ತುತ್ತಿರುವಾಗ ಮನುಸ್ಮೃತಿಗೆ ವಿಶೇಷ ಮಹತ್ವ ಬಂದಿತು; ಅದು ಹಿಂದುಗಳ ಪ್ರಮಾಣ ಗ್ರಂಥವೇ ಆಯಿತು. ಮನುಸ್ಮೃತಿ ವರ್ಣಸಂಕರದ ವಿರುದ್ಧ ಮತ್ತು ವರ್ಣಾಶ್ರಮಧರ್ಮದ ಪುನರುಜ್ಜೀವನಕ್ಕಾಗಿ ಆದ ಪ್ರತಿಕ್ರಿಯೆಯಾಗಿದೆ. ಅದರಲ್ಲಿ ಹೇಳಿದ ಬಂಧನಗಳು ಸರ್ವಕಾಲಕ್ಕೂ ಅನ್ವಯಿಸುವಂತಿರುವುದು ಶಕ್ಯವಿಲ್ಲ.

**ಶಾಸ್ತ್ರದ ಪ್ರಗತಿ :** ಪರಾಶರ ಮತ್ತು ಗರ್ಗ ಋಷಿಗಳು ಬರೆದ ಜ್ಯೋತಿಷ ಶಾಸ್ತ್ರದ ಉತ್ತಮ ಗ್ರಂಥಗಳಿಂದ, ತತ್ಕಾಲೀನ ಗ್ರೀಕರು ಆ ಶಾಸ್ತ್ರದಲ್ಲಿ ಮಾಡಿದ

ಪ್ರಗತಿ ಅವರಿಗೆ ಪೂರ್ಣವಾಗಿ ಪರಿಚಿತವಾಗಿತ್ತೆಂದು ತೋರುತ್ತದೆ. ಪಾಣಿನಿಯ ಅಷ್ಟಾಧ್ಯಾಯಿಗೆ ವಾರ್ತಿಕವನ್ನು ಬರೆದ ಕಾತ್ಯಾಯನನೂ ಕಾತ್ಯಾಯನನ ಸೂತ್ರಗಳಿಗೆ ಸ್ಪಷ್ಟೀಕರಣ ಬರೆದ ಪತಂಜಲಿಯೂ ಅನುಕ್ರಮವಾಗಿ ಕ್ರಿ. ಪೂ. ನಾಲ್ಕನೆಯ ಮತ್ತು ಎಡನೆಯ ಶತಕದವರು.*

## ಪರದೇಶಗಳೊಡನೆ ವ್ಯಾಪಾರ

ಚಂದ್ರಗುಪ್ತನ ಕಾಲದಲ್ಲಿಯೂ ತರುವಾಯವೂ ಭಾರತದ ವ್ಯಾಪಾರವು ಉನ್ನತಿ ಹೊಂದಿ, ಇರಾಣ, ಅರಬಸ್ತಾನ ಏಶಿಯಾಮೈನರ್, ರೋಮನ್ ಸಾಮ್ರಾಜ್ಯ ಮತ್ತು ಚೀನ ಮೊದಲಾದ ದೇಶಗಳೊಡನೆ ಹಿಂದುಸ್ತಾನದ ವರ್ತಕರ ವ್ಯವಹಾರ ವಿತ್ತು. ಮಲಮಲ ಬಟ್ಟೆ, ರೇಶಿಮೆ, ಮಸಾಲೆಯ ಸಾಮಾನು, ಹಸ್ತಿದಂತ ಮೊದಲಾದ ವಸ್ತುಗಳು ಏತದ್ದೇಶೀಯ ಹಡಗುಗಳಲ್ಲಿ ರೋಮನ್ ಸಾಮ್ರಾಜದ ಕಡೆ ಹೋಗುತ್ತಿದ್ದವು. ಒಟ್ಟಾರೆ ಚಂದ್ರಗುಪ್ತ, ಅಶೋಕ, ಕನಿಷ್ಕ, ಶಾಲಿವಾಹನರಂತಹ ಪರಾಕ್ರಮಿಗಳು ಸಾಮ್ರಾಜ್ಯವನ್ನು ಸ್ಥಾಪಿಸಿದ ದೇಶದ ಏಳಿಗೆ ಸಾಧಿಸಿದರು; ಬೇರೆ ಬೇರೆ ಧಾರ್ಮಿಕ ಹಾಗೂ ಭೌತಿಕ ಸುಧಾರಣೆ ಮಾಡಿದರು; ಶಿಲ್ಪಕಲೆಗೆ ಉತ್ತೇಜನವಿತ್ತರು; ದಿವ್ಯ ಸುಂದರ ಕಟ್ಟಡಗಳನ್ನು ಕಟ್ಟಿಸಿದರು. ಇವೆಲ್ಲವುಗಳಿಂದ ಪರಕೀಯರು ಹಿಂದುಸ್ತಾನಕ್ಕೆ ಇಟ್ಟ 'ಸ್ವರ್ಣಭೂಮಿ' ಎಂಬ ಹೆಸರು ಶೋಭಿಸುವಂತಾಯಿತು.

### ಪ್ರಶ್ನೆಗಳು

೧. ಚರ್ಚಿಸಿರಿ: "ಶಕರಂತಹ ಪರಕೀಯ ಸತ್ತಾಧೀಶರ ದಾಳಿಗಳನ್ನು ತಡೆಹಿಡಿದ ಮುಖ್ಯ ಶ್ರೇಯಸ್ಸು ಆಂಧ್ರರಾಜರಿಗೆ ಸಲ್ಲುತ್ತದೆ."

೨. ಟಿಪ್ಪಣೆ ಬರೆಯಿರಿ: (೧) ಗಾಂಧಾರ ಚಿತ್ರಕಲೆ; (೨) ಪುಲುಮಾಯಿ ಶಾಲಿವಾಹನ; (೩) ಪುಷ್ಯಮಿತ್ರ

೩. ಕಾರ್ಯಗಳನ್ನು ಹೇಳಿರಿ: (೧) ಸಮ್ರಾಟ್ ಕನಿಷ್ಕ; (೨) ಮಿಲಿಂದ (೩) ಶಕರುದ್ರದಾಮನ್.

---

* ಪಾಣಿನಿ, ಕಾತ್ಯಾಯನ ಮತ್ತು ಪತಂಜಲಿ ಇವರ ಗ್ರಂಥಗಳಿಂದ 'ಸಿದ್ಧಾಂತ ಕೌಮುದಿ' ಯೆಂಬ ಸಂಸ್ಕೃತ ವ್ಯಾಕರಣಗ್ರಂಥವನ್ನು ಭಟ್ಟೋಜಿ ದೀಕ್ಷಿತನು ಕ್ರಿ. ಶ. ೧೬೩೦ ರ ಸುಮಾರಿಗೆ ರಚಿಸಿದನು.

# ಕಾಲಪಟ ೩

( ಕ್ರಿ. ಪೂ. ೩೫೦ ರಿಂದ ಕ್ರಿ. ವ. ೨೫೦ )

[ಪ್ರಮಾಣ ೧ ಇಂಚು = ೧೦೦ ವರುಷ]

೩೫೦ ಮೌರ್ಯರಾಜ್ಯ ಸ್ಥಾಪನೆ (ಕ್ರಿ. ಪೂ. ೩೨೧)
ಅಶೋಕನ ರಾಜ್ಯ- ಕ್ರಿ. ಪೂ. ೨೭೩–೨೩೨

ಚೀನದ ಗೋಡೆ ಕಟ್ಟಿದ ಕೀ–ವಾಂಗ್–ಟಿ (ಕ್ರಿ. ಪೂ. ೨೪೬)

೨೫೦

ಹೆಲಿಯೋಡೋರಸನ ವಿಷ್ಣುಭಕ್ತಿ (ಕ್ರಿ. ಪೂ. ೧೫೫)

೧೫೦ ಶುಂಗ ಮನೆತನದ ಪರಾಭವ.

ಸಯಾಮದಲ್ಲಿ ಹಿಂದುರಾಜ್ಯಸ್ಥಾಪನೆ (ಕ್ರಿ. ಪೂ. ೯೫)

ವಿಕ್ರಮ ಸಂವತ್ (ಕ್ರಿ. ಪೂ. ೫೭)

೫೦

ಕ್ರಿಸ್ತ ಜನ್ಮ [ಕ್ರಿ. ವ. ೪೭]

ಕ್ರಿ. ವ. ಆರಂಭ

೫೦

ರೋಮನ್ ರಾಜಪ್ರಭುತ್ವದ ಉತ್ಕರ್ಷ (ಕ್ರಿ. ವ. ೧೧೭)

ಶಾಲಿವಾಹನ ಶಕ (ಕ್ರಿ. ವ. ೭೮)
ಕನಿಷ್ಕನರಾಜ್ಯ(ಕ್ರಿ.ವ.೧೨೦-೧೬೨)
ಶಕರುದ್ರದಾಮನ್

೧೫೦ ಪುಲುಮಾಯಿ ಶಾಲಿವಾಹನ (ಕಿ. ವ. ೧೩೦–೧೫೮)
ಮನುಸ್ಮೃತಿಗೆ ಇಂದಿನ ಸ್ವರೂಪ.

ಚೀನದಲ್ಲಿ ಪಡಿಯಚ್ಚಿನಿಂದ ಮುದ್ರಿಸುತ್ತಿದ್ದ ಸಂಗತಿ (ಕ್ರಿ. ವ. ೧೭೫)

೨೫೦

# ಅಭ್ಯಾಸ ಮತ್ತು ಚಿಂತನ

**ಅಭ್ಯಾಸ :**

೧. ರಾಜ ಮತ್ತು ಸಾಮ್ರಾಟ್ ಇವರಲ್ಲಿ ಭೇದವೇನು ? ಅವರು ರಾಜ್ಯಾಭಿಷೇಕ ಏಕೆ ಮಾಡಿಕೊಳ್ಳುತ್ತಿದ್ದರು ? ಆದರ ಕೆಲಸಗಳು ಯಾವವು ?

೨. ವಾಯುವ್ಯಗಡಿಪ್ರದೇಶದ ನಕಾಶವನ್ನು ಚೆನ್ನಾಗಿ ನೋಡಿರಿ; ಅಲ್ಲಿ ಬಾರೋಯಾ ಮತ್ತು ಪಾರ್ಥಿಯಾ ಪ್ರದೇಶಗಳನ್ನು ಕಂಡುಹಿಡಿಯಿರಿ.

೩. ಅಶೋಕನು ತನ್ನ ಆತ್ಮಚರಿತ್ರೆಯನ್ನು ಬರೆದಿದ್ದರೆ, ಅವನು ತಪ್ಪದೇ ಬರೆಯುತ್ತಿದ್ದ ಒಂದು ಪ್ರಸಂಗವನ್ನು ನೀವೇ ಅಶೋಕನಾಗಿ ಬರೆಯಿರಿ.

೪. ರವಿವಾರ ಬಿಡುವು, ಕ್ರಿಸ್‌ಮಸ್ ಮತ್ತು ಈಸ್ಟರ್ ಇವುಗಳ ಬಗೆಗೆ ಪರಿಚಯ ಮಾಡಿಕೊಡಿರಿ.

**ಚಿಂತನ :**

## ೧ ಪ್ರಾಚೀನ ಕಾಲದಲ್ಲಿ ರಾಜರ ಕರ್ತವ್ಯಗಳು

[ಪಟ್ಟವೇರುವಾಗ ಪ್ರತಿಯೊಬ್ಬ ರಾಜನೂ ಪ್ರತಿಜ್ಞೆಮಾಡುವ ಪದ್ಧತಿಯಿತ್ತು. ಮಹಾಭಾರತದ ಶಾಂತಿಪರ್ವದಲ್ಲಿ (ಅಧ್ಯಾಯ ೫೯, ಶ್ಲೋಕ ೧೦೩-೧೦೭) ಪೃಥುರಾಜನು ಮಾಡಿದ ಪ್ರತಿಜ್ಞೆಯ ಬಗ್ಗೆ ಉಲ್ಲೇಖವಿದೆ.]

**ಪೃಥುವಿಗೆ ಹೇಳಿದ್ದೇನಂದರೆ :**

"ಪ್ರಿಯ ಅಪ್ರಿಯ ಭಾವನೆಗಳನ್ನೂ ವ್ಯಕ್ತಿಗತ ಮನೋವಿಕಾರಗಳನ್ನೂ ತೊರೆಯಬೇಕು; ಎಲ್ಲ ಪ್ರಾಣಿಮಾತ್ರರಲ್ಲಿ ಸಮಬುದ್ಧಿಯಿಂದ ವರ್ತಿಸಬೇಕು. ಕಾಮ, ಕ್ರೋಧ, ಲೋಭ, ಮೋಹ ಇವುಗಳನ್ನು ತಳ್ಳಿ, ಪ್ರಜಾರಕ್ಷಣೆ ಮಾಡುವುದು ನಿನ್ನ ಕರ್ತವ್ಯ. ನೀನು 'ತನುಮನೋವಾಕ್ಕುಗಳಿಂದ ಈ ಪೃಥ್ವಿಯ ಬಹ್ಮನೆ'ಂದು ಭಾವಿಸಿ ಅದನ್ನು ಸತತವಾಗಿ ಪಾಲಿಸುವೆನೆಂದು ಪ್ರತಿಜ್ಞೆಮಾಡು. ದಂಡನೀತಿಯ ಆಧಾರದಿಂದ ನಿಃಶಂಕಮನಸ್ಸಿನಿಂದ ನಿತ್ಯವೂ ಧರ್ಮವನ್ನು ಪಾಲಿಸುವ ಶಪಥವನ್ನು ಮಾಡು."

(೨) ಈ ರಾಜ್ಯದಲ್ಲಿ ಹಸಿವು, ಬೇನೆ, ಅತಿಚಳಿ, ಅತಿಬೇಸಿಗೆ ಇವುಗಳಿಂದ ಯಾವ ಪ್ರಜೆಯೂ ಸಾಯಬಾರದು.

—ಆಪಸ್ತಂಭ ಧರ್ಮಸೂತ್ರ.

## ೨. ಇನ್ನೊಂದು ಪಂಥವನ್ನು ಹಳಿಯಬೇಡ

[ಗಿರನಾರದಲ್ಲಿಯ ಹನ್ನೆರಡನೆಯ ಶಾಸನದ ಲೇಖನದ ಅನುವಾದವನ್ನು ಸಾರಗ್ರಹಣ ಮಾಡಿ ಇಲ್ಲಿ ಕೊಟ್ಟಿದೆ.

"ಪ್ರಿಯದರ್ಶಿ ರಾಜನು ಎಲ್ಲ ಸಂಪ್ರದಾಯಗಳನ್ನು ಗೌರವಿಸುತ್ತಾನೆ; ಅವರಿಗೆ ದಾನ ನೀಡುತ್ತಾನೆ, ಅವರನ್ನು ಪೂಜಿಸುತ್ತಾನೆ. ಎಲ್ಲ ಪಂಥಗಳ ಮಹತ್ತ್ವದ

ಅಂಶಗಳು ವೃದ್ಧಿಯಾಗಬೇಕೆಂಬುದು ಅವನ ಇಚ್ಛೆ. ಅದಕ್ಕಾಗಿ ವಾಕ್ಸಂಯಮ ಎಂದರೆ ನಾಲಗೆಯಮೇಲೆ ಹಿಡಿತ ಇರಬೇಕು.

(ಸಂಯಮವೆಂದರೆ) ತನ್ನ ಪಂಥವನ್ನು ಹೊಗಳದಿರುವುದು, ಇನ್ನೊಂದು ಪಂಥವನ್ನು ಹಳಿಯದಿರುವದು,— ಅಪ್ರಾಸಂಗಿಕವಾಗಿಯಂತೂ ಹಾಗೆ ಮಾಡಲಾಗದು, ಪ್ರಾಸಂಗಿಕವಾಗಿ ಮಾಡಲೇ ಬೇಕಾಗಿದ್ದರೆ ಮಿತವಾಗಿ ಮಾಡುವುದು. ಅನ್ಯಪಂಥಗಳಿಗೆ ಯೋಗ್ಯ ಮನ್ನಣೆ ಸಲ್ಲಿಸಬೇಕು; ಅದರಿಂದ ತನ್ನ ಪಂಥದ ಉನ್ನತಿಯಾಗುವುದು, ಮತ್ತು ಎರಡನೆಯ ಪಂಥಕ್ಕೆ ಲಾಭವೂ ಆಗುವುದು. ಇದರ ವಿರುದ್ಧವಾಗಿ ವರ್ತಿಸುವವನು ಈ ಎರಡೂ ಪಂಥಗಳಿಗೆ ಹಾನಿಯನ್ನುಂಟು ಮಾಡುವನು.

ಇದಕ್ಕಾಗಿ ಯಾವಾಗಲೂ ಪರಸ್ಪರ ವಿಚಾರವಿನಿಮಯ ನಡೆಸುವುದು ಲೇಸು. ಒಬ್ಬರೊಬ್ಬರ ಧರ್ಮವನ್ನು ಅರಿತುಕೊಳ್ಳಬೇಕು, ಮನ್ನಿಸಬೇಕು. ಎಲ್ಲ ಪಂಥಗಳೂ ಬಹುಶ್ರುತವಾಗಬೇಕು, ಕಲ್ಯಾಣಪರವಾಗಬೇಕು ಎಂದು ದೇವಪ್ರಿಯನ ಅಪೇಕ್ಷೆ. ಇದರಿಂದ ಸ್ವಪಂಥವು ಬೆಳೆದು ಧರ್ಮವು ಬೆಳಗುವುದು.

## ೩ ಬೆಟ್ಟದ ಮೇಲೆ ಯೇಸುವಿನ ಪ್ರವಚನ

[ಯೇಸು ತನ್ನ ಹನ್ನೆರಡು ಶಿಷ್ಯರನ್ನು ಗುಡ್ಡದ ಮೇಲೆ ಕರೆದೊಯ್ದು ಅಲ್ಲಿ ಅವರಿಗೆ ಮಾಡಿದ ಉಪದೇಶದ ಭಾಗವಿದು]

“ದುಡ್ಡು ದೊರೆತರೆ ನಿಮ್ಮ ಮನಸ್ಸಿಗೆ ಶಾಂತಿ ಲಭಿಸದು; ಏಕೆಂದರೆ ಅದು ನಷ್ಟವಾದರೆ ನಿಮ್ಮ ಮನಸು ಶಾಂತವಾಗಿ ಉಳಿಯಲಾರದು.

ನಾನು ಹಳೆಯ ಶಾಸ್ತ್ರಗಳನ್ನು ನಷ್ಟಗೊಳಿಸಲು ಬಂದವನಲ್ಲ. ಅವುಗಳ ನಿಜವಾದ ಅರ್ಥವನ್ನು ನಿಮಗೆ ಅರುಹುತ್ತಿದ್ದೇನೆ. ನೀವು ಒಳ್ಳೆಯ ಶೀಲದವರಾದರೆ ದೇವರ ಮನೆಯಲ್ಲಿ ನಿಮಗೆ ಇಂಬು ಸಿಕ್ಕುವುದು.

ಯಾರನ್ನೂ ಕೊಲ್ಲಬೇಡಿರಿ. ಕೊಲ್ಲುವುದು ಮಾತ್ರವೇ ಹಿಂಸೆಯಲ್ಲ. ನೀವು ನಿಮ್ಮ ಬಂಧುವಿನ ಮೇಲೆ ಸಿಟ್ಟಿಗೇಳುವುದೂ, ಅವರನ್ನು ಬಯ್ಯುವುದೂ ನಿಮ್ಮನ್ನು ಅಧೋಗತಿಗೆ ಒಯ್ಯುವುದು.

ನಿಮ್ಮ ಹಗೆಯನ್ನೂ ಪ್ರೀತಿಸಿರಿ; ಯಾರಲ್ಲಿಯೂ ದ್ವೇಷ ಬೇಡ, ಶಪಿಸುವವರಿಗೂ ಒಳ್ಳೆಯದನ್ನು ಮಾಡಿರಿ. ಇದರಿಂದಲೇ ಒಡೆಯನು ಮೆಚ್ಚುವನು.

ನೀವು ನಿಮ್ಮ ಸತ್ಕಾರ್ಯಗಳನ್ನು ಗುಪ್ತವಾಗಿಡಿರಿ. ಬಲಗೈ ಮಾಡಿದ ದಾನ ಎಡಗೈಗೆ ಗೊತ್ತಾಗದಿರಲಿ.

ಈಶ್ವರನಲ್ಲಿ ಭಕ್ತಿಯಿಂದ ಬೇಡಿರಿ. ಮಗು ರೊಟ್ಟಿ ಬೇಡಿದರೆ ನೀವು ಕಲ್ಲು ಕೊಡುವಿರಾ ? ಎಂದ ಮೇಲೆ ನಿಮ್ಮ ಪ್ರಭು ನಿಮಗೆ ಕಲ್ಯಾಣಕರವಾದ ವಸ್ತುವನ್ನೀಯದೆ, ಅನಿಷ್ಟ ವಸ್ತುಗಳನ್ನು ಹೇಗೆ ಕೊಟ್ಟಾನು ?

## ೪. ಮನುಸ್ಮೃತಿ :

[ ಸ್ತ್ರೀಸ್ವಾತಂತ್ರ್ಯ ನಿಷೇಧ, ಬಾಲವಿವಾಹ ಪುರಸ್ಕಾರ, ಜನ್ಮತಃ ಜಾತಿನಿರ್ಣಯ ಇತ್ಯಾದಿಗಳಿಂದ ಮನಸ್ಮೃತಿ ಆಧುನಿಕ ಕಾಲದಲ್ಲಿ ಅನೇಕರ ನಿಷೇಧಕ್ಕೆ ಗುರಿಯಾಗಿದೆ; ಇದರಲ್ಲಿ ಅಸ್ವಾಭಾವಿಕವಾದುದೇನೂ ಇಲ್ಲ. ಆದರೆ, ಅದರೊಂದಿಗೆ ಆ ಗ್ರಂಥದಲ್ಲಿರುವ ಸುಂದರ ವಚನಗಳ ಬಗ್ಗೆಯೂ ವಿಚಾರ ಮಾಡಬೇಕು. ಉದಾಹರಣೆಗಾಗಿ, ಸಹಜವಾಗಿ ಆರಿಸಿದ ಕೆಲವು ಶ್ಲೋಕಗಳ ಅರ್ಥವನ್ನು ಕೆಳಗೆ ಕೊಟ್ಟಿದೆ. ]

ಸ್ತ್ರೀಯರಿಗೆ ಮಾನವಿರುವ ಸ್ಥಳದಲ್ಲಿ ತಾವು ಇರುವುದು ದೇವತೆಗಳಿಗೆ ಸೇರುತ್ತದೆ. ಆದರೆ ಸ್ತ್ರೀಯರಿಗೆ ಮಾನವಿಲ್ಲದೆಡೆಗಳಲ್ಲಿ ಎಲ್ಲ ಪ್ರಯತ್ನಗಳೂ ವ್ಯರ್ಥವಾಗುತ್ತವೆ. ( ಅ. ೩. ಶ್ಲೋ. ೫೬ ).

ರಾಜರು ತಮ್ಮ ರಾಜ್ಯದಲ್ಲಿ ನ್ಯಾಯದಿಂದ ವರ್ತಿಸಬೇಕು; ಶತ್ರುಗಳನ್ನು ಚೆನ್ನಾಗಿ ದಂಡಿಸಬೇಕು; ಪ್ರಿಯ ಮಿತ್ರರೊಡನೆ ಸರಳತನದಿಂದ ನಡೆದುಕೊಳ್ಳಬೇಕು; ಬ್ರಾಹ್ಮಣರೊಂದಿಗೆ ಕ್ಷಮಾಶೀಲರಾಗಿರಬೇಕು. ( ಅ. ೭, ಶ್ಲೋ. ೩೨ ).

ಅಹಿಂಸೆ, ಸತ್ಯ, ಅಸ್ತೇಯ ( ಕದಿಯದಿರುವುದು ), ಶುದ್ಧತೆ ಮತ್ತು ಇಂದ್ರಿಯ ನಿಗ್ರಹ ಇವು ಧರ್ಮದ ಪಂಚವಿಧ ಪ್ರಕಾರಗಳು ಇವು ನಾಲ್ಕು ವರ್ಣಗಳವರಿಗೂ ಅನ್ವಯಿಸುವವೆಂದು ಹೇಳುತ್ತಾರೆ. ( ಅ. ೧೦, ಶ್ಲೋ. ೬೩ ).

---

## ದಶಮ ಖಂಡ

# ಪ್ರಾಚೀನ ಭಾರತವರ್ಷದ ಸುವರ್ಣ ಯುಗ

( ಕ್ರಿ. ವ. ೩೦೦ ರಿಂದ ೬೦೦ * )

**ಗುಪ್ತ ಮನೆತನದ ಸ್ಥಾಪನೆ:—** ಅಶೋಕನ ಮೃತ್ಯುವಿನಿಂದ ಗುಪ್ತ ಮನೆತನದ ಸ್ಥಾಪನೆಯ ವರೆಗೆ ಹಿಂದುಸ್ತಾನದಲ್ಲಿ ಪೂರ್ವ–ದಕ್ಷಿಣ ಭಾಗದಲ್ಲಿ ಆಂಧ್ರರೂ ಪಶ್ಚಿಮೋತ್ತರ ಭಾಗದಲ್ಲಿ ಶಕ-ಕುಶಾನರೂ ಆಳಿದರು. ಆಂಧ್ರರು ಮಗಧವನ್ನು ಕ್ರಿ. ವ. ಮೂರನೆಯ ಶತಕದವರೆಗೆ ಆಳಿದರು. ಆಮೇಲೆ ಆಂಧ್ರರ ಸ್ಥಳದಲ್ಲಿ ಗುಪ್ತರ ಆಳಿಕೆ ಹೇಗೆ ಆರಂಭವಾಯಿತೋ ತಿಳಿಯುವುದಿಲ್ಲ. ಅಲ್ಲಿ ಆಂಧ್ರರ ಪ್ರಭುತ್ವ ಕೊನೆಗಂಡ ಮೇಲೆ ಬಹುಶಃ ನೇಪಾಳದ ದಕ್ಷಿಣದಲ್ಲಿರುತ್ತಿದ್ದ ಲಚ್ಛವಿ ಕ್ಷತ್ರಿಯರು ಪ್ರಬಲರಾಗಿರಬಹುದು. ಗುಪ್ತರಾಜನಾದ ಮೊದಲನೆಯ ಚಂದ್ರಗುಪ್ತನು ಆ ಮನೆತನದ ಹೆಣ್ಣನ್ನು ಮದುವೆಯಾಗಿದ್ದನು. ಲಚ್ಛವಿಗಳ ಬೆಂಬಲ ತನಗುಂಟೆಂಬುದನ್ನು ಕಂಡು ಅವನು ಕ್ರಿ. ವ. ೩೨೦ ರಲ್ಲಿ ಪಾಟಲೀಪುತ್ರದ ಪಟ್ಟವನ್ನೇರಿ, ಮಹಾರಾಜನೆಂಬ ಪದವಿಯನ್ನು ಧರಿಸಿದನು. ಇಲ್ಲಿಂದ ಸುಮಾರು ಮೂರು ನೂರು ವರುಷಗಳ ಕಾಲವು ವೈಭವಯುತವಾದುದು. ಆದುದರಿಂದ ಈ ಕಾಲವು ‘ ಸುವರ್ಣ ಯುಗ ’ ಎಂದು ಹೆಸರುಗೊಂಡಿದೆ.

**ಚಕ್ರವರ್ತಿ ಸಮುದ್ರಗುಪ್ತ** ( ಕ್ರಿ. ವ. ೩೩೦–೩೭೫ ) :— ಮೊದಲನೆಯ ಚಂದ್ರಗುಪ್ತನು ೩೩೦ನೆಯ ಇಸವಿಯ ವರೆಗೆ ಆಳಿದನು. ಮುಂದೆ ಅವನ ಮಗ ಸಮುದ್ರಗುಪ್ತನಿಂದ ಮಗಧ ಸಾಮ್ರಾಜ್ಯವು ಮತ್ತೆ ಉದಯ ಹೊಂದಿತು. ಅಶೋಕನ ತರುವಾಯ ಹೇಳಿಕೊಳ್ಳುವಂತಹ ಚಕ್ರವರ್ತಿಯೆಂದರೆ ಈ ಸಮುದ್ರಗುಪ್ತನು.

**ಅಶೋಕ ಮತ್ತು ಸಮುದ್ರಗುಪ್ತ :—** ಅಶೋಕನಿಗೆ ಧರ್ಮಪ್ರಸಾರದ ನಾದವಿದ್ದರೆ ಸಮುದ್ರಗುಪ್ತನಿಗೆ ರಾಜ್ಯಪ್ರಸಾರದ ನಾದ. ಒಬ್ಬನು. ಚಂದ್ರಪ್ರಕಾಶದಂತೆ ಶೀತಲ, ಇನ್ನೊಬ್ಬನು ಪ್ರಖರ ಕ್ಷಾತ್ರತೇಜದಿಂದ ತೊಳಗುವವನು. ಹೀಗೆ ಹಿಂದುಸ್ತಾನದ ಇತಿಹಾಸದಲ್ಲಿ ಭಿನ್ನ ಪ್ರಕೃತಿಯ ಆದರೆ ತಮ್ಮ ತಮ್ಮ ರೀತಿಯಲ್ಲಿ ಅಸಾಮಾನ್ಯ ಕರ್ತೃತ್ವದ ರಾಜರಾಗಿ ಹೋದರು. ಸಮುದ್ರಗುಪ್ತನ ಶಿಲಾಲೇಖಗಳೂ ಉಪಲಬ್ಧವಾಗಿವೆ. ಯೋಗಾಯೋಗವೆಂದರೆ, ಅಶೋಕನ ಧರ್ಮಪ್ರಸಾರದ ಶಾಂತತಾಮಯ ಸಂದೇಶವನ್ನು ಕೆತ್ತಿದ ಕಲ್ಲಿನ ಕೆಳಗಡೆಯಲ್ಲಿಯೇ ಸಮುದ್ರಗುಪ್ತನು ತನ್ನ ದಿಗ್ವಿಜಯದ ವರ್ಣನೆಯನ್ನು ಬರೆಸಿದನು.

* ಹೂಣರ ದಾಳಿಯಿಂದ ಗುಪ್ತ ಸಾಮ್ರಾಜ್ಯಕ್ಕೆ ಕ್ರಿ. ವ. ೫೦೦ ರ ಸುಮಾರಿಗೆ ದೊಡ್ಡ ಪೆಟ್ಟು ಬಿದ್ದಿತು. ಆದರೂ ಅದರ ಪ್ರಭುತ್ವ ಭಾರತದ ಹಲವು ಭಾಗಗಳಲ್ಲಿ ಮುಂದುವರಿಯಿತು. ಈ ಮನೆತನದ ಹೆಸರೆತ್ತಬಹುದಾದ ಕೊನೆಯ ರಾಜನೆಂದರೆ ವಿಷ್ಣುಗುಪ್ತನು. ಕ್ರಿ. ವ. ೫೭೦ರಲ್ಲಿ ಆಳುತ್ತಿದ್ದನು. ಈ ದೃಷ್ಟಿಯಿಂದ ಸುವರ್ಣಯುಗದ ಕಾಲಮರ್ಯಾದೆ ಕ್ರಿ.ವ. ೩೨೦–೫೭೦ ಎಂದಾದರೂ ಶತಮಾನದ ಸರಾಸರಿಯಿಂದ ಕ್ರಿ. ವ. ೩೦೦ ರಿಂದ ೬೦೦ ಎಂದು ಗ್ರಹಿಸಲಾಗಿದೆ.

**ಸಮುದ್ರಗುಪ್ತನ ನಾಣ್ಯಗಳು:**— ಕಲ್ಬರೆಹಗಳಲ್ಲದೆ ಸಮುದ್ರಗುಪ್ತನ ಕಾಲದ ಸಂಗತಿ ತಿಳಿಸುವ ನಾಣ್ಯಗಳು ಸಿಕ್ಕಿವೆ. ಒಂದು ನಾಣ್ಯದ ಮೇಲೆ ಗರುಡ ಚಿಹ್ನಾಂಕಿತ ಚಿತ್ರವಿದೆ; ಇನ್ನೊಂದರಲ್ಲಿ ಅಶ್ವಮೇಧದ ಕುದುರೆಯ ಚಿತ್ರವಿದೆ; ಮತ್ತೊಂದರಲ್ಲಿ ಅವನು ವೀಣೆ ಹಿಡಿದು ಕುಳಿತುದನ್ನು ಚಿತ್ರಿಸಿದೆ. ಈ ಮೂರೂ ನಾಣ್ಯಗಳಿಂದ,





ಸಮುದ್ರಗುಪ್ತನು ಬೌದ್ಧಧರ್ಮೀಯನಾಗಿರದೆ ಭಗವದ್ಗೀತೆಯಲ್ಲಿಯ ಭಾಗವತ ಧರ್ಮದಂತೆ ಜಯಿಷ್ಣುವೂ ಪ್ರವೃತ್ತಿಪರನೂ ಆಗಿದ್ದನೆಂದೂ ದಿಗ್ವಿಜಯವಾದ ಬಳಿಕ ಪುಷ್ಯಮಿತ್ರಶುಂಗನಂತೆ ಅಶ್ವಮೇಧ ಮಾಡಿರಬೇಕೆಂದೂ ಅವನಿಗೆ ಪರಾಕ್ರಮದಂತೆಯೆ ವಿದ್ಯೆ-ಗಾಯನವಾದನ-ಲಲಿತ ಕಲೆಗಳಲ್ಲಿ ಅಭಿರುಚಿಯಿತ್ತೆಂದೂ ಊಹಿಸಬಹುದಾಗಿದೆ.

**ರಾಜ್ಯವಿಸ್ತಾರ :**— ಸಮುದ್ರಗುಪ್ತನ ಆಸ್ಥಾನಕವಿಯಾದ ಹರಿಷೇಣನು ರಚಿಸಿದ ಪ್ರಶಸ್ತಿಪರ ಸಂಸ್ಕೃತ ಕಾವ್ಯವನ್ನು ಅಲಹಾಬಾದದಲ್ಲಿಯ ಕಂಬದಲ್ಲಿ ಕೆತ್ತಿದ್ದಾರೆ. ಅದರಿಂದಲೂ ಇತರ ಶಿಲಾಲೇಖಗಳಿಂದಲೂ ಅವನ ಪರಾಕ್ರಮದ ಚತುರ್ವಿಧ ಸ್ವರೂಪವು ವಕ್ತವಾಗುತ್ತದೆ. ಅವನು ಕೆಲವು ರಾಜರನ್ನು ಗೆದ್ದರೂ ಅವರ ಸ್ವಾತಂತ್ರ್ಯವನ್ನು ಅವರಿಗೆ ತಿರುಗಿ ಕೊಟ್ಟನು. ಮಹಾಕಾಂತಾರ ( ಓರಿಸಾ ) ದೇಶದ ವ್ಯಾಘ್ರರಾಜ, ಪಿಷ್ಟಪುರದ ( ಗೋದಾವರೀ ಮುಖದ ಬಳಿ ) ಮಹೇಂದ್ರ, ದೇವರಾಷ್ಟ್ರದ ಕುಬೇರ, ಇತ್ಯಾದಿಯಾಗಿ ದಕ್ಷಿಣದಲ್ಲಿಯ ಕಾಂಚಿಯ ( ಕಾಂಜೀವರಮ್ ) ವರೆಗಿನ ಹನ್ನೆರಡು ರಾಜರು ಈ ಪಟ್ಟಿಯಲ್ಲಿದ್ದಾರೆ. ಉತ್ತರದಲ್ಲಿಯ ರಾಜರನ್ನು ಅವನು ಸಮೂಲವಾಗಿ ತರಿದನು; ಪೂರ್ವ ಪಶ್ಚಿಮ ಗಡಿಗಳಲ್ಲಿಯ ರಾಜರನ್ನು ಮಾಂಡಲಿಕರನ್ನಾಗಿ ಮಾಡಿಕೊಂಡನು; ಕೆಲ ಕಾಡುಜನರ ತಂಡಗಳ ನಾಯಕರನ್ನು ಸೇವಕರನ್ನಾಗಿ ಮಾಡಿಕೊಂಡನು. , ವಾಯುವ್ಯ ಸೀಮೆಗಳ ಶಾಹೀ, ಶಾಹಾನ್‌ಶಾಹೀ, ದೇವಪುತ್ರ ಮತ್ತು ಮುರುಂಡ ಇತ್ಯಾದಿ ಹೆಸರುಗಳನ್ನು ಧರಿಸಿದ ರಾಜರನ್ನು ಅವನು ಅಂಕೆಯಲ್ಲಿ ತಂದನು. ಇವುಗಳಲ್ಲಿ ಶಾಹೀ, ಶಾಹಾನ್ ಶಾಹೀ ಎಂಬವು ರಾಜ ಮತ್ತು ರಾಜಾಧಿರಾಜ ಎಂಬರ್ಥದ ಇರಾಣೀ ಪದವಿಗಳು; ಕುಶಾನ ರಾಜರು ಇವನ್ನು ಧರಿಸುತ್ತಿದ್ದರು. ಅವರ ಸಾಮ್ರಾಜ್ಯವೀಗ ಮುರಕಳಿಗೆ ಬಂದು ಅಲ್ಲಿ ಸಣ್ಣ ಸಣ್ಣ ರಾಜ್ಯಗಳು ಉಂಟಾಗಿದ್ದವು. ದೇವಪುತ್ರ ಎಂಬ ಚೀನೀ ಪದವಿಯೂ ಕುಶಾನ ದೊರೆಗಳದೇ ಶಕರ ಪ್ರಭುತ್ವವು ಪಂಜಾಬ, ರಾಜಪುತಾನಾ,

ಮಾಳವೆಗಳ ಕಡೆಯಲ್ಲಿತ್ತು. ಮುರುಂಡ ಎಂಬುದು ಪರಕೀಯ ತಂಡವಾಗಿರ ಬೇಕು. ಒಟ್ಟಾರೆ ಸಮುದ್ರಗುಪ್ತನ ಪ್ರತ್ಯಕ್ಷ ಪ್ರಭುತ್ವದಲ್ಲಿ ಖಂಡಿತವಾಗಿ ಯಾವ ಪ್ರಾಂತಗಳಿದ್ದವೆಂದು ಹೇಳಲಿಕ್ಕಾಗದಿದ್ದರೂ ಪಶ್ಚಿಮದಲ್ಲಿ ಕಾಬೂಲದಿಂದ ಪೂರ್ವದಲ್ಲಿ




ಆಸಾಮದ ವರೆಗೆ ಮತ್ತು ಉತ್ತರದಲ್ಲಿ ನೇಪಾಳದಿಂದ ದಕ್ಷಿಣದಲ್ಲಿ ಕಾಂಜೀವರಮ್ ವರೆಗಿನ ದೇಶವೆಲ್ಲ ಅವನ ಅಧಿರಾಜ್ಯಕ್ಕೆ ಒಳಪಟ್ಟಿರಬೇಕೆಂಬುದರಲ್ಲಿ ಸಂದೇಹವಿಲ್ಲ.

**ಸಿಂಹಳದ ರಾಜನೊಡನೆ ಸ್ನೇಹ :—** ಸಿಂಹಳದ ಮೇಘವರ್ಮ ರಾಜನು

ಇವನೊಂದಿಗೆ ಸ್ನೇಹದಿಂದಿದ್ದನು. ಆ ದೇಶದ ಅನೇಕ ಬೌದ್ಧ ಯಾತ್ರಿಕರು ಬುದ್ಧ ಗಯೆಗೆ ಬರುತ್ತಿದ್ದರು. ಅಲ್ಲಿ ಅವರಿಗೆ ತೊಂದರೆಗಳಿದ್ದವು ಅವುಗಳನ್ನು ದೂರ ಗೊಳಿಸುವುದಕ್ಕಾಗಿ ಹಾಗೂ ಅವರಿಗಾಗಿ ಬುದ್ಧಗಯೆಯಲ್ಲಿ ಒಂದು ಸ್ವತಂತ್ರ ಧರ್ಮಶಾಲೆಯನ್ನು ಕಟ್ಟಿಸಲು ಸಮ್ಮತಿ ದೊರೆಯಬೇಕೆಂದು ಮೇಘವರ್ಮನು ಸಮುದ್ರ ಗುಪ್ತನ ಕಡೆಗೆ ಒಬ್ಬ ವಕೀಲನನ್ನು ಕಳುಹಿದನು. ಸಮುದ್ರಗುಪ್ತನು ಅದಕ್ಕೆ ಆನಂದದಿಂದ ಒಪ್ಪಿದನು.

**ಸಾಮ್ರಾಜ್ಯ ಮತ್ತು ರಾಜ್ಯಮಂಡಲ:**— ಹೀಗೆ ಮಾಂಡಲಿಕ ರಾಜರ ರಾಜ್ಯಗಳನ್ನು ಹರಣಮಾಡದೆ ಅವರನ್ನು ಒಂದೇ ಧೋರಣೆಯಿಂದ ಒಂದು ಗೂಡಿಸಿ ತನ್ನ ಸಾಮ್ರಾಜ್ಯದ ಸುತ್ತಲೂ ಮಿತ್ರರಾಜರ ರಾಜಮಂಡಲವನ್ನು ನಿರ್ಮಾಣಮಾಡಿ ವಿಜಯಶಾಲಿಯೂ ಸುಸಂಸ್ಕೃತನೂ ಆದ ಈ ಸಮ್ರಾಟನು ಕ್ರಿ. ವ. ೩೭೫ ರಲ್ಲಿ ಮಡಿದನು. ಅವನು ವಿದ್ವಾಂಸರಿಗೆ ದೊಡ್ಡ ಆಶ್ರಯವಾಗಿದ್ದನು. ಅವನು ತಾನೂ ಕಾವ್ಯಗಳನ್ನು ರಚಿಸುತ್ತಿದ್ದನು. ಗಾಯನ–ವಾದನಾದಿ ಲಲಿತಕಲೆಗಳ ಅಭಿರುಚಿ ಅವನಿಗಿತ್ತು. ವೀಣೆ ಅವನಿಗೆ ಅಚ್ಚುಮೆಚ್ಚಿನ ವಾದ್ಯ, ಸಂಸ್ಕೃತ ಭಾಷೆಗೆ ಅವನು ರಾಜಭಾಷೆಯ ಸ್ಥಾನವನ್ನು ಕೊಟ್ಟನು. ತಾನು ವೈದಿಕ ಧರ್ಮದ ಅನು ಯಾಯಿಯಾಗಿದ್ದರೂ ರಾಜ್ಯದಲ್ಲಿಯ ಬೌದ್ಧ ಧರ್ಮೀಯರಿಗೆ ಅವನು ಸಹಾಯ ಮಾಡಿದನು. ಇವನಿಗೆ ಚಂದ್ರಪ್ರಕಾಶನೆಂದೂ ಬಾಲಾದಿತ್ಯನೆಂದೂ ಕರೆಯುತ್ತಿದ್ದಂತೆ ತಿಳಿದುಬರುತ್ತದೆ. ಕ್ವಚಿತ್ತಾಗಿ ಅವನನ್ನು ವಿಕ್ರಮಾದಿತ್ಯನೆಂದೂ ಕರೆದಿದ್ದಾರೆ. ಪಾಶ್ಚಾತ್ಯ ಇತಿಹಾಸಕಾರರು ಅವನನ್ನು 'ಪ್ರಾಚೀನ ಭಾರತದ ನೆಪೋಲಿಯನ್' ಎಂದು ವರ್ಣಿಸಿದ್ದಾರೆ.

**ವಿಕ್ರಮಾದಿತ್ಯ** (ಕ್ರಿ. ವ. ೩೭೫–೪೧೩) :— ಸಮುಗುಪ್ತನ ತರುವಾಯ ಅವನ ಮಗ ಎರಡನೆಯ ಚಂದ್ರಗುಪ್ತನು ಪಟ್ಟಕ್ಕೆ ಬಂದನು. ಅವನು ವಿಕ್ರಮಾದಿತ್ಯನೆಂಬ* ಹೆಸರು ಧರಿಸಿದನು. ಪಂಜಾಬ, ಬಂಗಾಲ ಪ್ರಾಂತಗಳನ್ನು ಸ್ವಾಧೀನ ಪಡಿಸಿಕೊಳ್ಳುವದಕ್ಕಾಗಿ ಚಂದ್ರಗುಪ್ತನು ಅವುಗಳ ಮೇಲೆ ದಾಳಿಮಾಡ ಬೇಕಾಯಿತೆಂದು ದಿಲ್ಲಿಯಲ್ಲಿಯ ಒಂದು ದೊಡ್ಡ ಲೋಹಸ್ತಂಭದ ಮೇಲಿನ ಬರೆಹ ದಿಂದ ಕಂಡುಬರುತ್ತದೆ. ಅಲ್ಲದೆ ಅವನು ವಾಕಾಟಕರೊಡನೆ ಗೆಳೆತನಮಾಡಿ ಮಾಳ ವೆಯ ಕ್ಷತ್ರಪನನ್ನು ಸೋಲಿಸಿ, ಅವನ ರಾಜಧಾನಿಯಾದ ಉಜ್ಜಯಿನಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿದನು. ಮುಂದೆ ಗುಜರಾತ ಕಾಠೇವಾಡಗಳನ್ನೂ ತನ್ನ ಅಧಿಪತ್ಯಕ್ಕೆ ಸೇರಿಸಿಕೊಂಡನು.

**ವ್ಯಾಪಾರಕ್ಕೆ ಉತ್ತೇಜನ** —ಚಂದ್ರಗುಪ್ತನು ಬಂಗಾರ ಬೆಳ್ಳಿಗಳ ನಾಣ್ಯಗ ಳನ್ನು ಬಳಕೆಗೆ ತಂದು ವ್ಯಾಪಾರಕ್ಕೆ ಉತ್ತೇಜನವಿತ್ತನು. ಉಜ್ಜಯಿನಿ ಆಗ

* ಈ ಹೆಸರನ್ನೇ ಇವನ ಮೊಮ್ಮಗ ಸ್ಕಂದಗುಪ್ತನೂ ಮಾಳವೆಯ ಯಶೋಧರ್ಮ ರಾಜನೂ ಧರಿಸಿದ್ದರಿಂದ ಸಂಸ್ಕೃತ ವಾಙ್ಮಯದಲ್ಲಿ ವಿಕ್ರಮಾದಿತ್ಯನ ಬಗ್ಗೆ ಪ್ರಸಿದ್ಧವಿದ್ದ ಎಲ್ಲ ಸಂಗತಿಗಳನ್ನು **ಈ ಚಂದ್ರಗುಪ್ತನಿಗೆ ಅನ್ವಯಿಸುವಾಗ ಎಚ್ಚರಪಡುವುದು ಅಗತ್ಯ.**

ಒಳ್ಳೇ ಅಭಿವೃದ್ಧಿ ಹೊಂದಿತ್ತು. ವಿದೇಶಗಳಿಂದ ಸಮುದ್ರ ಮಾರ್ಗವಾಗಿ ಖಂಬಾಯತ ಆಖಾತದ ಮೂಲಕ ಉಜ್ಜಯಿನಿಗೆ ಸರಕು ಬರುತ್ತಿತ್ತು. ಉಜ್ಜಯಿನಿಯಿಂದ ಉತ್ತರ ಹಿಂದುಸ್ತಾನದಲ್ಲಿ ಬೇರೆಬೇರೆ ದಿಕ್ಕುಗಳಿಗೆ ಮಾರ್ಗಗಳು ಹೋಗಿದ್ದುದರಿಂದ ಅದು ವ್ಯಾಪಾರ ಕೇಂದ್ರವಾಗಿತ್ತು.

**ಹಿಂದೂಧರ್ಮದ ಪುನರುಜ್ಜೀವನ :**—ಹಿಂದಕ್ಕೆ ಹಿಂದುಸ್ತಾನದಲ್ಲಿ ಉಜ್ಜಯಿನಿಯಿಂದ ರೇಖಾಂಶಗಳನ್ನು ಎಣಿಸುತ್ತಿದ್ದರು. ಚಂದ್ರಗುಪ್ತನು (ವಿಕ್ರಮಾದಿತ್ಯ) ವಿಷ್ಣುಭಕ್ತನಾಗಿದ್ದು ಅವನಿಗೆ 'ಪರಮ ಭಾಗವತ'ನೆಂದು ಹೆಸರಿದ್ದ ಹಾಗೆ ತಿಳಿಯುತ್ತದೆ. ಶಕರಂತಹ ಪರಕೀಯರ ಪರಾಭವ ಮತ್ತು ಹಿಂದೂಧರ್ಮದ ಉತ್ಥಾಪನ ಇವುಗಳು ಅವನ ಜೀವಿತ ಕಾರ್ಯಗಳಾಗಿದ್ದವು. ಶಕರನ್ನು ಸೋಲಿಸಿದ್ದರಿಂದ ಇವನಿಗೆ 'ಶಕಾರಿ' ಎಂಬ ಹೆಸರೂ ಉಂಟಾಯಿತು. ಪೌರಾಣಿಕ ಹಿಂದುಧರ್ಮದ ವ್ಯಾಪ್ತಿಯನ್ನು ಹೆಚ್ಚಿಸಿ, ಬುದ್ಧನ ಉಪದೇಶವನ್ನು ಅದರಲ್ಲಿ ಸಮಾವೇಶ ಮಾಡಿಕೊಂಡು ಹಿಂದು ಧರ್ಮದ ಪುನರುಜ್ಜೀವನವನ್ನು ಅವನು ಮಾಡಿದನು. ವಿಕ್ರಮಾದಿತ್ಯನು ಅತ್ಯಂತ ನ್ಯಾಯವಂತನು; ಅವನ ನ್ಯಾಯಚಾತುರ್ಯದ ಅನೇಕ ದಂತಕಥೆಗಳು 'ಸಿಂಹಾಸನ ಬತ್ತೀಸ ಪುತ್ಥಳಿ'ಯಂತಹ ಲೋಕಪ್ರಿಯ ಗ್ರಂಥಗಳಲ್ಲಿ ಪ್ರಸಿದ್ಧವಾಗಿವೆ. ಕಾಲಿದಾಸ ಮೊದಲಾದ ಒಂಬತ್ತು ಪಂಡಿತರತ್ನಗಳು ಇವನ ಓಲಗದಲ್ಲಿದ್ದವೆಂದು ಅನ್ನುತ್ತಾರೆ. ಆದರೆ ಈ ಎಲ್ಲ ಪುರುಷರು ಸಮಕಾಲೀನರಲ್ಲವಾದುದರಿಂದ ಈ ನವರತ್ನಗಳ ಸಂಗತಿ ಹಿಂದಿನಿಂದ ಪ್ರಚಲಿತವಾಗಿರಬೇಕು. ಆದರೂ ಅವನು ವಿದ್ವಾಂಸರಿಗೆ ಆಶ್ರಯನಾಗಿದ್ದುದು ನಿಜ. ಕ್ರಿ. ವ. ೪೧೩ರ ವರೆಗೆ ವಿಕ್ರಮಾದಿತ್ಯನು ಆಳಿದನು. ಕ್ರಿ. ಪೂರ್ವ ೫೭ರಿಂದ ಹಿಂದುಸ್ತಾನದಲ್ಲಿ ಆರಂಭವಾಗಿದ್ದ ಕಾಲಗಣನೆಗೆ ಮುಂದೆ ಇವನ ಹೆಸರು ಬಂದಿತು ಮತ್ತು ಈಗ ಅದು 'ವಿಕ್ರಮಸಂವತ್' ಎಂದು ಹೆಸರಾಗಿದೆ. ×

**ಫಾಹಿಯನನ ವರ್ಣನೆ :**— ಫಾಹಿಯನನೆಂಬ ಚೀನೀ ಪ್ರವಾಸಿಯು ಬೌದ್ಧರ ಪವಿತ್ರ ಸ್ಥಳಗಳನ್ನು ನೋಡುವುದಕ್ಕಾಗಿ ವಿಕ್ರಮಾದಿತ್ಯನ ಕಾಲದಲ್ಲಿ ಕ್ರಿ. ವ. ೪೦೫–೧೧ರೊಳಗೆ ಬಂದು ಹೋದನು. ಉತ್ತರ ಹಿಂದುಸ್ತಾನದಲ್ಲಿ ಬೌದ್ಧರೂ ಹಿಂದುಗಳೂ ಸ್ನೇಹಭಾವದಿಂದಿದ್ದರೆಂದು ಈತನ ಬರೆಹಗಳಿಂದ ತಿಳಿಯುತ್ತದೆ. ಗೌತಮ ಬುದ್ಧನ ರಥದ ಮೆರವಣಿಗೆಯ ವರ್ಣನೆ ಅವನ ಗ್ರಂಥದಲ್ಲಿ ಬಂದಿದೆ. ಬೌದ್ಧ–ಹಿಂದು ಧರ್ಮಗಳಲ್ಲಿ ಆಗ ಮೂರ್ತಿಪೂಜೆ ಹೇಗೆ ಪ್ರಸಾರವಾಗಿತ್ತೆಂಬುದು ಗೊತ್ತಾಗುತ್ತದೆ. ಅಲ್ಲದೆ ಸಾಮಾನ್ಯ ಸ್ಥಿತಿಯನ್ನು ಬಣ್ಣಿಸುತ್ತ ಅವನು ಹೀಗೆ ಬರೆಯುತ್ತಾನೆ—

× ಈಗ ಉತ್ತರ ಹಿಂದುಸ್ತಾನದಲ್ಲಿ ವಿಕ್ರಮ ಸಂವತ್ತೂ ದ. ಹಿಂದುಸ್ತಾನದಲ್ಲಿ ಶಾಲಿವಾಹನ ಶಕೆಯೂ ನಡೆಯುತ್ತಿವೆ. ಕ್ರಿ. ವ. ದಲ್ಲಿ ೫೭ ಕೂಡಿಸಿದರೆ ವಿಕ್ರಮ ಸಂವತ್ತೂ ೭೮ ಕಳೆದರೆ ಶಾಲಿವಾಹನ ಶಕೆಯೂ ಹೊರಡುತ್ತದೆ. ಶಾಲಿವಾಹನ ಶಕೆಯ ವರ್ಷಾರಂಭ ಚೈತ್ರ ಶು. ೧ ರಿಂದಲೂ ಸಂವತ್ ವರ್ಷಾರಂಭ ಕಾರ್ತಿಕ ಶು. ೧ ರಿಂದಲೂ ಆಗುತ್ತದೆ.

"ಜನ ಸುಸ್ಥಿತಿಯಲ್ಲಿದ್ದಾರೆ; ತಲೆಪಟ್ಟಿಯಂತಹ ಒತ್ತಾಯದ ಕರಗಳಿಲ್ಲ. ಅವರಿಗೆ ರಾಜ್ಯದಲ್ಲಿ ಎಲ್ಲ ಕಡೆ ಹೋಗಲು ಸ್ವಾತಂತ್ರ್ಯವಿದೆ. ಅಪರಾಧಿಗೆ ಸೌಮ್ಯವಾದ ಶಿಕ್ಷೆ ವಿಧಿಸಲಾಗುತ್ತದೆ. ಜನರು ಪ್ರಾಣಿವಧೆ ಮಾಡುವುದಿಲ್ಲ, ಮದ್ಯ ಕುಡಿಯುವುದಿಲ್ಲ. ಬಳ್ಳುಳ್ಳಿ-ಈರುಳಿ ತಿನ್ನುವುದಿಲ್ಲ. ಬಡವರಿಗಾಗಿ ಉಚಿತ ಔಷಧದ ದವಾಖಾನೆಗಳಿವೆ. ಅಲ್ಲಿ ಅನೇಕ ರೋಗಿಗಳು ಗುಣಹೊಂದಿ ಹೋಗುತ್ತಿದ್ದಾರೆ."

—ದತ್ತ ಅವರ ಪುಸ್ತಕದಿಂದ

**ಹೂಣರ ದಾಳಿಗಳು :—** ಚಂದ್ರಗುಪ್ತ ವಿಕ್ರಮಾದಿತ್ಯನ ತರುವಾಯ ಅವನ ಮಗ ಕುಮಾರಗುಪ್ತನು ಸಿಂಹಾಸನವೇರಿದನು. ಅವನೂ ದಿಗ್ವಿಜಯ ಮಾಡಿ ಅಶ್ವಮೇಧಯಾಗ ಮಾಡಿದನು. ಈ ಅಶ್ವಮೇಧ ಮಾಡುವ ಮನದೊಲವು ಹಿಂದುಧರ್ಮದ ಹೆಚ್ಚುತ್ತಿರುವ ವರ್ಚಸ್ಸಿನ ದ್ಯೋತಕವಾಗಿದೆ. ಕ್ರಿ. ವ. ೪೫೫ರಲ್ಲಿ ಕುಮಾರಗುಪ್ತನು ಮಡಿಯಲು ಅವನ ಮಗ ಸ್ಕಂದಗುಪ್ತನು ೪೮೦ರ ವರೆಗೆ ಆಳಿದನು. ಅವನ ಕಾಲದಲ್ಲಿ ವಾಯುವ್ಯದ ಕಡೆಯಿಂದ ಹಿಂದುಸ್ಥಾನದ ಮೇಲೆ ಮಧ್ಯ ಆಶಿಯದ ಹೂಣರ ದಾಳಿಗಳಿಗೆ ಮೊದಲಾಯಿತು. ( ಕ್ರಿ. ವ. ೪೮೭ ) ಸ್ಕಂದ ಗುಪ್ತನು ಅವರ ದಾಳಿಗಳನ್ನು ತಡೆಗಟ್ಟಿದನು. ಆದರೆ ಅವನ ತರುವಾಯ ಹೂಣರ ತಂಡದ ನಾಯಕನಾದ ತೋರಮಾಣನು ಗುಪ್ತರನ್ನು ಸೋಲಿಸಿ ಕ್ರಿ. ವ. ೪೯೯ ರಲ್ಲಿ ಉಜ್ಜಯನಿಯ ರಾಜ್ಯವನ್ನು ಆಕ್ರಮಿಸಿದನು. ಹೂಣರ ರಾಜ್ಯ ಇಲ್ಲಿ ಹೆಚ್ಚು ಕಾಲ ನಡೆಯಲಿಲ್ಲ. ಔರಂಗಜೇಬನ ತರುವಾಯ ಮೊಗಲ ಸಾಮ್ರಾಜ್ಯದ ಸ್ಥಿತಿಯಾದಂತೆ, ಸ್ಕಂದಗುಪ್ತನ ತರುವಾಯ ಈ ಸಾಮ್ರಾಜ್ಯದ ಸ್ಥಿತಿಯಾಯಿತು. ಮಾಳವೆಯ ಪರಾಕ್ರಮಿ ರಾಜನಾದ ಯಶೋಧರ್ಮನು ಕ್ರಿ. ವ. ೫೨೮ ರಲ್ಲಿ ಬೇರೆ ಬೇರೆ ರಾಜರ ಒಂದು ಸಂಘವನ್ನು ಕಟ್ಟಿ, ತೋರಮಾಣನ ಮಗ ಮಿಹಿರಕುಲನನ್ನು ಮುಲತಾನದ ಹತ್ತಿರ ಕೋರೂರೆಂಬಲ್ಲಿ ಸೋಲಿಸಿದನು. ಬಳಿಕ ಮಿಹಿರಕುಲನು ಕುಶಾನರನ್ನು ತಳ್ಳಿ, ಕಾಶ್ಮೀರವನ್ನು ಹಿಡಿದುಕೊಂಡನು. ಆದರೆ ಆ ರಾಜ್ಯವೂ ಅವನಿಗೆ ಹೆಚ್ಚು ದಿನ ದಕ್ಕಲಿಲ್ಲ. ಹೂಣರ ದಾಳಿಗಳಿಂದ ಗುಪ್ತಸಾಮ್ರಾಜ್ಯವು ಒಡೆದು ಹೋಯ್ತು. ಆದರೆ ಉತ್ತರ ಹಿಂದುಸ್ಥಾನದಲ್ಲಿ ತಮ್ಮ ವರ್ಚಸ್ಸನ್ನು ಸ್ಥಾಪಿಸುವದು ಹೂಣರಿಂದಾಗಲಿಲ್ಲ. ಗುಪ್ತರ ಏಕಛತ್ರಾಧಿಪತ್ಯದ ಬದಲು ಅಲ್ಲಲ್ಲಿ ಹಲವು ಸತ್ತಾಧೀಶರು ಕ್ರಿ. ವ. ಆರನೆಯ ಶತಕದಲ್ಲಿ ಆಳತೊಡಗಿದರು. ಗಂಗಾ—ಯಮುನಾ ಪ್ರದೇಶದಲ್ಲಿ ಮೌಖರಿಗಳ ರಾಜ್ಯವಿತ್ತು; ಮಗಧದಲ್ಲಿ ಗುಪ್ತರ ಆಳಿಕೆಯೇ ಇತ್ತು; ಸೌರಾಷ್ಟ್ರವು ವಲ್ಲಭೀರಾಜರ ಆಧಿಪತ್ಯದಲ್ಲಿ ಕ್ರಿ. ವ. ೪೮೦ ರಲ್ಲಿ ಸ್ವತಂತ್ರವಾಯಿತು; ಮಾಳವೆಯೂ ಸ್ವತಂತ್ರ ರಾಜ್ಯವಾಯ್ತು. ಇವೆಲ್ಲವುಗಳ ಬಗೆಗೆ ಬೇರೆ ಬೇರೆ ಬರೆಯುವಷ್ಟು ವಿಷಯಗಳು ಉಪಲಬ್ಧವಿಲ್ಲ. ಕ್ರಿ. ವ. ೬ ನೆಯ ಶತಕದ ಇತಿಹಾಸದ ಮೇಲೆ ತ್ರೋಟಕ ಪ್ರಕಾಶವನ್ನು ಚೆಲ್ಲುವ ಕೆಲವು ಕೊರೆದ ಲೇಖಗಳು ಸಿಕ್ಕಿವೆ;

× ಸೌರಾಷ್ಟ್ರವು ಮುಂದೆ ಕ್ರಿ. ವ. ೬೦೦ ರ ವರೆಗೆ ಅವರ ಅಧೀನದಲ್ಲಿತ್ತು ; ಬಳಿಕ ರಜಪೂತರು ಅಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿದರು.

ಆದರೆ ಅವುಗಳನ್ನು ಸುಸಂಗತವಾಗಿ ಹೊಂದಿಸುವುದು ಕಠಿಣ. ಆದುದರಿಂದ ಕ್ರಿ. ಪ. ೬೦೦ ವರೆಗಿನ ಸಂಗತಿಗಳು ಇಲ್ಲಿಗೇ ಮುಗಿದವೆಂದು ತಿಳಿಯಬೇಕಾಗಿದೆ.

**ಸಂಸ್ಕೃತ ವಿದ್ಯೆಯ ಪುನರುಜ್ಜೀವನ** :—ಪರಾಕ್ರಮಿಗಳಾದ ರಾಜರ ಕಾಲದಲ್ಲಿಯೇ ದೇಶದ ಸರ್ವಾಂಗೀಣ ಉನ್ನತಿಯಾಗಿರುತ್ತದೆ. ಬುದ್ಧ ಅಶೋಕರ ಕಾಲದಲ್ಲಿ ಸಂಸ್ಕೃತ ಭಾಷೆ ಹಿಂದೆ ಬಿದ್ದಿತ್ತು. ಗುಪ್ತರ ಕಾಲದಿಂದ ಅದಕ್ಕೆ ಪುನಃ ಪ್ರೋತ್ಸಾಹನೆ ದೊರೆತು, ಮುಂದಿನ ಮೂರುನೂರು ವರುಷಗಳ ಸುವರ್ಣಯುಗದಲ್ಲಿ ಅನೇಕ ನಾಮಾಂಕಿತ ಸಂಸ್ಕೃತ ಕವಿಗಳೂ ಪಂಡಿತರೂ ಹುಟ್ಟಿದರು. ಅವರು ಮಹಾಭಾರತದ ಪುನರುಜ್ಜೀವನ ಮಾಡಿದರು. ಮತ್ಸ್ಯಪುರಾಣ, ವಾಯುಪುರಾಣ, ಸ್ಕಂದ ಪುರಾಣ ಮೊದಲಾದ ಹದಿನೆಂಟು ಪುರಾಣಗಳನ್ನು ಬೆಳಕಿಗೆ ತಂದರು; ತತ್ವಜ್ಞಾನ ಮತ್ತು ಭೌತಿಕಶಾಸ್ತ್ರಗಳನ್ನು ಅಭ್ಯಸಿಸಿದರು. ಹೀಗೆ ನಾನಾವಿಧವಾಗಿ ಪರಕೀಯ ಸಂಸ್ಕೃತಿಯ ವರ್ಚಸ್ಸನ್ನು ಕಳೆಯುವಲ್ಲಿ ಯಶಸ್ವಿಗಳಾದರು. ಮಹಾಭಾರತದ ಮೂಲಕ ಭಾರತೀಯರು ತಮ್ಮ ಸಂಸ್ಕೃತಿಯನ್ನು ಮೇಲಿಂದಮೇಲೆ ಪುನರುಜ್ಜೀವನಗೊಳಿಸುವ ಈ ಪರಂಪರೆ ಸುಮಾರು ಇಂದಿನವರೆಗೂ ತಲುಪುತ್ತದೆ. ಇರಲಿ ಗುಪ್ತಕಾಲೀನ ವಾಙ್ಮಯದಲ್ಲಿ ಭಾರತೀಯ ಸಂಸ್ಕೃತಿಯ ಶುದ್ಧ ಸ್ವರೂಪವು ಪ್ರಕಟವಾಗಿದೆ.

**ಕಾಲಿದಾಸ**:—ಹೆಸರಾಂತ ಕವಿಕುಲಗುರು ಕಾಲಿದಾಸನು ಆ ಕಾಲದ ಪ್ರತೀಕವಾಗಿದ್ದಾನೆಂದರೆ ತಪ್ಪಲ್ಲ. ಇವನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದಿರಬಹುದು. ರಘುವಂಶ, ಮೇಘದೂತ, ಶಾಕುಂತಲಗಳು ಕಾಲಿದಾಸನ ಪ್ರಸಿದ್ಧ ಗ್ರಂಥಗಳು. ಇವುಗಳಲ್ಲಿ ಶಾಕುಂತಲವಂತೂ ಪ್ರಖ್ಯಾತ ಜರ್ಮನ್ ಪಂಡಿತನಾದ ಗಯಟೆಗೆ ಹುಚ್ಚು ಹಿಡಿಸಿದ ನಾಟಕ! ಇದರ ನಾಲ್ಕನೆಯ ಅಂಕದಲ್ಲಿ ಶಕುಂತಲೆ ಅತ್ತೆಮನೆಗೆ ಹೊರಡುವಾಗ ತನ್ನ ತಂದೆ ಕಣ್ವನ ಕಡೆ ಅಪ್ಪಣೆಗಾಗಿ ಹೋಗುತ್ತಾಳೆ. ಇಬ್ಬರ ಕೊರಳು ಬಿಗಿದು ಬಂದು ಬಾಯಿಂದ ಮಾತು ಹೊರಡುವುದಿಲ್ಲ. ಕೊನೆಗೆ ಕಣ್ವನು ಸಾವರಿಸಿಕೊಂಡು ಪ್ರೇಮಲವೂ ಅರ್ಥಪೂರ್ಣವೂ ಆದ ಸ್ವಲ್ಪ ಶಬ್ದಗಳಲ್ಲಿ ಅವಳನ್ನು ಬೀಳ್ಕೊಡುತ್ತಾನೆ. ಇದು ನಿತಾಂತ ಸುಂದರ ಪ್ರಸಂಗ; ಸಂಸ್ಕೃತ ಬಲ್ಲ ಪ್ರತಿಯೊಬ್ಬನೂ ಇದರ ಸವಿಯನ್ನು ಸವಿಯಲೇ ಬೇಕು. ಮನುಷ್ಯ ಸ್ವಭಾವದ ಮಾರ್ಮಿಕಚಿತ್ರ, ಸಮರ್ಪಕ ಉಪಮೆ, ಸೂಕ್ಷ್ಮ ಅವಲೋಕನ, ಪ್ರಸಾದ ಈ ಗುಣಗಳು ಕಾಲಿದಾಸನ ಗ್ರಂಥಗಳಲ್ಲಿ ಚೆನ್ನಾಗಿ ಒಡಮೂಡಿವೆ. ಜಗತ್ತಿನ ಉಚ್ಚವಾಙ್ಮಯದಲ್ಲಿ ಕಾಲಿದಾಸನ ಗ್ರಂಥಗಳಿಗೆ ಬಹು ಉಚ್ಚಸ್ಥಾನ ದೊರೆಯುವುದೆಂಬಲ್ಲಿ ಎಷ್ಟೂ ಸಂದೇಹವಿಲ್ಲ.

**ಕವಿಗಳು, ನಾಟಕಕಾರರು ಮತ್ತು ಶಾಸ್ತ್ರಜ್ಞರು**:— ಕಾಲಿದಾಸನಲ್ಲದೆ ಮುದ್ರಾರಾಕ್ಷಸ ನಾಟಕವನ್ನು ಬರೆದ ವಿಶಾಖದತ್ತಣ ಈ ಕಾಲದವನೇ. ಕವಿ, ನಾಟಕಕಾರ ಮೊದಲಾದವರು ಮಾತ್ರವಲ್ಲದೆ ಶಾಸ್ತ್ರೀಯ ಗ್ರಂಥಗಳ ಲೇಖಕರೂ ಈ ಕಾಲದಲ್ಲಿ ಆಗಿಹೋದರು. ಜ್ಯೋತಿಷಶಾಸ್ತ್ರದಲ್ಲಿ ಪಾರಂಗತನಾದ ಆರ್ಯಭಟ್ಟನು ಕ್ರಿ. ಶ. ೪೭೬ರಲ್ಲಿ ಪಾಟಲೀಪುತ್ರದಲ್ಲಿ ಹುಟ್ಟಿದನು. ಪೃಥ್ವಿ ತನ್ನ ಅಚ್ಚಿನ ಸುತ್ತ

ತಿರುಗುವುದೆಂದು ಈತನು ಮೊದಲು ಶೋಧಿಸಿದನು. ಗ್ರಹಣದ ಕಾರಣಗಳನ್ನು ಇವನ ಗ್ರಂಥದಲ್ಲಿ ಕಾಣಬಹುದು. ಇನ್ನೊಬ್ಬ ಗ್ರಂಥಕಾರ ವರಾಹಮಿಹಿರನು ಕ್ರಿ. ಶ. ೫೦೫ರಲ್ಲಿ ಉಜ್ಜಯಿನಿಯಲ್ಲಿ ಜನಿಸಿದನು. ಇವನ 'ಪಂಚಸಿದ್ಧಾಂತಿಕಾ' ಮತ್ತು 'ಬೃಹತ್ಸಂಹಿತಾ' ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಬೃಹತ್ಸಂಹಿತೆಯು ಪ್ರಾಚೀನ ಜ್ಞಾನಕೋಶವೇ ಆಗಿದೆ. ಬ್ರಹ್ಮಗುಪ್ತನೆಂಬ ಪ್ರಸಿದ್ಧ ಗಣಿತಜ್ಞನು ಸುಮಾರು ಕ್ರಿ. ಶ. ೬೨೮ರಲ್ಲಿದ್ದನು ವರ್ತುಲಾಂಕಿತ ಚೌಕೋನದ ಎದುರು ಬದುರಿನ ಕೋನಗಳ ಬೇರಿಜು ಎರಡು ಕಾಟಕೋನಗಳಿಗೆ ಸರಿಯಿರುತ್ತದೆಂಬ ಸಿದ್ಧಾಂತವನ್ನು ಇವನು ಶೋಧಿಸಿದನು. ಅಮರಕೋಶದ ಕರ್ತೃ ಅಮರಸಿಂಹನೂ ವೈದ್ಯಶಾಸ್ತ್ರ ನಿಪುಣ ಧನ್ವಂತರಿಯೂ ವಿಕ್ರಮಾದಿತ್ಯನ ನವರತ್ನಗಳಲ್ಲಿಬ್ಬರೆಂದು ಅನ್ನುತ್ತಾರೆ. ಗುಪ್ತ ಮತ್ತು ಹರ್ಷ ಕಾಲದ ಈ ಪ್ರಗತಿಯನ್ನು ಕಂಡರೆ ಇಂಗ್ಲಂಡಿನ ಇತಿಹಾಸದಲ್ಲಿಯ ಎಲಿಜಾಬೆಥ್ ಅಥವಾ ವಿಕ್ಟೋರಿಯಾ ರಾಣಿಯರ ಕಾಲದ ನೆನಪಾಗುತ್ತದೆ. ಹಿಂದುಸ್ತಾನದ ಇತಿಹಾಸದಲ್ಲಿಯ ಮುಂದಿನ ಯಾವುದೇ ಕಾಲವು ಇದರ ಮುಂದೆ ಸರ್ವಾಂಗೀಣ ಉನ್ನತಿಯ ದೃಷ್ಟಿಯಿಂದ ನಿಸ್ತೇಜವಾಗಿ ಕಾಣುವುದೆಂದು ಹೇಳಬಹುದು.

**ಮೂರ್ತಿಪೂಜೆ ಮತ್ತು ಭಕ್ತಿವರ್ಗ:—** ಬೌದ್ಧಿಕ ಪ್ರಗತಿಯನ್ನು ಸಮಾಲೋಚಿಸಿದ ಬಳಿಕ ಧಾರ್ಮಿಕ ಸ್ಥಿತ್ಯಂತರದತ್ತ ಕಣ್ಣು ಹಾಕುವುದು ಅಗತ್ಯ. ಇಂದು ಪ್ರಸಿದ್ಧವಾದ ವಾಯುಪುರಾಣ, ಪದ್ಮಪುರಾಣ ಇತ್ಯಾದಿ ೧೮ ಪುರಾಣಗಳಿಗೆ ಇಂದಿನ ಸ್ವರೂಪವು ಮುಖ್ಯವಾಗಿ ಗುಪ್ತ ಮತ್ತು ಹರ್ಷರ ಕಾಲದಲ್ಲಿಯೇ ಪ್ರಾಪ್ತವಾಯಿತೆಂದು ಹಿಂದೆ ಹೇಳಿಯೇ ಇದೆ. ಈ ಪುರಾಣಗಳಲ್ಲಿ ಬೇರೆ ಬೇರೆ ದೇವತೆಗಳ ಮಹತ್ವವನ್ನು ವರ್ಣಿಸಿದೆ. ವೇದಕಾಲದಲ್ಲಿ ಇಂದ್ರ, ವರುಣ ಮೊದಲಾದ ಸೃಷ್ಟಿದೇವತೆಗಳ ಪ್ರಾರ್ಥನೆ ನಡೆಯುತ್ತಿತ್ತು. ಈ ಕಾಲದಲ್ಲಿ ಅದು ಮೂರ್ತಿಪೂಜೆಯಲ್ಲಿ ರೂಪಾಂತರ ಹೊಂದಿತು. ನಿರಾಕಾರ ದೇವನ ಸ್ಥಾನಕ್ಕೆ ಸಾಕಾರ ದೇವನು ಬಂದನು. ವಿಷ್ಣು, ಶಂಕರ, ರಾಮಕೃಷ್ಣ ಅವತಾರಗಳ, ಹಾಗೆಯೆ ಗಣಪತಿ ಮಾರುತಿಗಳ ಪೂಜೆ ಆರಂಭವಾಯಿತು. ಮುಂದೆ ಮೂರ್ತಿಪೂಜೆಯ ಪ್ರಾಬಲ್ಯ ಹೆಚ್ಚಿ ಬೇರೆ ಬೇರೆ ದೇವತೆಗಳ ಭಾವಿಕ ಭಕ್ತರಲ್ಲಿ ವಾದ ಹುಟ್ಟಿಕೊಂಡಿತು, ಅದರಿಂದ ಸಮಾಜದಲ್ಲಿ ಜಗಳಗಳಾಗತೊಡಗಿದವು. ಪೂಜೆಯ ಮೂಲ ಉದ್ದೇಶವು ಲೋಪವಾಗಿ ಪೂಜೆಗಿಂತ ದೇವರ ಆಡಂಬರವೇ ಮಿಗಿಲಾಗುತ್ತ ಬಂದಿತು. ಈ ಭಾವಿಕ ಭಕ್ತರ ದೇವರು ಊಟ–ಉಡಿಗೆ ಮಾಡುತ್ತಿದ್ದ, ನಿದ್ರಿಸುತ್ತಿದ್ದ, ಇಷ್ಟೇ ಅಲ್ಲ, ಒಮ್ಮೊಮ್ಮೆ ಬೇನೆಬೀಳುತ್ತಿದ್ದ! ಇಂತಹ ಪದ್ಧತಿಯಿಂದ ದೇವರನ್ನು ಪೂಜಿಸುವ ಜನಸಮಾಜವು ದಿನದಿನಕ್ಕೆ ಮನದಿಂದ ಸಂಕುಚಿತವೂ ಬುದ್ಧಿಯಿಂದ ದುರ್ಬಲವೂ ಆಗತೊಡಗಿತು. ಇದೆಲ್ಲ ನಿಜವಿದ್ದರೂ ಮೂರ್ತಿಪೂಜೆಯನ್ನು ಆರಂಭಿಸಿದವರಿಗೆ ಈ ಬಗ್ಗೆ ದೋಷ ಹೊರಿಸಲು ಬರಲಾರದು. ಹಿಂದುಸ್ತಾನದಲ್ಲೆಲ್ಲ ಧರ್ಮದ ಪ್ರಸಾರವಾದುದರಿಂದ ಬಹುಪ್ರಾಚೀನ ಕಾಲದಲ್ಲಿ ಆರ್ಯರಿಗೆ ಸಮ್ಮತವಾದ ಧರ್ಮದ ಬುದ್ಧಿಗಮ್ಯ ಸ್ವರೂಪವು ಚಿರವಾಗಿ ಉಳಿಯುವುದು ಶಕ್ಯವಿರಲಿಲ್ಲ. ಬೌದ್ಧ ಧರ್ಮದ ಪ್ರಚಾರದಿಂದ ಆರ್ಯರ

ಮತ್ತು ಮಿಶ್ರಜಾತಿಯವರ ನಡುವಿನ ಉಚ್ಚ ನೀಚ ಭಾವವು ಕಡಿಮೆಯಾಗುತ್ತಲಿತ್ತು. ಈಗ ಮೂಲ ಧರ್ಮದಲ್ಲಿ ಹೆಚ್ಚುಕಡಿಮೆ ಮಾಡುವುದು ಅವಶ್ಯವಾಗಿತ್ತು. ಬುದ್ಧ ಪೂರ್ವ ಆರ್ಯಧರ್ಮ ಮತ್ತು ಬುದ್ಧೋತ್ತರ ಹಿಂದು ಧರ್ಮಗಳ ತಾತ್ವಿಕ ಸ್ವರೂಪ ವನ್ನು ಅಭಿನ್ನವಾಗಿಟ್ಟು, ಬಹುಜನ ಸಮಾಜಕ್ಕೆ ರುಚಿಸುವ ಮತ್ತು ಒಗ್ಗುವ ಭಕ್ತಿ ಮಾರ್ಗವನ್ನೂ ಮೂರ್ತಿಪೂಜೆಯನ್ನೂ ಧರ್ಮದಲ್ಲಿ ಸಮಾವಿಷ್ಟಗೊಳಿಸುವುದು ಅಗತ್ಯವಾಗಿತ್ತು. ಅಂತೆಯೇ, ದೇವಾಲಯಗಳನ್ನು ಸ್ಥಾಪಿಸುವುದೂ ಪವಿತ್ರ ಕ್ಷೇತ್ರ ಗಳನ್ನು ಸ್ಥಾಪಿಸಿ ತೀರ್ಥಯಾತ್ರೆಯ ಮಹತ್ವವನ್ನು ಹೆಚ್ಚಿಸುವುದೂ ಮೊದಲಾ ಯಿತು. ಭಕ್ತಿಮಾರ್ಗದ ಪ್ರಸಾರದಿಂದ ಯಜ್ಞಯಾಗಾದಿಗಳ ಮಹತ್ತ್ವವು ಕಡಿಮೆ ಯಾಗಿ ಅನನ್ಯ ಭಾವದ ಭಕ್ತಿಯಿಂದ ಯಾರಿಗೂ ಪರಮೇಶ್ವರಪ್ರಾಪ್ತಿಯಾಗುವು ದೆಂಬ ತತ್ವವು ರೂಢವಾಯಿತು ಇದರಿಂದ ಹಿಂದು ಧರ್ಮದ ಕೇವಲ ಬುದ್ಧಿಗಮ್ಯ, ಕ್ಲಿಷ್ಟ ಮತ್ತು ಕರ್ಮ ಸ್ವರೂಪವು ಪ್ರಾಪ್ತವಾಯಿತು. ಹಿಂದು ಧರ್ಮದಲ್ಲಿ ಈ ವ್ಯತ್ಯಾಸವಾದುದರಿಂದ ಬೌದ್ಧಧರ್ಮದ ಈ ಮೊದಲಿನ ಆಕರ್ಷತೆ ತಾನಾಗಿ ಕಡಿಮೆ ಯಾಯಿತು.

**ಸಂಸ್ಕೃತ ಶಿಷ್ಟಾಚಾರ:—** ಸ್ವತಂತ್ರ ರಾಷ್ಟ್ರಕ್ಕೆ ಒಪ್ಪುವಂತಹ ಶಿಷ್ಟಾ ಚಾರವು ಸಾಮಾನ್ಯ ಜನರಲ್ಲಿದ್ದಿತೆಂದು ಆಗಿನ ಸಂಸ್ಕೃತ ವಾಙ್ಮಯದಿಂದ ತೋರು ತ್ತದೆ. ದೇವರು, ಗುರು, ಹಿರಿಯರಿಗೆ, ಸಾಷ್ಟಾಂಗ ನಮಸ್ಕಾರ ಮಾಡಬೇಕು, ಅಧಿಕಾರಿಗಳಿಗೆ ಸ್ವಲ್ಪ ಬಾಗಿ ನಮಸ್ಕಾರ ಮಾಡಬೇಕು, ಸರಿಸಮಾನರಿಗೆ ಆದರ ದಿಂದ ವಂದಿಸಿ ಸ್ವಾಗತಿಸಬೇಕು. ಇದು ಆಗಿನ ನಡೆವಳಿಕೆಯಾಗಿತ್ತು. ದಿನಾಲು ಸ್ನಾನ, ಮಂತ್ರಪಠನ, ದೇವರ ಪೂಜೆ ಮಾಡುವುದು, ಬಂದ ಅತಿಥಿಗಳಿಗೆ ಆಸನ ವಿತ್ತು ಊಟವಾಗಿದೆಯೇ ನೀರಡಿಕೆಯುಂಟೋ ಎಂದು ಕೇಳುವುದು ರೂಢಿ ಯಾಗಿತ್ತು. ಹೊರಗಿಂದ ಬಂದೊಡನೆ ಕೈಕಾಲು ಮೋರೆ ತೊಳೆಯುವದು ವೈಯುಂಡ ಮಾತಾಗಿತ್ತು. ಚಾತುರ್ವರ್ಣ್ಯಗಳಿಗೆ ಮಾನ್ಯತೆಯಿತ್ತು. 'ಪರಧರ್ಮಿಯರ ಬಗ್ಗೆ ಅನಾದರ ಪಡದೆ ಸ್ನೇಹಭಾವದಿಂದ ಸಾಮಾನ್ಯರು ನಡೆಯುತ್ತಿದ್ದರೆಂದು ಫಾಹಿಏನನು ಇಲ್ಲಿಯ ಜನರನ್ನು ವರ್ಣಿಸಿದ್ದಾನೆ.

**ವ್ಯಾಪಾರ:—** ಈ ಕಾಲದಲ್ಲಿ ಸೌರಾಷ್ಟ್ರದಲ್ಲಿಯ ಖಂಬಾಯತ, ಘೋರ ಬಂದರ, ದ್ವಾರಕೆ ಇತ್ಯಾದಿ ಬಂದರಗಳು ಗುಪ್ತರಾಜರ ವಶದಲ್ಲಿದ್ದವು. ಆದುದ ರಿಂದ, ಸಮುದ್ರಮಾರ್ಗವಾಗಿ ಅರಬಸ್ತಾನ, ರೋಮ ಮೊದಲಾದ ದೇಶಗಳೊಡನೆ ಉತ್ತರ ಭಾರತದ ವ್ಯಾಪಾರವು ಬೆಳೆಯಿತು. ಐದುನೂರು ಜನರು ಪ್ರಯಾಣ ಮಾಡಬಹುದಾದಷ್ಟು ದೊಡ್ಡ ಹಡಗುಗಳನ್ನು ಕಟ್ಟುತ್ತಿದ್ದರು. ಒಳದೇಶದಲ್ಲಿ ದೂರ ದೂರದ ವರೆಗೆ ಮಾರ್ಗರನೆಚಯಾಗಿದ್ದರಿಂದ ಸಾಗಾಟ ಸಂಪರ್ಕವು ಸುಲಭ ವಾಗಿತ್ತು, ನದಿಗಳ ಮೂಲಕವೂ ಸಾಗಾಟ ನಡೆಯುತ್ತಿತ್ತು.

**ಔದ್ಯೋಗಿಕ ಸಂಘ:—** ದೇಶದಲ್ಲಿ ಉದ್ಯೋಗಧಂದೆಗಳು ಉತ್ಕರ್ಷ ಹೊಂದಿದ್ದವು. ಪ್ರತಿಯೊಂದು ಉದ್ಯೋಗದ ಸಂಘವಿರುತ್ತಿತ್ತು. ಸಂಘಕ್ಕೆ ಅಧ್ಯಕ್ಷ

ಕಾರ್ಯಕಾರಿ ಮಂಡಲಗಳು ಇರುತ್ತಿದ್ದವು. ಉದ್ಯೋಗಧಂದೆಯ ನಿಯಮಗಳನ್ನು ಅದು ನಿರ್ಧರಿಸುತ್ತಿತ್ತು. ಈ ಸಂಘಗಳು ಬ್ಯಾಂಕಿನಂತೆ ಇಡುಗಂಟುಗಳನ್ನು ಸ್ವೀಕರಿಸಿ ವ್ಯಾಪಾರಿಗಳಿಗೆ ಸಾಲ ಕೊಡುತ್ತಿತ್ತು ಎಂಬ ಬಗ್ಗೆ ಉಲ್ಲೇಖಗಳು ಸಿಕ್ಕುತ್ತವೆ. ಅವರು ಪ್ರಸಂಗವಿಶೇಷದಲ್ಲಿ ತಮ್ಮ ಸರಕುಗಳನ್ನು ತಮ್ಮ ಹೊಣೆಯಿಂದಲೇ ಸಾಗಿಸುತ್ತಿದ್ದರು. ಓಲೆಗಳನ್ನು ತರಿಸುವ–ಕಳಿಸುವ ಏರ್ಪಾಟೂ ಆ ಕಾಲದಲ್ಲಿದ್ದಿತು.

**ಕಲೆಗಳ ವಿಕಾಸ:—** ಗುಪ್ತ ಕಾಲದಲ್ಲಿ ಧಾತುಗಳಿಂದಲೂ ಕಲ್ಲುಗಳಿಂದಲೂ ಸುಂದರವಾದ ಮೂರ್ತಿಗಳನ್ನು ಮಾಡುತ್ತಿದ್ದರು. ೮೦ ಅಡಿ ಎತ್ತರವಾದ ತಾಮ್ರದ ಪ್ರೇಕ್ಷಣೀಯವಾದ ಬುದ್ಧ ಮೂರ್ತಿಯನ್ನು ನಾಲಂದದಲ್ಲಿ ನಿಲ್ಲಿಸಲಾಗಿತ್ತು. ಶುದ್ಧ ಭಾರತೀಯ ಕಲೆಯ ಅನೇಕ ಕೃತಿಗಳು ಈ ಕಾಲದಲ್ಲಿ ಆದವು. ಅಜಂತಾ ಗುಹೆಗಳಲ್ಲಿಯ ಹತ್ತೊಂಬತ್ತನೆಯ ಗುಹೆ ಈ ಕಾಲದ್ದೆಂದು ತಜ್ಞರ ಅಭಿಪ್ರಾಯವಿದೆ. ಉದಯಗಿರಿಯಲ್ಲಿಯ ವರಾಹಮೂರ್ತಿ, ಭೇಲಸಾದಲ್ಲಿಯ ಗಂಗಾಮೂರ್ತಿ ಮೊದಲಾದವು ಇಂದಿಗೂ ಪ್ರೇಕ್ಷಣೀಯವಾಗಿವೆ. ಗುಪ್ತರ ನಾಣ್ಯಗಳ ಮೇಲಿನ ವೀಣಾಪಾಣಿ ಮೂರ್ತಿಯನ್ನು ನೋಡಿದರೆ ಸಂಗೀತಕಲೆಗೂ ಆಗ ಉತ್ತೇಜನವಿತ್ತೆಂದು ಎನಿಸುತ್ತದೆ.

ಮೇಲಿನ ಎಲ್ಲ ವರ್ಣನೆಗಳಿಂದ ಗುಪ್ತರ ಕಾಲವನ್ನು ಸುವರ್ಣಯುಗವೆಂದು ಕರೆಯುವುದೇಕೆಂಬುದು ಸಹಜವಾಗಿ ಹೊಳೆಯುವದು.

**ಸಮಾಲೋಚನ—** ಪರಾಕ್ರಮಿಯಾದ ರಾಜನು ಸಾಮ್ರಾಜ್ಯವನ್ನು ಸ್ಥಾಪಿಸುವದು, ಅವನು ಸತ್ತನೆಂದರೆ ಸಣ್ಣ ಸಣ್ಣ ರಾಜ್ಯಗಳು ಸ್ವತಂತ್ರವಾಗುವುದು— ಯುರೋಪದ ಇತಿಹಾಸದಲ್ಲಿ ಕಂಡುಬರುವ ಈ ಕ್ರಮ ಹಿಂದುಸ್ಥಾನದ ಇತಿಹಾಸದಲ್ಲಿಯೂ ಕಂಡುಬರುತ್ತದೆ ಆದರೆ ಆ ಕಾಲದಲ್ಲಿ ಇಡೀ ಯುರೋಪದಲ್ಲಿಯ ಗಲಭೆಯೆಬ್ಬಿಸಿದ ಹೂಣರ ದಾಳಿಗಳನ್ನು ಇಲ್ಲಿ ಒಕ್ಕಟ್ಟಿನಿಂದ ಹಣಿದು ಅಟ್ಟಲಾಯಿತೆಂಬುದನ್ನು ನೆನಪಿನಲ್ಲಿಡಬೇಕು. ಮುನ್ನೂರು ವರುಷಗಳ ಈ ಸುವರ್ಣಯುಗದಲ್ಲಿ ಅತಿ ಮಹತ್ವದ ಸಂಗತಿಗಳು ಜರುಗಿದವು. ಒಂದು ಸಾಮ್ರಾಜ್ಯದ ಸ್ಥಾಪನೆಯಾಯಿತು; ಹೂಣರ ದಾಳಿಗಳಿಂದ ಭಾರತದ ರಕ್ಷಣೆಯಾಯಿತು. ಕಾಲಿದಾಸನಂತಹ ಕವಿ-ನಾಟಕಕಾರರು ಹುಟ್ಟಿದರು; ಆರ್ಯಭಟ್ಟ, ವರಾಹಮಿಹಿರರಂತಹ ಪಂಡಿತರು ಆಗಿಹೋದರು. ಸಾಮಾನ್ಯ ಜನರಿಗೆ ಸುಲಭವಾಗುವಂತಹ ಸ್ವರೂಪವು ಅಂದು ಧರ್ಮಕ್ಕೆ ಪ್ರಾಪ್ತವಾಯಿತು; ಬೌದ್ಧಧರ್ಮವು ಹಿಂದೆ ಬಿದ್ದು, ಹಿಂದು ಧರ್ಮವು ಮುಂದೆ ಬಂದಿತು. ವ್ಯಾಪಾರವು ಅಭಿವೃದ್ಧಿಗೊಂಡು ಉದ್ಯೋಗ-ಧಂದೆಗಳ ಸಂಘಟನೆಯಾಯಿತು. ವಾಙ್ಮಯದಂತೆ ಮೂರ್ತಿಕಲೆಗೂ ಉತ್ತೇಜನ ದೊರೆಯಿತು. ಶಿಷ್ಟಾಚಾರದಲ್ಲಿಯೂ ನಮ್ಮ ರಾಷ್ಟ್ರವು ಹೆಸರಾಯಿತು.

ಇನ್ನು ಮುಂದಿನ ಕಾಲದಲ್ಲಿ ಬೌದ್ಧಧರ್ಮವು ಪೂರಾ ಬಿದ್ದುಹೋಗಿ, ಆದ್ಯ ಶಂಕರಾಚಾರ್ಯರು ಎಲ್ಲೆಡೆಯಲ್ಲಿ ವೈದಿಕ ಧರ್ಮವನ್ನು ಸ್ಥಾಪಿಸಿದರು. ಆದರೆ ರಾಜಕೀಯ ದೃಷ್ಟಿಯಿಂದ ನೋಡಲಾಗಿ ಏಳನೆಯ ಶತಕದಲ್ಲಿ ಹರ್ಷನ ಮೃತ್ಯುವಿನ ತರು

ವಾಯ ಎಷ್ಟೋ ಶತಕಗಳ ವರೆಗೆ ಹೇಳಿಕೊಳ್ಳುವಂತಹ ಸಾಮ್ರಾಜ್ಯ ಹುಟ್ಟಲಿಲ್ಲ. ಅನೇಕ ರಾಜ್ಯಗಳು ಎದ್ದವು, ಬಿದ್ದವು. ಅವರವರಲ್ಲಿ ಈರ್ಷ್ಯೆ, ಯುದ್ಧ ನಡೆದಿದ್ದವು. ಇದರಿಂದ ಭಾರತದ ವಾಯವ್ಯ ಸೀಮೆಯ ಆಚೆಯಿಂದ ಬಂದ ಮುಸಲ್ಮಾನರಿಗೆ ಇಲ್ಲಿ ತಮ್ಮ ವರ್ಚಸ್ಸನ್ನು ಸ್ಥಾಪಿಸುವುದು ಸಾಧ್ಯವಾಯಿತು. ರಾಜಕೀಯ ದೃಷ್ಟಿಯಿಂದ ವಿಚಾರ ಮಾಡಿದರೆ ಹರ್ಷನ ತರುವಾಯ ಭಾರತೀಯ ಇತಿಹಾಸದಲ್ಲಿ ಕೆಲವೊಂದು ಶೌರ್ಯದ ರೋಮಾಂಚಕಾರಿ ಪ್ರಸಂಗಗಳಿದ್ದರೂ ಒಟ್ಟಾರೆ ಇದು ಯಾದವಿಯಿಂದ ತುಂಬಿದ ಕಾಲವೆಂದು ಹೇಳಬೇಕಾಗುವುದು. ಇದು ಒಪ್ಪಬೇಕಾದ ಮಾತು.

## ಪ್ರಶ್ನೆ

೧. ಗುಪ್ತ ಕಾಲಕ್ಕೆ ಪ್ರಾಚೀನ ಹಿಂದುಸ್ಥಾನದ ಸುವರ್ಣಯುಗವೆಂದು ಏಕೆ ಎನ್ನುತ್ತಾರೆ?

೨. ಹಿಂದುಸ್ಥಾನದಲ್ಲಿ ಪ್ರಾಚೀನ ಕಾಲದಲ್ಲಿ ಆಗಿಹೋದ ಮೂವರು ಪ್ರಸಿದ್ಧ ಪಂಡಿತರನ್ನು ಮತ್ತು ಕವಿಗಳನ್ನು ಕುರಿತು ಬರೆಯಿರಿ.

೩. ಟಿಪ್ಪಣಿ ಬರೆಯಿರಿ: (೧) ಹಿಂದೀ ನೆಪೋಲಿಯನ್ ಸಮುದ್ರಗುಪ್ತ (೨) ಫಾಹಿಯಾನ (೩) ವಿಕ್ರಮಾದಿತ್ಯ (೪) ಕಾಲಿದಾಸ (೫) ಗುಪ್ತಕಾಲೀನ ರಾಜ್ಯವ್ಯವಸ್ಥೆ, ವಾಙ್ಮಯ ಮತ್ತು ಉದ್ಯೋಗವ್ಯವಸಾಯ.

## ಏಕಾದಶ ಖಂಡ

# ದಾನಶೂರ ಹರ್ಷವರ್ಧನ

**ಹರ್ಷನ ರಾಜ್ಯ:—** ಗುಪ್ತರ ಸಾಮ್ರಾಜ್ಯದ ತರುವಾಯ ಭಾರತದಲ್ಲಿ ಅಷ್ಟು ದೊಡ್ಡದಾದ ಸಾಮ್ರಾಜ್ಯವನ್ನು ಯಾರೂ ಕಟ್ಟಲಿಲ್ಲ. ಸಣ್ಣ ಸಣ್ಣ ರಾಜ್ಯಗಳೇ ಉದಯವಾಗತೊಡಗಿದವು. ಆದರೆ ಅವುಗಳಲ್ಲಿ ಠಾಣೇಶ್ವರದ ಹರ್ಷನ ರಾಜ್ಯವು ' ಸಾಮ್ರಾಜ್ಯ ' ವೆನಿಸುವಷ್ಟು ದೊಡ್ಡದಿತ್ತು. ಆತನ ಆಳಿಕೆಯ ಸಂಗತಿಗಳು ಎರಡು ಸ್ವತಂತ್ರ ಮತ್ತು ವಿಶ್ವಸನೀಯ ಸಾಧನಗಳಿಂದ ಚೆನ್ನಾಗಿ ತಿಳಿದು ಬರುತ್ತದೆ. ಅವನಲ್ಲಿ ಬಾಣಭಟ್ಟನೆಂಬ ವಿದ್ವಾನ್ ಪಂಡಿತನಿದ್ದನು. ' ಹರ್ಷಚರಿತ ' ವನ್ನು ಅವನು ಬರೆದಿದ್ದಾನೆ. ಈ ಗ್ರಂಥವು ಉಪಮಾಲಂಕಾರಗಳಿಂದ ತುಂಬಿದುದಾದರೂ ಅವುಗಳೊಳಗಿನ ಐತಿಹಾಸಿಕ ವಿಧಾನಗಳನ್ನು ಆಯ್ದುಕೊಳ್ಳಲು ತೊಂದರೆಯಾಗುವಂತಿಲ್ಲ. ಹಾಗೆಯೇ ' ಹ್ಯು ಎನ್‌ತ್ಸಂಗ್ ' ಅಥವಾ ' ಯುಆನ್ ಚ್ವಂಗ್, ಎಂಬ ಚೀನೀ ಬೌದ್ಧ ಯಾತ್ರಿಕನು ಕ್ರಿ. ಶ. ೬೨೯ ರಿಂದ ೬೪೫ ರ

ವರೆಗೆ ಹಿಂದುಸ್ತಾನದಲ್ಲಿ ಸಂಚರಿಸಿದನು. ಅವನು ಎಷ್ಟೋ ಕಾಲ ಹರ್ಷನ ಓಲಗದಲ್ಲಿದ್ದನು. ಅವನು ತನ್ನ ದೇಶಕ್ಕೆ ಮರಳಿದ ಬಳಿಕ ತನ್ನ ಪ್ರವಾಸ ವೃತ್ತಾಂತವನ್ನು ಬರೆದಿಟ್ಟಿದ್ದಾನೆ. ಇವೆರಡೂ ಸಾಧನಗಳು ಕೆಲಮಟ್ಟಿಗೆ ಒಂದಕ್ಕೊಂದು ಪೂರಕವಾಗಿವೆ. ಹರ್ಷಚರಿತದಿಂದ ರಾಜನ ವೈಯಕ್ತಿಕ ಚರಿತ್ರ, ಅರಮನೆಯಲ್ಲಿಯ ರೀತಿನಡತೆ ಮೊದಲಾದವು ತಿಳಿಯುತ್ತವೆ; ಹ್ಯು ಎನ್‌ತ್ಸಂಗನ ಪ್ರವಾಸ ವೃತ್ತಾಂತವು ಆ ಕಾಲದ ರಾಜಕೀಯ ಮತ್ತು ಧಾರ್ಮಿಕ ಆಂದೋಲನಗಳನ್ನು ತಿಳಿಯುವುದಕ್ಕೆ ಸಹಾಯಕವಾಗಿದೆ; ಇವುಗಳಲ್ಲದೆ ಹರ್ಷಕಾಲದ ಕಿರುಕುಳ ಶಿಲಾಲೇಖಗಳೂ ನಾಣ್ಯಗಳೂ ಉಪಲಬ್ಧವಿವೆ.

**ರಾಜ್ಯಪ್ರಾಪ್ತಿ :—** ಹರ್ಷವರ್ಧನನ ಮನೆತನವು ವೈಶ್ಯರದು, ಅವನ ತಂದೆಯಾದ ಪ್ರಭಾಕರ ವರ್ಧನನ ಕಾಲಾವಧಿ ಬಹುಶಃ ಕ್ರಿ. ವ. ೫೮೩ ರಿಂದ ೬೦೬ರ ವರೆಗೆ ಇರಬೇಕು. ಇವನ ಹೆಂಡತಿ ಯಶೋವತಿಯು ಪಶ್ಚಿಮ ಮಾಳವೆಯ ಯಶೋಧರ್ಮರಾಜನ ಮಗಳು. ಆಕೆಗೆ ರಾಜ್ಯವರ್ಧನ ಮತ್ತು ಹರ್ಷವರ್ಧನ ಎಂಬಿಬ್ಬರು ಪುತ್ರರೂ ರಾಜ್ಯಶ್ರೀ ಎಂಬ ಪುತ್ರಿಯೂ ಇದ್ದರು ರಾಜ್ಯಶ್ರೀಯನ್ನು ಕನೋಜದ ಮೌಖರಿ ರಾಜನಾದ ಗೃಹವರ್ಮನಿಗೆ ಕೊಟ್ಟಿತ್ತು. ರಾಜ್ಯವರ್ಧನನು ದೊಡ್ಡವನಾದ ಬಳಿಕ ಪ್ರಭಾಕರ ವರ್ಧನನು ಅವನನ್ನು ಹೂಣರ ಮೇಲೆ ದಂಡಯಾತ್ರೆಗೆ ಕಳುಹಿದನು. ಅವನೊಂದಿಗೆ ಹರ್ಷನೂ ಹೋದನು. ಆ ಮೇಲೆ ಪ್ರಭಾಕರ ವರ್ಧನನಿಗೆ ಜಡ್ಡಾಯಿತೆಂದು ಹರ್ಷನು ಲಗುಬಗೆಯಿಂದ ತಿರುಗಿಬಂದನು. ರ್‍ಯಾಜವರ್ಧನನೂ ಹೂಣರ ಪಾರುಪತ್ಯಮಾಡಿ ತಿರುಗಿ ಹೊರಟನು. ಆದರೆ ಅವನು ಬರುವುದರೊಳಗೆ ಪ್ರಭಾಕರವರ್ಧನನು ತೀರಿಕೊಂಡನು; ಯಶೋವತಿ ರಾಣಿ ಸತಿಹೋದಳು. ಆನಂತರ ರಾಜ್ಯವರ್ಧನನು ಪಟ್ಟವೇರಿದನು. ಇಷ್ಟರೊಳಗೆ, ಪೂರ್ವ ಮಾಳವೆಯ ದೇವಗುಪ್ತರಾಜನು ಕನೋಜವನ್ನು ಆಕ್ರಮಿಸಿ ಗೃಹವರ್ಮನನ್ನು ಕೊಂದು, ರಾಜ್ಯಶ್ರೀಯನ್ನು ಸೆರೆಯಲ್ಲಿಟ್ಟಿರುವನೆಂಬ ಸುದ್ದಿ ಬಂದಿತು. ಕೂಡಲೇ ರಾಜ್ಯವರ್ಧನನು ದೇವಗುಪ್ತನ ಮೇಲೆ ದಂಡೆತ್ತಿ ಹೋಗಿ ಅವನನ್ನು ಸೋಲಿಸಿದನು. ಆದರೆ ದುರ್ದೈವದಿಂದ, ಗೌಡದೇಶದ ಶಶಾಂಕರಾಜನು ವಿಶ್ವಾಸಘಾತಮಾಡಿ ರಾಜ್ಯವರ್ಧನನ ಕೊಲೆಗೈದನು. ಈ ಸುದ್ದಿ ಠಾಣೇಶ್ವರಕ್ಕೆ ತಲುಪುತ್ತಲೂ ಹಾಹಾಕಾರವೆದ್ದಿತು.

**ಠಾಣೇಶ್ವರ ಕನೋಜ ರಾಜ್ಯಗಳು ಒಂದಾದವು:—** ಒಂದರ ಮೇಲೊಂದರಂತೆ ಒದಗಿದ ಆಪತ್ತುಗಳಿಂದ ಹೌಹಾರಿದ ಹರ್ಷನು ರಾಜ್ಯವರ್ಧನನ ತರುವಾಯ ಪಟ್ಟವೇರಲು ಸಿದ್ಧನಾಗಲಿಲ್ಲ. ಆದರೆ ಹಾಗೆ ಮಾಡದೆ ಗತ್ಯಂತರವಿರಲಿಲ್ಲ. ಗೃಹವರ್ಮನ ಮರಣದಿಂದ ಕನೋಜ ಸಿಂಹಾಸನವೂ ಬರಿದಾಗಿತ್ತು; ಅದನ್ನು ಯಾರು ಏರಬೇಕೆಂಬ ಪ್ರಶ್ನೆ ಎದ್ದಿತು. ಆಗ ಕನೋಜದ ಮಂತ್ರಿಮಂಡಲದವರು ಆ ರಾಜ್ಯವನ್ನು ನಡೆಸುವುದಕ್ಕೆ ಹರ್ಷನನ್ನೇ ಕೇಳಿಕೊಂಡರು. ಅದನ್ನು ಹರ್ಷನು ಅತ್ಯಂತ ಅನಿಚ್ಛೆಯಿಂದಲೇ ಸ್ವೀಕರಿಸಿದನು. ಹೀಗೆ ಠಾಣೇಶ್ವರ್ಕಮತ್ತು ಕನೋಜ ರಾಜ್ಯಗಳು ಹರ್ಷನ ಅರಸುತನದಲ್ಲಿ ಒಂದಾದವು; ಅವನು ಕನೋಜದಲ್ಲಿಯೇ ಇರತೊಡಗಿದು.

ರಾಜ್ಯಶ್ರೀಯ ಶೋಧ— ಆದರೆ ಹರ್ಷನಿಗೆ ಸ್ವಸ್ಥವಾಗಿ ಕುಳ್ಳಿರುವುದು ಶಕ್ಯವಿರಲಿಲ್ಲ. ಗೌಡರಾಜನ ಸೇಡು ತೀರಿಸುವುದು ಮತ್ತು ರಾಜ್ಯಶ್ರೀಯನ್ನು ಮುಕ್ತ ಗೊಳಿಸುವುದು ಅವನ ಆವಶ್ಯಕ ಕರ್ತವ್ಯಗಳಾಗಿದ್ದವು. ಆದರೆ ಇದರೊಂದಿಗೆಯೇ ಶತ್ರುಗಳಿಗೆ ಚೆನ್ನಾಗಿ ಶಾಸನ ಮಾಡದೆ ರಾಜ್ಯಕ್ಕೆ ಉಪಟಳ ತಪ್ಪುವಂತಿರಲಿಲ್ಲ; ಅದಕ್ಕಾಗಿ ಅವನು ದಿಗ್ವಿಜಯಕ್ಕೆ ಹೊರಟನು. ದಾರಿಯಲ್ಲಿಯೇ, ರಾಜ್ಯಶ್ರೀಯು ಸೆರೆಮನೆಯಿಂದ ಪಾರಾಗಿ ವಿಂಧ್ಯಾದ್ರಿಯ ಅಡವಿಗೆ ಓಡಿಹೋಗಿರುವಳೆಂದು ಸುದ್ದಿ ಬಂದಿತು. ಆಗ ಹರ್ಷನು ದಿಗ್ವಿಜಯ ಹಾದಿಯನ್ನು ಬಿಟ್ಟು ಅವಳ ಶೋಧಕ್ಕೆ ಹೊರಡಬೇಕಾಯಿತು. ಅದಕ್ಕಾಗಿ ಅವನು ತನ್ನ ಅನುಯಾಯಿಗಳೊಡನೆ ವಿಂಧ್ಯದ ಅರಣ್ಯದಲ್ಲಿ ಅಲೆಯುತ್ತಿದ್ದಾಗ ದಿವಾಕರ ಮಿತ್ರನೆಂಬ ಬೌದ್ಧಸಾಧುವಿನ ಭೆಟ್ಟಿಯಾ ಯಿತು. ಅವನ ಸಹಾಯದಿಂದ ಹರ್ಷನು ರಾಜ್ಯಶ್ರೀಯನ್ನು ಹುಡುಕಿದನು. ತೀರ ಆಯತ್ತ ವೇಳೆಗೆ ಅವಳು ಸಿಕ್ಕಳು; ಎಂದರೆ ಆಗವಳು ಸತಿಹೋಗಲು ಸಿದ್ಧ ಳಾಗಿದ್ದಳು; ಸ್ವಲ್ಪ ತಡವಾಗಿದ್ದರೆ ಅವಳ ದರ್ಶನವೇ ಆಗುತ್ತಿರಲಿಲ್ಲ. ಹರ್ಷನು ಅವಳನ್ನು ಸಂತಯಿಸಿ, ಆಕೆ ಸತಿ ಹೋಗದಂತೆ ಮನವೊಲಿಸಿದನು. ಆದರೆ ಅವಳು ಸರ್ವಸಂಗ ಪರಿತ್ಯಾಗಮಾಡಿ ಬಿಕ್ಷುಣಿಯಾಗಿ ದಿವಾಕರ ಮಿತ್ರರೊಡನೆ ಇರುವುದಾಗಿ ನಿಶ್ಚಯಿಸಿದಳು. ಆಗ ಹರ್ಷನು, ' ಎರಡೂ ಮನೆತನಗಳ ಪುರುಷರನ್ನು ವಿಶ್ವಾಸ ಘಾತದಿಂದ ಕೊಂದ ಶತ್ರುಗಳನ್ನು ನಾಶಗೊಳಿಸದೆ ಸ್ವಸ್ಥವಾಗಿ ಕೂಡುವುದು ಸರಿ ಯಲ್ಲ; ಮೊದಲು ನಾವು ಆ ಕೆಲಸ ಮಾಡಬೇಕು. ಆ ಮೇಲೆ ನಾವಿಬ್ಬರೂ ಬೌದ್ಧ ಸಂಘವನ್ನು ಸೇರುವಾ, ಎಂದು ಅವಳ ಮನವೊಲಿಸಲು, ಅವಳು ತತ್ಕಾಲದಲ್ಲಿ ಭಿಕ್ಷುಣಿಯಾಗುವುದನ್ನು ತಡೆದಳು.

**ದಿಗ್ವಿಜಯ:—** ಇಷ್ಟಾದ ಮೇಲೆ ಹರ್ಷನು ದಿಗ್ವಿಜಯಕ್ಕೆ ಹೊರಟನು. ಇದ ರಲ್ಲಿ ಅವನು ಹೇಗೆಹೇಗೆ ವಿಜಯ ಸಂಪಾದಿಸಿದನೆಂಬುದನ್ನು ತಿಳಿಯಲು ಸಾಧನಗಳಿಲ್ಲ. ಅಲ್ಲದೆ ಆಗಿನ ಪದ್ಧತಿಯಂತೆ ಸೋತವರು ಗೆದ್ದವರ ಅಧಿರಾಜ್ಯವನ್ನು ಒಪ್ಪಿಕೊಂಡರೆ ಅವರ ರಾಜ್ಯಗಳು ವಿಲೀನವಾಗುತ್ತಿರಲಿಲ್ಲ. ಹಾಗೆಯೇ ರಾಜ್ಯದ ಗಡಿಯಲ್ಲಿಯ ಸ್ನೇಹಸಂಬಂಧವುಳ್ಳ ರಾಜರು ಮಧ್ಯವರ್ತಿ ರಾಜನ ಮಾಂಡಲಿಕರೇ ಇರಬೇಕೆಂಬ ನಿಯಮವಿದ್ದಿಲ್ಲ. ಆದುದರಿಂದ ಹರ್ಷನ ಸಾಮ್ರಾಜ್ಯದ ಮೇರೆಯನ್ನು ಸ್ಥೂಲವಾಗಿ ಮಾತ್ರ ಗುರುತಿಸಬಹುದು. ಆದರೆ, ಪ್ರಭಾಕರವರ್ಧನನು ತೀರಿದೊಡನೆ ಶತ್ರುಗಳು ನಾಲ್ಕೂಕಡೆ ತಲೆಯೆತ್ತಿದರೆಂಬುದು ಮಾತ್ರ ನಿಜ. ಹೂಣರು ಕಾದುತ್ತಿದ್ದರು. ಪೂರ್ವ-ಪಶ್ಚಿಮಗಳಲ್ಲಿಯ ಗೌಡ ಮತ್ತು ಮಾಳವೆಗಳ ರಾಜರೊಂದಾಗಿ ಕನೋಜವನ್ನು ನುಂಗಿದ್ದರು, ಠಾಣೇಶ್ವರವನ್ನು ನುಂಗುವ ಹವಣಿಕೆಯಲ್ಲಿದ್ದರು. ಇಂತಹ ಸಮಯ ದಲ್ಲಿ ಹರ್ಷನು ಒಬ್ಬರಹಿಂದೊಬ್ಬರಂತೆ ಎಲ್ಲ ಶತ್ರುಗಳನ್ನು ಸೋಲಿಸಿ, ಪಂಜಾಬ, ಸಿಂಧ, ವಲಭೀ, ( ಕಾಠೇವಾಡ ), ನೇಪಾಳ ಇತ್ಯಾದಿ ಪ್ರದೇಶಗಳಲ್ಲಿ ತನ್ನ ಪ್ರಭುತ್ವ ವನ್ನು ಸ್ಥಾಪಿಸಿದನು. ಅವನು ಗೌಡ ( ಬಂಗಾಲ ) ದ ರಾಜನಾದ ಶಶಾಂಕನನ್ನು ಪೂರ್ವಕ್ಕೆ ಹಿಂದೊತ್ತಿ ಅವನು ತಿರುಗಿ ಪಶ್ಚಿಮಕ್ಕೆ ಬರದಂತೆ ಮಾಡಿದನು. ಕಾಮ

ರೂಪ (ಆಸಾಮು)ದ ಕುಮಾರರಾಜನ ಮೈತ್ರಿಯನ್ನು ಸಂಪಾದಿಸಿ ವೈರಿಯಾದ ಶಶಾಂಕನ ಪ್ರಗತಿಯನ್ನು ಕುಗ್ಗಿಸಿದನು.

**ಪುಲಿಕೇಶಿಯೊಡನೆ ಯುದ್ಧ :—** ಹೀಗೆ ಇಡೀ ಉತ್ತರ ಹಿಂದುಸ್ಥಾನವನ್ನು ಆರೇ ವರುಷಗಳಲ್ಲಿ ಶತ್ರುರಹಿತವಾಗಿ ಮಾಡಿ ದಕ್ಷಿಣಕ್ಕೆ ಹೊರಳಿದನು. ಅಲ್ಲಿ ಮಾತ್ರ ಅವನ ವಿಜಯ ಪರಂಪರೆ ನಿಂತಿತು. ಬಾದಾಮಿಯ ಚಾಲುಕ್ಯರ ಎರಡನೆಯ ಪುಲಿಕೇಶಿ ಸ್ವಪರಾಕ್ರಮದಿಂದ ದಕ್ಷಿಣದಲ್ಲಿ ಅವನಿಗೆ ಸರಿಮಿಗಿಲಾದ ಸಾಮ್ರಾಜ್ಯ ವನ್ನು ಸ್ಥಾಪಿಸಿದ್ದನು. ಹರ್ಷನು ರೇವಾ (ನರ್ಮದಾ) ನದಿಯನ್ನು ದಾಟಿ ಅವನ ಮೇಲೆ ಸಾಗಿಹೋದಾಗ ಪುಲಿಕೇಶಿಯು ಅವನನ್ನು ಸೋಲಿಸಿ ಹಿಂದಕ್ಕಟ್ಟಿದನು. ಪುಲಿಕೇಶಿಯ ಸೈನಿಕರು ಅತ್ಯಂತ ಶೂರರಿದ್ದುದೇ ಅವನ ವಿಜಯಕ್ಕೆ ಕಾರಣ. ಮೇಲೆ ಹೇಳಿದ ಹ್ಯುಎನ್‌ತ್ಸಂಗನು ಬಾದಾಮಿಗೆ ಬೆಟ್ಟಿಯಿತ್ತು ಓಲಗಕ್ಕೂ ಹೋಗಿದ್ದನು. ಪುಲಿಕೇಶಿಯ ನಾಡಿನ ಜನರ ವಿಷವಾಗಿ ಅವನ ಉದ್ಗಾರಗಳು ವಾಚನೀಯವಾಗಿವೆ. ಈ ಜನರು ಉಪಕಾರ ಮಾಡಿದವರೊಡನೆ ಕೃತಜ್ಞತೆಯಿಂದ ನಡೆದು ಕೊಳ್ಳುವರು. ಆದರೆ ಹಗೆಗಳನ್ನು ನಾಶಗೊಳಿಸದೆ ಎಂದೂ ಬಿಡುವವರಲ್ಲ. ತಮಗೆ ಅಪಮಾನ ಮಾಡಿದವರ ಸೇಡನ್ನು ಜೀವದ ಪರಿವೆಯಿಲ್ಲದೆ ತೀರಿಸಿಕೊಳ್ಳುವರು. ಹಾಗೆಯೇ ದುಃಖಿತರಿಗೆ ಸಹಾಯ ಮಾಡುವಾಗ ತಮ್ಮ ಕಷ್ಟದ ಪರಿವೆಯೂ ಅವರಿ ಗಿರುವುದಿಲ್ಲ. ಇರಲಿ ಅಂತೂ ಆಗ ಹಿಂದುಸ್ಥಾನವು, ಹರ್ಷ ಮತ್ತು ಪುಲಿಕೇಶಿ ಎಂಬ ಉತ್ತರ ದಕ್ಷಿಣ ಭಾಗಗಳ ಚಕ್ರವರ್ತಿಗಳ ಅಧಿಪತ್ಯದಲ್ಲಿತ್ತೆಂದು ಹೇಳಲು ಅಡ್ಡಿ ಯಿಲ್ಲ. ಹೀಗೆ ಹರ್ಷನು ತನ್ನ ಆಳಿಕೆಯ ಆರಂಭದ ಆರು ವರ್ಷಗಳಲ್ಲಿ ದಿಗ್ವಿಜಯ ವನ್ನು ಮುಗಿಸಿ, ಒಂದು ಲಕ್ಷ ಸೈನಿಕರನ್ನು, ಅರವತ್ತು ಸಾವಿರ ಆನೆಗಳನ್ನು ಇಟ್ಟು ಕೊಂಡು ಇರತೊಡಗಿದನು. ಅವನ ಈ ಪ್ರಚಂಡ ಸೈನ್ಯ ಸಾಮರ್ಥ್ಯದ ಮೂಲಕ ರಾಜ್ಯದ ಮೇಲಾಗುವ ಕಿರುಕುಳ ದಾಳಿಗಳು ಅಡಗಿದವು ಮುಂದೆ ಅವನಿಗೆ ಅಷ್ಟೊಂದು ಯುದ್ಧದ ಅಗತ್ಯವೇ ಉಂಟಾಗಲಿಲ್ಲ.

**ಬೌದ್ಧಧರ್ಮಕ್ಕೆ ಉತ್ತೇಜನ:—** ಹರ್ಷನು ಇನ್ನು ಮುಂದಿನ ತನ್ನ ಆಯುಷ್ಯ ವನ್ನು ಹೆಚ್ಚಾಗಿ ಬೌದ್ಧಧರ್ಮದ ಪ್ರಸಾರದಲ್ಲಿ ಕಳೆದನು. ಅವನು ಮೊದಲಿ ನಿಂದಲೂ ಬೌದ್ಧಧರ್ಮೀಯನಲ್ಲವೆಂದು ತೋರುತ್ತದೆ. ಏಕೆಂದರೆ ದಿಗ್ವಿಜಯಕ್ಕೆ ಹೊರಡುವಾಗ ಅವನು 'ನೀಲಲೋಹಿತ' (ಶಂಕರ)ನನ್ನು ಭಕ್ತಿಯಿಂದ ಸ್ಮರಿಸಿದ ನೆಂದು ವರ್ಣನೆಯಿದೆ. ಪೂರ್ವ ವಯಸ್ಸಿನಲ್ಲಿಯೇ ವಿಪತ್ಪರಂಪರೆಯೊದಗಿದುದರಿಂದ ಅವನಲ್ಲಿ ವೈರಾಗ್ಯ ಹುಟ್ಟಿತು. ಮತ್ತು ದಿವಾಕರ ಮಿತ್ರನ ಸಹವಾಸದಿಂದ ಅವನ ಮನಸಿನಲ್ಲಿ ಬೌದ್ಧಧರ್ಮದ ಪ್ರೇರಣೆಯಾಗಿರಬೇಕು. ಚೀನೀಪ್ರವಾಸಿ ಹ್ಯುಎನ್‌ತ್ಸಂಗನು ಆ ಕಾಲದಲ್ಲಿ ಬುದ್ಧನ ಕರ್ಮಭೂಮಿಯ ದರ್ಶನಕ್ಕಾಗಿಯೂ ಹಳೆಯ ಬೌದ್ಧಗ್ರಂಥಗಳ ಜ್ಞಾನಸಂಪಾದನೆಗಾಗಿಯೂ ಹಿಂದುಸ್ಥಾನಕ್ಕೆ ಬಂದಿ ದ್ದನು. ಅವನು ಓಲಗಕ್ಕೆ ಬಂದಾಗ ಹರ್ಷನು ದೊಡ್ಡ ಪರಿಷತ್ತನ್ನು ಕನೋ ಜದಲ್ಲಿ ಕೂಡಿಸಿದನು. ಅಶೋಕನಂತೆಯೇ ಅವನೂ ತನ್ನ ರಾಜ್ಯದಲ್ಲಿ ಪ್ರಾಣಿ

ವರ್ಧೆಯನ್ನು ನಿಲ್ಲಿಸಿದನು. ಬೌದ್ಧಭಿಕ್ಷುಗಳಿಗಾಗಿ ಗಂಗಾತೀರದಲ್ಲಿ ವಿಹಾರವನ್ನು ಕಟ್ಟಿಸಿ, ಅಲ್ಲಲ್ಲಿ ನೂರಡಿ ಎತ್ತರದ ಸ್ತೂಪಗಳನ್ನು ನಿಲ್ಲಿಸಿದನು. ಪ್ರತಿವರ್ಷವೂ ಬೌದ್ಧಭಿಕ್ಷುಗಳು ಇಪ್ಪತ್ತೊಂದು ದಿನ ಒತ್ತಟ್ಟಿಗೆ ಸೇರಿ ವಿಚಾರ ವಿನಿಮಯ ಮಾಡ ಬೇಕೆಂದು ಅವಕ್ಕಾಗಿ ಅವನು ಎಲ್ಲ ಸೌಕರ್ಯಗಳನ್ನು ಒದಗಿಸುತ್ತಿದ್ದನು.

**ಹರ್ಷನ ದಾತೃತ್ವ:—**ಆದರೆ ಅವನು ಬೌದ್ಧೇತರ ಧರ್ಮಗಳನ್ನು ಕಡೆಗಣಿಸ ಲಿಲ್ಲ. ಐದು ವರ್ಷಗಳಿಗೊಮ್ಮೆ ಪ್ರಯಾಗದಲ್ಲಿ ದೊಡ್ಡ ಯಾತ್ರೆಯನ್ನು ಕೂಡಿಸಿ ದಾನಧರ್ಮ ಮಾಡುತ್ತಿದ್ದನು. ಆ ಸಮಾರಂಭವನ್ನಾರಂಭಿಸುವಾಗ ಬುದ್ಧನ ಮೂರ್ತಿಯೊಂದಿಗೆ ಆದಿತ್ಯ (ಸೂರ್ಯ) ಮತ್ತು ಈಶ್ವರ (ಶಿವ) ಮೂರ್ತಿಗಳ ಮೆರವಣಿಗೆಯನ್ನು ಮಾಡಿ ಅವುಗಳ ಸ್ಥಾಪನೆ ಮಾಡುತ್ತಿದ್ದನು. ಬೌದ್ಧ ಭಿಕ್ಷು ಗಳೊಡನೆ ಬ್ರಾಹ್ಮಣರಿಗೂ ಶ್ರವಣರಿಗೂ ನಿರ್ಗ್ರಂಥಿ ಜನರಿಗೂ ಅಷ್ಟೇ ಅಲ್ಲ ನಾಸ್ತಿಕ ರಿಗೂ ಅವನು ಉದಾರ ಹಸ್ತದಿಂದ ದಾನಮಾಡುತ್ತಿದ್ದನು. ಈ ಪ್ರಸಂಗದಲ್ಲಿ ಅವನು ತನ್ನ ಐದು ವರ್ಷಗಳ ಎಲ್ಲ ಸಿಲುಕನ್ನು ತೀರಿಸುತ್ತಿದ್ದನು. ಒಮ್ಮೆಯಂತೂ ಅವನು ಸರ್ವಸ್ವವನ್ನು ದಾನಮಾಡಿದ ಬಳಿಕ ಅವನಿಗೆ ಹೊದೆವುದಕ್ಕೆ ತನ್ನದೆಂಬ ವಸ್ತ್ರವೂ ಉಳಿಯಲಿಲ್ಲ. ಆಗ ಅವನು ತನ್ನ ತಂಗಿಯಿಂದ ಒಂದು ಕ್ಯಾವಿ ವಸ್ತ್ರ ವನ್ನು ಇಸಿದುಕೊಂಡನು! ಹೀಗೆ ನಿಷ್ಕಾಂಚನನಾಗುವುದರಲ್ಲಿ ಹರ್ಷನಿಗೆ ಅತ್ಯಾ ನಂದ. ತನ್ನ ಪರಾಕ್ರಮದಿಂದ ಸಾಮ್ರಾಜ್ಯ ವೈಭವವನ್ನು ಸಂಪಾದಿಸಿ, ಉದಾರ ಮನದಿಂದ ಅದನ್ನು ದಾನಗೈಯುವ ಹರ್ಷನಂತಹ ರಾಜನು ಜಗತ್ತಿನಲ್ಲಿ ಯಾವ ದೇಶದ ಇತಿಹಾಸದಲ್ಲಿ ಸಿಕ್ಕಾನು!

**ಏಳನೆಯ ಶತಕದಲ್ಲಿ ವಿದ್ಯೆಯ ಪ್ರಗತಿ:—** ಹರ್ಷನ ಕಾಲದಲ್ಲಿ ವಿದ್ಯೆ ಬಹಳ ಪ್ರಗತಿ ಹೊಂದಿತ್ತು. ಹ್ಯುಎನ್‌ತ್ಸಂಗನಂತಹ ವಿದೇಶಿಯರು ವಿದ್ಯಾರ್ಜನೆ ಗಾಗಿ ಇಲ್ಲಿಗೆ ಬರುತ್ತಿದ್ದರು ವಿದ್ಯೆಯ ಉತ್ತೇಜನೆಗಾಗಿ ಹರ್ಷನು ಉತ್ಪನ್ನದ ಕಾಲುಪಾಲನ್ನು ತೆಗೆದಿಡುತ್ತಿದ್ದನು. ಇಂದಿನ ಸುಧಾರಿಸಿದ ರಾಷ್ಟ್ರಗಳೂ ವಿದ್ಯೆ ಗಾಗಿ ಇಷ್ಟು ವ್ಯಯಮಾಡಲು ಶಕ್ತವಾಗಿಲ್ಲ. ಬುದ್ಧಿವಂತರಲ್ಲಿ ಸಂನ್ಯಸ್ತವೃತ್ತಿ ಯಿಂದ ಜೀವಿಸುವುದು ಸಾಮಾನ್ಯವಾಗಿತ್ತು; ಅವರು ಅಧ್ಯಯನ ಅಧ್ಯಾಪನಾದಿ ಕಾರ್ಯಗಳಲ್ಲಿ ಹೆಚ್ಚಾಗಿ ಕಾಲ ಕಳೆಯುತ್ತಿದ್ದರು. ಆಗಿನ ರಾಜರು ತಮ್ಮ ಆಸ್ಥಾನ ದಲ್ಲಿ ಪಂಡಿತರಿಗೆ ಆಶ್ರಯ ಕೊಡುವುದನ್ನು ಭೂಷಣವೆಂದು ತಿಳಿಯುತ್ತಿದ್ದರು. ಹರ್ಷನ ಆಶ್ರಯದಲ್ಲಿ ಬಾಣಭಟ್ಟ, ಹರದತ್ತ, ಜಯಸೇನ ಮೊದಲಾದ ವಿದ್ವಾಂಸ ರಿದ್ದರು. ಬಾಣಭಟ್ಟನು ಉಪಮಾ ಅಲಂಕಾರದಿಂದಲೂ ದೊಡ್ಡ ದೊಡ್ಡ ಸಂಸ್ಕೃತ ಸಮಾಸಗಳಿಂದಲೂ ತುಂಬಿದ 'ಕಾದಂಬರಿ' ಎಂಬ ಹೆಸರಿನ ಗ್ರಂಥವನ್ನು ಬರೆ ದಿದ್ದಾನೆ; ಇದು ಗದ್ಯದಲ್ಲಿದ್ದರೂ ಕಾವ್ಯವೆನಿಸಿಕೊಂಡಿದೆ. ಒಮ್ಮೆ ಜಯಸೇನನ ವಿದ್ವತ್ತಿಗೆ ಮೆಚ್ಚಿ ಹರ್ಷನು ಓರಿಸಾ ಪ್ರಾಂತದಲ್ಲಿಯ ಎಂಬತ್ತು ಗ್ರಾಮಗಳನ್ನು ಅವನಿಗೆ ಇನಾಮಾಗಿ ಕೊಟ್ಟನು. ಆದರೆ, ಆ ನಿಃಸ್ವಾರ್ಥಿ ಪಂಡಿತನು ಆ ದಾನ ವನ್ನು ಹಿಡಿಯಲಿಲ್ಲ. ಹರ್ಷನೂ ಸಂಸ್ಕೃತ ಪಂಡಿತ. 'ನಾಗಾನಂದ' ಎಂಬ

ಅವನ ನಾಟಕ ಪ್ರಸಿದ್ಧವಿದೆ. ಅಲ್ಲದೆ 'ರತ್ನಾವಲಿ' ಮತ್ತು 'ಪ್ರಿಯದರ್ಶಿಕಾ' ಎಂಬೆರಡು ಗ್ರಂಥಗಳೂ ಅವನವೇ ಇರಬಹುದು. 'ದಶಕುಮಾರ ಚರಿತ್ರೆ' ಯನ್ನು ಬರೆದ ದಂಡಿಯೂ ನೀತಿ–ವೈರಾಗ್ಯ–ಶೃಂಗಾರ ಶತಕಗಳನ್ನು ಬರೆದ ಭರ್ತೃಹರಿಯೂ ಈ ಶತಮಾನದವರೇ. ಇನ್ನು ಮುಂದಿನ ಕಾಲದಲ್ಲಿ, ಎಂದರೆ ಎಂಟನೆಯ ಶತಕದಲ್ಲಿ ಭವಭೂತಿಯೆಂಬ ಸಂಸ್ಕೃತ ನಾಟಕಕಾರನು ಆಗಿಹೋದನು. ಅವನ 'ಉತ್ತರ ರಾಮಚರಿತಮ್' ಎಂಬ ನಾಟಕವು ಸುಪ್ರಸಿದ್ಧವಿದೆ. ಕನೋಜದ ಯಶೋವರ್ಮ ರಾಜನ ಆಶ್ರಯದಲ್ಲಿ ಅವನಿದ್ದನು.

**ನಾಲಂದಾ ವಿದ್ಯಾಪೀಠ**— ಹರ್ಷನ ಕಾಲದಲ್ಲಿ ಈ ವಿದ್ಯಾಪೀಠವು ಅತಿ ಪ್ರಸಿದ್ಧವಾಗಿತ್ತು. ಯುಅನ್ ಚ್ವಂಗನು ಕೆಲಕಾಲ ಅಭ್ಯಾಸಕ್ಕಾಗಿ ಇಲ್ಲಿದ್ದನು. ಈ ವಿದ್ಯಾಪೀಠದ ಬಗ್ಗೆ ವಿಶೇಷ ವಿವರವಾದ ಸಂಗತಿಗಳು ದೊರೆಯುತ್ತವೆ. ಹರ್ಷನ ಉದಯಕ್ಕಿಂತ ಮೊದಲು, ಐದನೆಯ ಶತಕದಿಂದಲೂ ಈ ವಿದ್ಯಾಪೀಠವು ಭರದಿಂದ ನಡೆದು ಬಂದಿತ್ತು. ದಿನ್ನಾಗ ಎಂಬ ಬೌದ್ಧ ಭಿಕ್ಷು ಸುದುರ್ಜಯನೆಂಬ ವೇದ



ವಿದ್ಯಾ ಪಾರಂಗತನೊಡನೆ ವಾದಿಸುವುದಕ್ಕಾಗಿ ನಾಲಂದಕ್ಕೆ ಬಂದನು. ಅವನು ಆ ಪಂಡಿತನನ್ನು ವಾದದಲ್ಲಿ ಗೆದ್ದನು. ಫಾಹಿಏನನೆಂಬ ಪ್ರವಾಸಿ ಈ ವಿದ್ಯಾಪೀಠವನ್ನು ಪ್ರಾಮುಖ್ಯವಾಗಿ ಉಲ್ಲೇಖಿಸಿಲ್ಲ; ಅದಕ್ಕೆ ಕಾರಣವೆಂದರೆ ಆ ಕಾಲದಲ್ಲಿ ಇದು ಬ್ರಹ್ಮವಿದ್ಯೆಯ ಕೇಂದ್ರವಾಗಿದ್ದಿರಬಹುದು. ಮುಂದಿನ ಕಾಲದಲ್ಲಿ ಇದು ಬೌದ್ಧವಿದ್ಯೆಯ ಕೇಂದ್ರವಾಗಿ ಮಾರ್ಪಡುತ್ತ ಬಂದಿತು. ನಾಲಂದವು ಬುದ್ಧಶಿಷ್ಯ

ಸಾರಿಪುತ್ರನ ಜನ್ಮ ಸ್ಥಾನವು. ಇಲ್ಲಿಯ ವಿದ್ಯಾಪೀಠಕ್ಕಾಗಿ ಐನೂರು ವ್ಯಾಪಾರಿಗಳು ಹತ್ತು ಕೋಟಿ ನಾಣ್ಯಗಳನ್ನು ಕೊಟ್ಟು ಭೂಮಿಯನ್ನು ಕೊಂಡರು. ಅಲ್ಲಿ ಒಟ್ಟು ಆರು ವಿದ್ಯಾಲಯಗಳು ನಡೆದಿದ್ದವೆಂಬು ತಿಳಿಯುತ್ತದೆ. ವಿದ್ಯಾಪೀಠದ ಸುತ್ತುಮುತ್ತಲು ಗೋಡೆಯಿದ್ದು ಒಂದು ಪ್ರವೇಶದ್ವಾರವಿತ್ತು. ಇತ್ತೀಚೆಗೆ ನಡೆದ ಅಗೆತದಲ್ಲಿ ಈ ವಿದ್ಯಾಪೀಠದ ವಸ್ತುಗಳ ಜೀರ್ಣ ಅವಶೇಷಗಳು ದೊರೆತಿವೆ. ವಿದ್ಯಾಪೀಠದ ಉತ್ತರ ದಿಕ್ಕಿನ ಗೋಡೆ ೨೩ ಫೂಟು ಉದ್ದವೂ ೬|| ಫೂಟು ದಪ್ಪವೂ ಇತ್ತು; ಇನ್ನೊಂದು ೧೬೮ ಫೂಟು ಉದ್ದ ೭|| ಫೂಟು ದಪ್ಪ ಇದ್ದಿತು.

**ಶಿಕ್ಷಣ ವ್ಯವಸ್ಥೆ:—** ಈ ವಿದ್ಯಾಪೀಠದಲ್ಲಿ ಹತ್ತು ಸಾವಿರ ವಿದ್ಯಾರ್ಥಿಗಳು ಓದುತ್ತಿದ್ದರು. ಅವರಿಗೆ ಅನ್ನ, ವಸ್ತ್ರ, ವಸತಿ, ಔಷಧಗಳನ್ನು ಉಚಿತವಾಗಿ ಒದಗಿಸುವ ಏರ್ಪಾಡಿತ್ತು. ಒಟ್ಟು ೧೫೧೦ ಉಪಾಧ್ಯಾಯರು ಅಲ್ಲಿದ್ದರು. ಪ್ರತಿದಿನವೂ ಬೇರೆ ಬೇರೆ ನೂರು ವಿಷಯಗಳನ್ನು ಕುರಿತು ಪ್ರವಚನಗಳಾಗುತ್ತಿದ್ದವು. ಶೀಲಭದ್ರ ಎಂಬವನು ಕೆಲಕಾಲ ಈ ವಿದ್ಯಾಲಯದ ಕುಲಗುರುವಾಗಿದ್ದನು. ಆಗಿನ ಕಾಲದಲ್ಲಿ ನಾಲಂದವು ಅಂತರರಾಷ್ಟ್ರೀಯ ವಿದ್ಯಾಕೇಂದ್ರವಾಗಿತ್ತು. ಮಧ್ಯಆಶಿಯಾ ಚೀನ, ಕೋರಿಯಾ, ಮೊದಲಾದ ದೂರದೂರದ ದೇಶಗಳಿಂದ ಬೌದ್ಧಧರ್ಮದ ಅಭ್ಯಾಸಕ್ಕಾಗಿ ವಿದ್ಯಾರ್ಥಿಗಳು ಅಲ್ಲಿಗೆ ಬರುತ್ತಿದ್ದರು; ಇಲ್ಲಿಂದ ಹೋಗಿ ತಮ್ಮ ದೇಶದಲ್ಲಿ ಅದರ ಪ್ರಚಾರಮಾಡುತ್ತಿದ್ದರು. ಬೌದ್ಧಧರ್ಮದ ಅಭ್ಯಾಸವಲ್ಲದೆ, ವೇದವಿದ್ಯೆ, ಹೇತುವಿದ್ಯೆ, (ತರ್ಕಶಾಸ್ತ್ರ), ಶಬ್ದವಿದ್ಯೆ, ಸಾಂಖ್ಯ ಯೋಗ ನ್ಯಾಯ ಇತ್ಯಾದಿ ಶಾಸ್ತ್ರಗಳು ಹೀಗೆ ಆ ವಿದ್ಯಾಮಂದಿರದಲ್ಲಿ ವಿವಿಧ ಭಾಗಗಳಿದ್ದವು. ವಿದ್ಯಾರ್ಥಿಗಳಿಗೆ ತಮತಮಗೆ ಬೇಕಾದ ವಿಷಯದಲ್ಲಿ ಪ್ರಾವಿಣ್ಯ ಪಡೆಯುವುದಕ್ಕೆ ಆಸ್ಪದವಿತ್ತು. ಇಲ್ಲಿ ಪ್ರವೇಶ ದೊರೆಯುವುದಕ್ಕಾಗಿ ಕೊಡಬೇಕಾದ ಪರೀಕ್ಷೆ ಕಠಿನತರವಾಗಿತ್ತು. ಅದರಲ್ಲಿ ಉತ್ತೀರ್ಣರಾಗುವರ ಸಂಖ್ಯೆ ೧೦೦ಕ್ಕೆ ೨೦ ಮಾತ್ರ! ಹೀಗಿದ್ದೂ ಅಲ್ಲಿಯ ವಿದ್ಯಾರ್ಥಿ ಸಂಖ್ಯೆ ೧೦ ಸಾವಿರವಿತ್ತೆಂಬುದನ್ನು ಮರೆಯಲಾಗದು. ನಾಲಂದದ ವಿದ್ಯಾರ್ಥಿಗಳು ಸಿಂಹಳ ತಿಬೇಟ, ಚೀನ ಮೊದಲಾದ ದೇಶಗಳಲ್ಲಿ ಬೌದ್ಧಧರ್ಮದ ಪ್ರಚಾರ ಮಾಡಿದರು. ನಾಲಂದದಲ್ಲಿ ಧೀಮನನೆಂಬ ಶಿಲ್ಪಕಾರನಿದ್ದನು; ಇಲ್ಲಿಯ ಕಟ್ಟಡಗಳಲ್ಲಿ ಅವನ ಕಲಾಕೌಶಲ ಕಂಡುಬರುತ್ತದೆ. ಇದೇ ಕಲೆಯ ಪ್ರಭಾವವು ಮುಂದೆ ಜಾವಾದ್ವೀಪದಲ್ಲಿಯ ಕಟ್ಟಡಗಳ ಮೇಲೂ ಚಿತ್ರಗಳ ಮೇಲೂ ಬಿದ್ದಿದೆ.

**ರಾಜಾಶ್ರಯ ಮತ್ತು ಲೋಕಾಶ್ರಯ:—**ನಾಲಂದ ವಿದ್ಯಾಪೀಠದ ವೆಚ್ಚಕ್ಕಾಗಿ ಎರಡುನೂರು ಹಳ್ಳಿಗಳ ಉತ್ಪನ್ನವನ್ನು ಕೊಡಲಾಗಿತ್ತು. ಅಕ್ಕಿ, ಬೆಣ್ಣೆ, ಹಾಲು ಮೊದಲಾದ ಸಾಮಾನುಗಳ ಪೂರೈಕೆ ಆ ಹಳ್ಳಿಗಳಿಂದ ಆಗುತ್ತಿತ್ತು. ಪೂರ್ಣವರ್ಮ ರಾಜನು ಎಂಬತ್ತು ಅಡಿ ಎತ್ತರ ತಾಮ್ರದ ಬುದ್ಧ ಮೂರ್ತಿಯನ್ನು ಈ ವಿದ್ಯಾಪೀಠಕ್ಕೆ ದಾನವಾಗಿ ಕೊಟ್ಟನು. ಬಂಗಾಲದ ಪಾಲರಾಜರಿಂದಲೂ ಇದಕ್ಕೆ ಸಹಾಯ ಸಲ್ಲುತ್ತಿದ್ದ ಬಗ್ಗೆ ಉಲ್ಲೇಖಗಳಿವೆ. ಈ ವಿದ್ಯಾಪೀಠಗಳು ಸುಮಾರು ೮೦೦ ವರುಷ ನಡೆದಿದ್ದವು. ಕೊನೆಗೆ ಹದಿಮೂರನೆಯ ಶತಕದಲ್ಲಿ ಬಖ್ತಿಯಾರ

ಖಿಲ್ಜಿಯು ಅದನ್ನು ನಾಶಗೊಳಿಸಿದನು. ಯುರೋಪಕ್ಕೆ ಹೋದ ಮುಸಲ್ಮಾನರು ಅಲ್ಲಿಯ ಗ್ರೀಕ ಮತ್ತು ರೋಮನ್ ವಿದ್ಯೆಗಳನ್ನು ನಾಶಗೊಳಿಸಲಿಲ್ಲವಿಷ್ಟೇ ಅಲ್ಲ. ಕಠಿಣ ಪರಿಸ್ಥಿತಿಯಲ್ಲಿ ಅದನ್ನು ರಕ್ಷಿಸಿದರು. ಭಾರತದಲ್ಲಿ ಮಾತ್ರ ತದ್ವಿರುದ್ಧವಾಯಿತು. ಇದರಲ್ಲಿಯ ವಿರೋಧವೂ ಇದರ ದೂರಗಾಮಿ ಪರಿಣಾಮವೂ ವಾಚಕರಿಗೆ ಸಹಜವಾಗಿ ಕಂಡುಬರುವಂತಿದೆ.

**ಹರ್ಷನ ಆಡಳಿತ :—** ಬೇಟಿ, ಸೈನ್ಯ ನಿರೀಕ್ಷಣೆ, ಸರಕಾರಿ ತಪಾಸಣೆ, ತೀರ್ಥಯಾತ್ರೆ ಮೊದಲಾದವುಗಳ ನೆವದಿಂದ ಅವನು ಅಡ್ಡಾಡಿ ತನ್ನ ರಾಜ್ಯದ ಸೂಕ್ಷ್ಮ ನಿರೀಕ್ಷಣೆ ಮಾಡಿದ್ದನು. ಹರ್ಷಕಾಲೀನ ಮಂತ್ರಿಪರಿಷತ್ತು ಮಹತ್ತ್ವದ ಕಾರ್ಯಗಳನ್ನು ಹೊಣೆಯರಿತು ನೆರವೇರಿಸುತ್ತಿದ್ದಂತೆ ತೊರುತ್ತದೆ. ಏಕೆಂದರೆ ಕನೋಜದ ಸಿಂಹಾಸನವು ತೆರವಾದಾಗ ಹರ್ಷನೇ ಅದನ್ನೇರಬೇಕೆಂದು ಅಲ್ಲಿಯ ಮಂತ್ರಿಪರಿಷತ್ತೇ ತೀರ್ಮಾನಿಸಿತು. ಹಳೆಯ ಸರಕಾರಿ ಕಾಗದಪತ್ರಗಳು ವ್ಯವಸ್ಥಿತವಾಗಿ ಉಳಿಯಬೇಕೆಂದು ಹರ್ಷನು ಸ್ವತಂತ್ರ ದಪ್ತರಖಾತೆಯನ್ನು ತೆರೆದನು. ಕಾಲಾಳು, ಕುದುರೆದಳ, ರಥ, ಗಜ, ಹೀಗೆ ಚತುರಂಗ ಸೈನ್ಯ ಅವನಲ್ಲಿತ್ತು. ಹರ್ಷಕಾಲೀನ ಕಾಯಿದೆಗಳು ಕಡುತರವಾಗಿದ್ದವು; ಆದರೆ ಅದನ್ನು ಸೌಮ್ಯರೀತಿಯಿಂದ ರೂಢಿಸಲಾಗುತ್ತಿತು. ಇಷ್ಟಿದ್ದರೂ ಹರ್ಷನ ಕಾಲದಲ್ಲಿ ಸುಲಿಗೆ ಸೂರೆಗಳಾಗುತ್ತಿದ್ದವೆಂದು ಬಾಣಭಟ್ಟ ಮತ್ತು ಹ್ಯುಎನ್ತ್ಸಂಗನ ಬರೆಹಗಳಿಂದ ಕಂಡುಬರುತ್ತದೆ.

**ಸಾಮ್ರಾಜ್ಯದ ಅಸ್ತ :—**ಕ್ರಿ. ೬೪೭ ರಲ್ಲಿ ಹರ್ಷನು ತೀರಿಕೊಂಡನು. ಹರ್ಷನ ಮೃತ್ಯುವಿನ ಅನಂತರ ಅಲ್ಪಕಾಲದಲ್ಲಿ ಅವನ ರಾಜ್ಯವು ಅವನ ತಂಗಿಯ ವಂಶದವರ ಕೈಗೆ ಎಂದರೆ ವರ್ಮ ಮನೆತನದವರ ಕೈಗೆ ಹೋಯಿತು. ಆದರೆ ಸಾಮ್ರಾಜ್ಯವು ಬಾಳಲಿಲ್ಲ. ಅಲ್ಲಲ್ಲಿಯ ರಾಜರು ಸ್ವತಂತ್ರರಾಗತೊಡಗಿದರು. ಹರ್ಷನು ಬೌದ್ಧ ಧರ್ಮಕ್ಕೆ ಉತ್ತೇಜನವಿತ್ತ ಕೊನೆಯ ರಾಜನು. ಮುಂದಿನ ನೂರೈವತ್ತು ವರುಷಗಳಲ್ಲಿ ಬೌದ್ಧಧರ್ಮವು ಭಾರತದಲ್ಲಿ ಪೂರಾ ಮೂಲೆಗುಂಪಾಗಿ ವೈದಿಕಧರ್ಮದ ಸ್ಥಾಪನೆಯಾಯಿತು.

## ಪ್ರಶ್ನೆ

೧. ಹರ್ಷನ ದಿಗ್ವಿಜಯಗಳನ್ನು ವರ್ಣಿಸಿ, ರಾಜನೆಂಬ ದೃಷ್ಟಿಯಿಂದ ಅವನಲ್ಲಿದ್ದ ವೈಶಿಷ್ಟ್ಯಗಳನ್ನು ಹೇಳಿರಿ.

೨. ನಾಲಂದಾ ವಿದ್ಯಾಪೀಠವನ್ನು ಪರಿಚಯ ಮಾಡಿಕೊಡಿರಿ.

೩. ಪುಲಿಕೇಶಿಯ ಬಗ್ಗೆ ನಿಮಗೆ ಗೊತ್ತಿದ್ದದ್ದನ್ನು ವಾಕ್ಯಗಳಲ್ಲಿ ಬರೆಯಿರಿ.

## ದ್ವಾದಶ ಖಂಡ

# ಪ್ರಾಚೀನಕಾಲದ ಕೊನೆ

**ಕಾಲದ ಸ್ವರೂಪ**:— ಪ್ರಾಚೀನ ಭಾರತದ ಕೊನೆಯ ಕಾಲಖಂಡದಲ್ಲಿ— ಎಂದರೆ ಗುಪ್ತ ಸಾಮ್ರಾಜ್ಯ ಮತ್ತು ಸಮ್ರಾಟ್ ಹರ್ಷನ ನಂತರದ ಕಾಲದಲ್ಲಿ— ಎರಡು ಮಹತ್ವದ ಘಟನೆಗಳಾಗಿವೆ. ರಾಜಪುತರ ಚಿಕ್ಕದೊಡ್ಡ ರಾಜ್ಯಗಳ ಉದಯ ವೊಂದು; ಶ್ರೀಮಚ್ಛಂಕರಾಚಾರ್ಯರ ನೇತೃತ್ವದಲ್ಲಿ ವೈದಿಕ ಧರ್ಮದ ಪುನರು ತ್ಥಾನವಿನ್ನೊಂದು. ಶಂಕರಾಚಾರ್ಯರಂತಹ ಧರ್ಮಸ್ಥಾಪಕರು ಹಿಂದುಧರ್ಮದ ಬೀಜ ಬಿತ್ತಿದರು; ರಾಜಪುತರಂತಹ ಪ್ರಸಂಗದಲ್ಲಿ ಜೀವವನ್ನೂ ಲೆಕ್ಕಿಸದ ವೀರರು ಅದನ್ನು ರಕ್ಷಿಸಿದರು ಎಂತಲೇ ಹಿಂದುಧರ್ಮವು ಮುಸಲ್ಮಾನರ ಸಾವಿರ ವರುಷಗಳ ಆಘಾತಗಳಲ್ಲಿಯೂ ತಾಳಿ–ಬಾಳಿತೆಂದು ಹೇಳಲಡ್ಡಿಯಿಲ್ಲ. ಈ ಘಟನೆಗಳನ್ನು ಕುರಿತು ಇಲ್ಲಿ ವಿವೇಚಿಸಲಾಗುವುದು.

## ೧ ವೈದಿಕ ಧರ್ಮದ ಪುನರುಜ್ಜೀವನ

**ಶಂಕರಾಚಾರ್ಯ**:— ಕೇರಳ (ಮಲಬಾರ) ಪ್ರಾಂತದ ಪೂರ್ಣ ನದಿಯ ದಡದಲ್ಲಿದ್ದ ಕಾಲಟಿ ಗ್ರಾಮದಲ್ಲಿ ಕ್ರಿ. ವ. ೭೮೮ರಲ್ಲಿ ನಂಬುದಿ ಬ್ರಾಹ್ಮಣ ಕುಟುಂಬ ದಲ್ಲಿ ಶಂಕರಾಚಾರ್ಯರು ಜನ್ಮ ವೆತ್ತಿದರು. ಅವರಿಗೆ ಕೇವಲ ಮೂವ ತ್ತೆರಡು ವರುಷಗಳ ಆಯುಷ್ಯ ದೊರೆತ್ತಿತ್ತು. ಚಿಕ್ಕಂದಿನಲ್ಲಿಯೇ ತಂದೆ ತೀರಿಕೊಂಡನು; ತಾಯಿ ಆರ್ಯಾಂಬೆಯೇ ಅವರನ್ನು ಸಲಹಿ ದಳು. ಮುಂದೆ ಆಕೆ ಮಗನ ಮದುವೆ ವಿಚಾರ ಮಾಡತೊಡ ಗಲು, ಅದನ್ನು ನಿರಾಕರಿಸಿ ಹೇಗೋ ತಾಯಿಯ ಒಪ್ಪಿಗೆ ಪಡೆದು ಅವರು ಮನೆಯಿಂದ ಹೊರಬಿದ್ದು ಗುರು ವನ್ನು ಹುಡುಕತೊಡಗಿದರು. ಕೆಲ ದಿನಗಳ ತರುವಾಯ ವಿಂಧ್ಯಾದ್ರಿಯ ನೆರೆಯಲ್ಲಿ ಗೋವಿಂದ ಪೂಜ್ಯ ಪಾದಾಚಾರ್ಯರ ದರ್ಶನ ಅವರಿ ಗಾಯಿತು. ಅವರಿಂದ ಉಪದೇಶ ವನ್ನೂ ಸಂನ್ಯಾಸ ದೀಕ್ಷೆಯನ್ನೂ



ಶಂಕರಾಚಾರ್ಯ

ಪಡೆದರು. ಮುಂದೆ ಕೆಲ ವರುಷ ಅಧ್ಯಯನ ಮಾಡಿ ಕಾಶಿಗೆ ಹೋದರು. ಅಲ್ಲಿ ಅವರು ಪಂಡಿತರೊಡನೆ ವಾದಹೂಡಿ ಅವರನ್ನು ಗೆದ್ದು ತಮ್ಮ ವಿದ್ವತ್ತೆಯಿಂದ ಎಲ್ಲರನ್ನೂ ಚಕಿತಗೊಳಿಸಿದರು. ಇದರಿಂದ ಅವರ ಮಹತಿ ಬಹುವಾಗಿ ಹೆಚ್ಚಿತು. ಶೀಘ್ರದಲ್ಲಿಯೇ ಅವರು ಪ್ರಸ್ಥಾನತ್ರಯಿಗೆ* ತಮ್ಮ ಭಾಷ್ಯ ಬರೆದರು. ಅದೇ ಸುಪ್ರಸಿದ್ಧ ಶಂಕರಭಾಷ್ಯ. ಈ ಭಾಷ್ಯದಿಂದ ಹಳೆಯ ವೈದಿಕ ಸಂಸ್ಕೃತಿಯ ಪರಂಪರೆಯು ಪುನರುಜ್ಜೀವನವಾಗಿ, ಭಾರತೀಯ ಜೀವನದಲ್ಲಿಯ ಅದರ ಸೂತ್ರ ಅಖಂಡವಾಗಿ ಉಳಿಯಿತು. ಈ ಗ್ರಂಥವನ್ನು ಬರೆದ ಬಳಿಕ ಶಂಕರಾಚಾರ್ಯರು ಅಖಿಲ ಭಾರತದಲ್ಲಿ ಸಂಚರಿಸಿ, ಅಲ್ಲಲ್ಲಿಯ ಪಂಡಿತರನ್ನು ಜಯಿಸಿದರೂ ಆ ಸಮಯದಲ್ಲಿ ಕುಮಾರಿಲ ಭಟ್ಟನ ಶಿಷ್ಯನಾದ ಮಂಡನ ಮಿಶ್ರನೊಡನೆ ಅವರ ವಾದವಾಯಿತು. ಕರ್ಮಮಾರ್ಗ ಮತ್ತು ಸಂನ್ಯಾಸಮಾರ್ಗ ಇವುಗಳ ಪುರಸ್ಕರ್ತರವಾದವೇ ಇದಾಗಿತ್ತು. ಇದರಲ್ಲಿಯೂ ಶಂಕರಾಚಾರ್ಯರು ಗೆದ್ದರು. ಈ ವಾದದ ವಿಶೇಷವೆಂದರೆ. ಮಂಡನ ಮಿಶ್ರನ ಹೆಂಡತಿ ಸರಸ್ವತಿ ಇದರಲ್ಲಿ ಪಂಚಳಾಗಿದ್ದಳು. ಇದರಿಂದ ಆ ಕಾಲದ ಸ್ತ್ರೀಯರ ವಿದ್ವತ್ತೆಯ ಬಗ್ಗೆಯೂ ಸಾಮಾಜಿಕ ದರ್ಜೆಯ ಬಗ್ಗೆಯೂ ಊಹಿಸಬಹುದು. ಮುಂದೆ ಶಂಕರಾಚಾರ್ಯರು ಆಸಾಮು, ಉಜ್ಜಯಿನಿ, ಕಾ ಮೊದಲಾದ ಅನೇಕ ಸ್ಥಳಗಳನ್ನು ಸಂಚರಿಸಿ, ಅಲ್ಲಿಯ ಪಂಡಿತರನ್ನು ವಾದದಲ್ಲಿ ಗೆದ್ದು, ಝಂಝಾವಾತದಂತೆ ತಮ್ಮ ತತ್ವಜ್ಞಾನದ ಪ್ರಚಾರ ಮಾಡಿದರು. ಕಾಶ್ಮೀರದಲ್ಲಿ ಶಾರದಾಂಬಾ ದೇವಾಲಯವಿದೆ. ಜತ್ತಿನಲ್ಲಿಯ ಪಂಡಿತರನ್ನೆಲ್ಲ ಗೆದ್ದವರಿಂದ ಅದರ ಬಾಗಿಲು ತೆರೆಯುವದೆಂಬ ಆಖ್ಯಾಯಿಕೆಯಿತ್ತು. ಶಂಕರಾಚಾರ್ಯರು ಆದರ ಬಾಗಿಲನ್ನು ತೆರೆದರು. ಗ್ರಂಥಗಳನ್ನು ಬರೆದು, ಚದುರ್ದಿಕ್ಕುಗಳನ್ನು ಸಂಚರಿಸಿ ಪಂಡಿತರನ್ನು ಗೆದ್ದು, ತಮ್ಮ ಮತವನ್ನು ಸ್ಥಾಪಿಸಿದ ಬಳಿಕ ಶಂಕರಾಚಾರ್ಯರು ತಮ್ಮ ಕಾರ್ಯವು ಅಖಂಡವಾಗಿ ನಡೆಯಬೇಕೆಂದು ಭಾರತದ ನಾಲ್ಕೂ ಭಾಗಗಳಲ್ಲಿ—ಉತ್ತರದಲ್ಲಿ ಬದರೀಕೇದಾರ, ದಕ್ಷಿಣದಲ್ಲಿ ಶೃಂಗೇರಿ, ಪಶ್ಚಿಮದಲ್ಲಿ ದ್ವಾರಕೆ, ಪೂರ್ವದಲ್ಲಿ ಜಗನ್ನಾಥ ಪುರಿಗಳಲ್ಲಿ—ಶಾಂಕರ ತತ್ತ್ವಜ್ಞಾನದ ಪೀಠಗಳನ್ನು ಸ್ಥಾಪಿಸಿದರು. ಇಷ್ಟು ಚಿಕ್ಕವಯಸ್ಸಿನಲ್ಲಿ ಇಷ್ಟೊಂದು ವಿಧಾಯಕ ಕಾರ್ಯಗಳನ್ನು ಪೂರೈಸಿ ಕೇವಲ ೩೨ನೆಯ ವಯಸ್ಸಿನಲ್ಲಿ ಹಿಮಾಲಯದ ಬದರೀಕೇದಾರದ ಕಡೆ ಹೋದವರು ಮರಳಿ ಬರಲಿಲ್ಲ.

**ಶಂಕರಾಚಾರ್ಯರ ಕಾರ್ಯ** :— ಬೌದ್ಧಧರ್ಮವು ಮುಗಿದ ಬಳಿಕ, ಭರತಖಂಡದ ನಾಲ್ಕು ಮೂಲೆಗಳಲ್ಲಿಯೂ ವೈದಿಕಧರ್ಮದ ಪತಾಕೆ ನಟ್ಟ ಪುರುಷರು ಆದ್ಯಶಂಕರಾಚಾರ್ಯರು. ಅವರಂತಹ ವಾದನಿಪುಣರು, ಉದ್ಯೋಗಶೀಲರು, ಮತ್ತು ಬುದ್ಧಿವಂತರು ಇದುವರೆಗೆ ಆಗಿಲ್ಲವೆಂದರೆ ತಪ್ಪಲ್ಲ. ಅವರ ವಿಷಯದಲ್ಲಿ ಕೈ. ಚಿಂತಾಮಣರಾವ

* ಉಪನಿಷತ್ತುಗಳು, ಗೀತೆ ಮತ್ತು ವೇದಾಂತಸೂತ್ರಗಳು ಇವುಗಳಿಗೆ ' ಪ್ರಸ್ಥಾನತ್ರಯಿ ' ಎಂಬ ಹೆಸರು.


ಹಿಂದೂ ಮತ್ತು ಬೌದ್ಧಧರ್ಮಗಳ ಏರಿಳಿತ
ವೈದಿಕ ಮತ್ತು ಹಿಂದೂಧರ್ಮ
ಬೌದ್ಧಧರ್ಮ
ಪ್ರಮಾಣ–೧ ಇಂ.ಗೆ ೫೦೦ ವರ್ಷ
ಭಾರತವರ್ಷದಲ್ಲಿ ಧರ್ಮಪ್ರಸಾರ
ಗಂಗಾತೀರದಲ್ಲಿ ಆರ್ಯರ ಪ್ರಸಾರ
ಗೌತಮ ಬುದ್ಧ
ಸಿಕಂದರನ ದಾಳಿ
ಅಶೋಕ
ಕನಿಷ್ಕ
ಶ್ರೀಹರ್ಷ
ಶಂಕರಾಚಾ
ರಾಜಪುತ್ರರ ಉದಯ–ಹಿಂದೂಧರ್ಮಕ್ಕೆ ಉತ್ತೇಜನ
೨೦೦೦
೧೫೦೦
೧೦೦೦
೫೦೦ ← ಇ.ಸ.ಪೂ. ೦ ಇ.ಸ. → ೫೦೦

ವೈದ್ಯರ ಉದ್ಗಾರಗಳು ಚಿಂತನೀಯವಾಗಿವೆ. "ವೇದಾಧಾರಗಳಿಂದಲೇ ವೇದಾಂತ ಸೂತ್ರಗಳ ತಳಹದಿಯ ಮೇಲೆಯೇ ಅವರು ನವೀನ ತತ್ತ್ವಜ್ಞಾನವನ್ನು ಉಪದೇಶಿಸಿದರು. ಜನರಿಗೆ ಪ್ರಿಯವಾಗಿದ್ದ, ಸಂನ್ಯಾಸದ ಪುರಸ್ಕಾರ ಮತ್ತು ಅಗ್ನಿಹೋತ್ರದ ಬಗ್ಗೆ ಅನಾದರ ಇವುಗಳನ್ನೇ ಪ್ರತಿಪಾದಿಸಿದರು. ಶಿವ, ವಿಷ್ಣು, ದೇವಿ ಇವರ ಪೂಜೆಗೆ ಅಗ್ರಸ್ಥಾನವಿಲ್ಲದಿದ್ದರೂ ಅನುಮತಿಯಿತ್ತರು. ಹೀಗೆ ಒಂದು ರೀತಿಯಿಂದ ಶಂಕರಾಚಾರ್ಯರು ಬೌದ್ಧರ ಹಳೆಯ ವೃತ್ತಿಯ ಕಡೆಗೆ ಒಲಿದಿದ್ದ ಲೋಕಮತವನ್ನೇ ಎತ್ತಿಹಿಡಿದರು. ಆದರೆ ಬೌದ್ಧಮತದಂತೆ ಜನರಲ್ಲಿ ಉಂಟಾಗಿದ್ದ ವೇದಗಳ ವಿಷಯದಲ್ಲಿ ಅಪೂಜ್ಯತೆ ಮತ್ತು ವರ್ಣಾಶ್ರಮಧರ್ಮದ ವಿಷಯದಲ್ಲಿ ಅನಾದರ ಇವೆರಡನ್ನೂ ಹೊಡೆದು ಹಾಕಿದರು. ಸ್ವಲ್ಪದರಲ್ಲಿ ಹೇಳುವುದಾದರೆ, ಬೌದ್ಧಧರ್ಮದ ಅಹಿಂಸಾಮತದ ಜನಪ್ರಿಯತೆಯನ್ನು ಕಂಡು ಅದಕ್ಕೆ ಮನ್ನಣೆಯಿತ್ತು, ಕುಮಾರಿಲ ಭಟ್ಟನ ವೇದಪ್ರಾಮಾಣ್ಯ ತಳಹದಿಯ ಮೇಲೆ ಶಂಕರಾಚಾರ್ಯರು ಇಂದಿನ ಹಿಂದು ಧರ್ಮದ ವಿಸ್ತೃತ, ಮನೋಹರ ಮತ್ತು ಭವ್ಯ ಮಂದಿರವನ್ನು ಕಟ್ಟಿದರೆಂಬಲ್ಲಿ ಸಂದೇಹವಿಲ್ಲ.

**ಬೌದ್ಧಧರ್ಮದ ಲೋಪ** :— ಶಂಕರಾಚಾರ್ಯರ ಈ ಕಾರ್ಯದಿಂದ ಹಿಂದು ಧರ್ಮವು ಮುಂದಿನ ಸಾವಿರ ವರುಷಗಳ ಮುಸಲ್ಮಾನೀ ಧರ್ಮದ ಆಘಾತಗಳನ್ನು ಸಹಿಸಿತು. ಅಭಂಗವಾಗಿ ಉಳಿಯಿತು. ಬೌದ್ಧಧರ್ಮವು ಮಾತ್ರ ಹಿಂದುಸ್ಥಾನದಿಂದ ದೇಶತ್ಯಾಗಮಾಡಿದಂತೆಯೇ ಆಯಿತು. ಆದರೆ ಬೌದ್ಧಧರ್ಮವು ಅದೃಶ್ಯವಾಗುವುದಕ್ಕೆ ಅದರ ಸೋಲು ಕಾರಣವಲ್ಲ; ಅದರ ಅವತಾರಕಾರ್ಯ ಮುಗಿದಿತ್ತು. ಆಚಾರಗಳಲ್ಲಿಯ ಕೃತ್ರಿಮತೆ, ಸಾಮಾಜಿಕ ವಿಷಮತೆ ಮತ್ತು ಅಕಾರಣ ಹಿಂಸೆ ಇವುಗಳನ್ನು ಕಳೆಯುವುದಕ್ಕೆ ಬೌದ್ಧಧರ್ಮ ಹುಟ್ಟಿತು; ಶುದ್ಧಾಚರಣೆ ಮತ್ತು ಸಂನ್ಯಾಸ ಲೋಕಪ್ರಿಯವಾಗಬೇಕೆಂದು ಉದಯಿಸಿತು; ಧರ್ಮದ ಕ್ಲಿಷ್ಟ ಸ್ವರೂಪವಳಿದು ಅದಕ್ಕೆ ಜನಸುಲಭ ಸ್ವರೂಪವು ಬರುವುದಕ್ಕಾಗಿ ಅದು ಅವತರಿಸಿತು. ಕ್ರಿ. ಪೂ. ಐದನೆಯ ಶತಕದಿಂದ ಕ್ರಿ.ಶ. ೬—೭ ನೆಯ ಶತಕದವರೆಗೂ ಅದು ಆ ಕಾರ್ಯವನ್ನು ರಭಸದಿಂದ ಮಾಡಿತು. ಬೌದ್ಧಧರ್ಮದ ತಾಳಿ ಉಳಿಯುವಂತಹ ತತ್ತ್ವಗಳು ಸಮಾಜದಲ್ಲಿ ದೃಢಮೂಲವಾದವು. ಹೊಸದಾಗಿ ಬಂದ ವೈದಿಕ ಧರ್ಮವು ಅವುಗಳನ್ನು ಒಪ್ಪಿ ಮೈಗೂಡಿಸಿಕೊಂಡಿತು. ಹೀಗೆ ಬೌದ್ಧಧರ್ಮವು ಅಡಗಿ ಅದರ ತತ್ತ್ವಗಳು ಸಮಾಜದಲ್ಲಿ ಅಚಲವಾಗಿ ಉಳಿದವು. ಇನ್ನೊಂದು ಮಾತೆಂದರೆ, ಬೌದ್ಧಧರ್ಮದ ಅಹಿಂಸಾಬೋಧೆ ರಾಜಪುತ ಸ್ವಭಾವಕ್ಕೆ ಒಗ್ಗದ್ದರಿಂದ ಏಳನೆಯ ಶತಕದ ತರುವಾಯ ಅದರ ಪುರಸ್ಕರ್ತರು ಯಾರೂ ಉಳಿಯಲಿಲ್ಲ. ನಿರೀಶ್ವರವಾದೀ ಬೌದ್ಧಧರ್ಮಕ್ಕಿಂತ ಈಶ್ವರವಾದೀ ಧರ್ಮದ ಉಪದೇಶವು ಇಲ್ಲಿಯ ಜನಕ್ಕೆ ತಿಳಿಯುವಂತಹದೂ ಸೇರುವಂತಹದೂ ಆಗಿತ್ತು. ಕಾಲಾಂತರದಲ್ಲಿ ಬೌದ್ಧ ಭಿಕ್ಷು ಭಿಕ್ಷುಣಿಯರಿಗೆ ಐಶ್ವರ್ಯ ಮತ್ತು ವಿಷಯಗಳಲ್ಲಿ ಆಸಕ್ತಿ ಹುಟ್ಟಿ ಅವರ ಅನೈತಿಕ ಆಚರಣೆಯಿಂದಾಗಿ ಏಳನೆಯ ಶತಕದ ತರುವಾಯ ಬೌದ್ಧಧರ್ಮವು ಭಾರತದಲ್ಲಿ ಪೂರಾ ಮೂಲೆಗುಂಪಾಯಿತು.

## ಪ್ರಶ್ನೆ

೧. ಶಂಕರಾಚಾರ್ಯರ ಚರಿತ್ರೆಯನ್ನು ಹಿಂದು ಧರ್ಮದ ಬಗ್ಗೆ ಅವರ ಕಾರ್ಯವನ್ನು ಹೇಳಿರಿ.
೨. ಟಿಪ್ಪಣಿ ಬರೆಯಿರಿ (೧) ಮೀಮಾಂಸಕ (೨) 'ನಿರೀಶ್ವರವಾದೀ ಧರ್ಮ'.

## ೨. ರಾಜಪುತರ ಉದಯ.

**ರಾಜಪುತ-ಮುಸಲ್ಮಾನ ಜಗಳ:—** ಎಂಟನೆಯ ಶತಕದಿಂದ ಹದಿನೇಳನೆಯ ಶತಕದ ವರೆಗಿನ ೯೦೦ ವರುಷಗಳ ಭಾರತೀಯ ಇತಿಹಾಸದಲ್ಲಿ ರಾಜಪುತರು ಅತ್ಯಂತ ಚಿರಸ್ಮರಣೀಯ ಕಾರ್ಯ ಮಾಡಿದ್ದಾರೆ. ಇವರ ಉದಯವೂ ಹಿಂದುಸ್ತಾನದಲ್ಲಿ ಮುಸಲ್ಮಾನರ ಆಗಮನವೂ ಸುಮಾರು ಸಮಕಾಲೀನವಾಗಿವೆ. ಮುಸಲ್ಮಾನರು ಬಂದ ಬಂದಾಗೆಲ್ಲ ರಾಜಪುತರು ಅವರನ್ನೆದುರಿಸಿ ಕಾದಿದ್ದಾರೆ. ಈ ರಾಜಪುತ ಮುಸಲ್ಮಾನ ಕಲಹವು ೧೭ನೆಯ ಶತಕದ ವರೆಗೂ ನಾಗಿತು; ಮುಂದೆ ೧೮ನೆಯ ಶತಕದಲ್ಲಿ ಮರಾಠರು ಅದನ್ನು ಮುಂದುವರಿಸಿದರು. ಈ ಜಗಳದಲ್ಲಿ ಎಲ್ಲ ರಾಜಪುತರು ಕೊನೆಯುವರೆಗೂ ಯಶಸ್ವಿಯಾಗಲಿಲ್ಲ, ಸ್ವತಂತ್ರರಾಗಿ ಉಳಿಯಲಿಲ್ಲ ನಿಜ. ಆದರೆ ಅವರು ಜಿಗಟುತನದಿಂದಲೂ ಶೌರ್ಯದಿಂದಲೂ ದಾಳಿಗಳನ್ನು ಎದುರಿಸಿದರು; ತಮ್ಮ ಧಾರ್ಮಿಕ ರಾಜಕೀಯ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಪರಾಕಾಷ್ಠೆಯಿಂದ ಹೋರಾಡಿದರೆಂಬಲ್ಲಿ ಎಷ್ಟೂ ಸಂದೇಹವಿಲ್ಲ.

**ರಾಜಪುತರ ಉತ್ಪತ್ತಿ :—** ಇವರ ಉತ್ಪತ್ತಿಯ ಬಗ್ಗೆ ವಾದವಿದೆ. ವಿನ್ಸೆಂಟ್ ಸ್ಮಿಥ್, ಡಾ. ಭಾಂಡಾರಕರ, ರಮೇಶಚಂದ್ರ ದತ್ತ ಮೊದಲಾದ ಇತಿಹಾಸಕಾರರು, "ರಾಜಪುತರು ಹೊರಗಿಂದ ಬಂದ ಶಕ, ಯುಏಚಿ, ಹೂಣ ಮೊದಲಾದವರ ವಂಶಜರು; ಈ ಪರಕೀಯರು ಕಾಲಾಂತರದಲ್ಲಿ ಹಿಂದು ಧರ್ಮವನ್ನು ಕೈಕೊಂಡು, ಏತದ್ದೇಶೀಯ ಹಿಂದುಗಳಿಂದ ಬೇರೆ ಉಳಿದರು. ತಮ್ಮ ಯುದ್ಧ ಪ್ರವೃತ್ತಿಯ ಮೂಲಕ ಹಿಂದೂ ಕ್ಷತ್ರಿಯರಲ್ಲಿ ಸೇರಿದರು. ಎಂದು ಪ್ರತಿಪಾದಿಸಿದ್ದಾರೆ. ಈ ವಿಧಾನಕ್ಕೆ ಪುಷ್ಟಿಕೊಡುವ ಇನ್ನೂ ಒಂದು ಕಾರಣವಿದೆ. ೧೨ ನೆಯ ಶತಕದಲ್ಲಿ ಪೃಥ್ವೀರಾಜನ ಆಶ್ರಯದಲ್ಲಿ ಚಂದಭಾಟನೆಂಬ ಭಾಟನಿದ್ದನು. ಅವನು ಬರೆದ 'ಪೃಥ್ವೀರಾಜ ರಾಸೋ' ಎಂಬ ಕಾವ್ಯದಲ್ಲಿ ರಾಜಪುತರ ಉತ್ಪತ್ತಿಯನ್ನು ಕುರಿತು; ಹೇಳಿದ್ದಾನೆ. 'ಮ್ಲೇಂಛರಿಂದ ಪೃಥ್ವಿಗೆ ಪೀಡೆಯುಂಟಾಗಲು ವಶಿಷ್ಠನು ಅಗ್ನಿಯಲ್ಲಿ ನಾಲ್ವರು ವೀರಪುರುಷರನ್ನು ಹುಟ್ಟಿಸಿದನು.' ಅವರೇ ರಾಜಪುತ ಪೂರ್ವಜರು. ಇದರಲ್ಲಿಯ ದಂತಕಥೆಯ ಭಾಗವನ್ನು ಬಿಟ್ಟರೆ, ರಾಜಪುತರು ಅಗ್ನಿಯಿಂದ ಪಾವನ ಹೊಂದಿದ ಪರಕೀಯರು ಎಂದರೆ ಶಕ-ಹೂಣರೊಳಗಿನವರು ಇರಬೇಕೆಂದೆನಿಸುತ್ತದೆ. ಆದರೆ ಕೈ. ಚಿಂತಾಮಣರಾವ ವೈದ್ಯರ ಮತದಂತೆ ಈ ಉತ್ಪತ್ತಿ ವಿಮಾಂಸೆ ತಪ್ಪು. ಏಕೆಂದರೆ ತತ್ಕಾಲೀನ ರಾಜಪುತರು ತಾವು ಸೂರ್ಯವಂಶೀಯರು ಅಥವಾ ಚಂದ್ರವಂಶೀಯರೆಂದು ಹೇಳಿಕೊಳ್ಳುತ್ತಿದ್ದರು. ಮತ್ತು ತಮ್ಮ ವಂಶದ ಮೂಲವನ್ನು ಅತಿ ಪ್ರಾಚೀನ ರಾಮಕೃಷ್ಣರಿಗೆ ಜೋಡಿಸುತ್ತಿದ್ದರೆಂಬುದು

೯–೧೦ನೆಯ ಶತಕಗಳ ಶಿಲಾಲೇಖಗಳಿಂದ ಸಿದ್ಧವಾಗುತ್ತದೆ. ರಾಜಪುತ್ರರ ಉತ್ಪತ್ತಿಯನ್ನು ಚರ್ಚಿಸುವಾಗ ೧೬ನೆಯ ಶತಕದ ಕಲ್ಪನಾ ಪ್ರಧಾನ ಕಾರ್ಯಗಳಿಗಿಂತ ೯–೧೦ನೆಯ ಶತಕಗಳ ಶಿಲಾಲೇಖಗಳನ್ನು ನಂಬುವುದು ಹೆಚ್ಚು ಯುಕ್ತವಾದದ್ದು. ಇನ್ನೊಂದು ಮಾತೆಂದರೆ, ಈ ಕಾಲದಲ್ಲಿ ವರ್ಣ–ವರ್ಣಗಳಲ್ಲಿ ಮದುವೆಗಳಾಗುತ್ತಿದ್ದುದು ನಿಜವಾದರೂ ಶಕ ಕುಶಾಣರಂತಹ ಪರಕೀಯರು ಒಮ್ಮೆಲೇ ಕ್ಷತ್ರಿಯ ವರ್ಣದಲ್ಲಿ ಹೇಗೆ ಸಮಾವಿಷ್ಟರಾದರು? ಕಾಲಾಂತದಲ್ಲಿ ಅವರಿಗೆ ಮೂಲ ಕ್ಷತ್ರಿಯರಿಗಿಂತಲೂ ಶ್ರೇಷ್ಠ ಸ್ಥಾನ ಹೇಗೆ ಪ್ರಾಪ್ತವಾಯಿತು? ಈ ಪ್ರಶ್ನೆಗಳಿಗೆ ಅಷ್ಟೊಂದು ಸಮರ್ಪಕ ಉತ್ತರ ದೊರೆಯುವದಿಲ್ಲ. ಅಲ್ಲದೆ ಇನ್ನೊಂದು ಅಪ್ರತ್ಯಕ್ಷ ಪ್ರಮಾಣವೆಂದರೆ ವಾಯವ್ಯದ ಕಡೆಯಿಂದ ಬಂದ ಪರಕೀಯರು ಕಾಶ್ಮೀರ, ಪಂಜಾಬ ಮತ್ತು ರಾಪುತಾನಗಳಲ್ಲಿ ವ್ಯಾಪಿಸಿದರು. ಆದರೆ ರಾಜಪುತರು ವಿಂಧ್ಯ ಅರವಲಿ ಬೆಟ್ಟಗಳ ಗುಡ್ಡಗಾಡು ಪ್ರದೇಶದಲ್ಲಿಯೇ ಮೊದಲು ಪ್ರಸಿದ್ಧಿಗೆ ಬಂದರೆಂಬುದು ನಿರ್ವಿವಾದವಾಗಿದೆ. ಮತ್ತು ಎಲ್ಲ ರಜಪೂತರು ಶರೀರದ ಮತ್ತು ಮನದ ರಚನೆ, ಅದರಲ್ಲಿಯ ಸಾದೃಶ್ಯತೆ ಹಾಗೂ ರೀತಿ–ನಡತೆಗಳಲ್ಲಿಯ ಉಚ್ಚತೆಗಳನ್ನು ನೋಡಿದರೆ ಅವರು ಬೇರೆಬೇರೆ ಪರಕೀಯ ದಾಳಿಗಾರರ ವಂಶಜರಿರಬಹುದೆಂದು ಎನಿಸುವದಿಲ್ಲ. ಎಂದಮೇಲೆ ರಾಜಪುತರು ಇತರ ಹಿಂದುಗಳಿಂದ ಭಿನ್ನರೇಕೆ, ಮತ್ತು ಅವರ ಉತ್ಪತ್ತಿಯ ಮೀಮಾಂಸೆಯೇನು ಎಂಬ ಪ್ರಶ್ನೆ ಉಳಿದೇ ಉಳಿಯುತ್ತದೆ. ಇದಕ್ಕೆ ಉತ್ತರವಿಷ್ಟೆ. ಬೌದ್ಧಧರ್ಮದ ಪ್ರಸಾರವು ಭರದಿಂದ ನಡೆದಾಗ ಅನೇಕರು ಆ ಧರ್ಮಕ್ಕೆ ಸೇರಿದರು ಮತ್ತು ಆ ಮೇಲೆ ವರ್ಣಸಂಕರ ಆರಂಭವಾಯಿತು. ಈ ಸುಂಟರಗಾಳಿಯಿಂದ ತಮ್ಮ ಪರಂಪರೆಯನ್ನು ಜತನವಾಗಿಟ್ಟುಕೊಳ್ಳಲು ಕೆಲವೇ ಕ್ಷತ್ರಿಯ ಮನೆತನಗಳು ಸ್ಥಳಾಂತರ ಮಾಡಿ ಅರವಲಿ–ವಿಂಧ್ಯ ಪರ್ವತಗಳನ್ನು ಆಶ್ರಯಿಸಿದವು. ಬೌದ್ಧ ಧರ್ಮದ ನೆರೆ ಇಳಿದಮೇಲೆ ಬುದ್ಧಪೂರ್ವ ಕಾಲದ ಕ್ಷತ್ರಿಯರು ವರ್ಣ ಸಂಕರದ ಮೂಲಕ ತಮ್ಮನ್ನು ತಾವು ಗುರುತಿಸದಾದರು. ಅವರಲ್ಲಿಯ ಹಲವರು ತಮ್ಮನ್ನು ಕ್ಷತ್ರಿಯರೆಂದುಕೊಂಡರೂ ಅವರ ಕ್ಷತ್ರಿಯತ್ವವು ಶುದ್ಧವಿರಲಿಲ್ಲ. ಗುಡ್ಡಗಾಡಿನಲ್ಲಿ ವಾಸಿಸುವರ ಶುದ್ಧತ್ವವು ಮಾತ್ರ ಅಚ್ಚಳಿಯದಿತ್ತು. ಅವರು ತಮ್ಮನ್ನು ಬುದ್ಧೋತ್ತರ ಕಾಲದ ಕ್ಷತ್ರಿಯರಿಂದ ಬೇರೆಯಾಗಿ ತೋರಿಸಿಕೊಳ್ಳಲು ರಾಜಪುತ (ರಾಜಪುತ್ರ) ರೆಂದು ಕರೆದುಕೊಂಡರು.*

**ರಾಜಪುತರ ಸ್ವಭಾವ ವಿಶೇಷ:—** ಧಾರಾತೀರ್ಥದಲ್ಲಿ ದೇಹವಿಡುವುದು ಮೋಕ್ಷಪ್ರದವೆಂದು ಭಾವಿಸಿದ ಮಹಾಶೂರರು ರಾಜಪುತರು ಅವರಲ್ಲಿ ಬಹು ಸಂಖ್ಯೆಯವರು ಶಂಕರೋಪಾಸಕರು. ಉದೇಪುರದ ಹತ್ತಿರದ ಭಗವಾನ್ ಏಕಲಿಂಗಜಿ ದೇವಾಲಯವು ಇವರ ಪವಿತ್ರ ಸ್ಥಳವು. ಇವರು ಶೂರರಿದ್ದಂತೆ ಮಾನಿಗಳು ಮತ್ತು ಕುನಸಿಗಳು. ಯಾವುದೊಂದು ಕಾರಣಗಳಿಂದ ಹಗೆತನವುಂಟಾಯಿತೆಂದರೆ

* ಸಾಮಾನ್ಯವಾಗಿ ರಜಪೂತ ಎಂಬ ಶಬ್ದವು ಪ್ರಚಾರದಲ್ಲಿದೆ. ಆದರೆ ರಾಜಪುತ ಎಂಬುದೆ ಹೆಚ್ಚು ಸಮಂಜಸವಾದದ್ದು. ಆಧುನಿಕ ಇತಿಹಾಸ ಲೇಖಕರು ಈ ಶಬ್ದವನ್ನೇ ಬಳಸುತ್ತಿದ್ದಾರೆ.

ಎಷ್ಟೋ ಸಲ ತಲೆತಲಾಂತರದ ವರೆಗೂ ನಡೆದು ಬರುತ್ತಿತ್ತು. ಇದರಿಂದಾಗಿಯೇ ರಾಜಪುತರಲ್ಲಿ ಎಂದೂ ಒಕ್ಕಟ್ಟುಂಟಾಗಲಿಲ್ಲ; ಅವರ ಸಾಮ್ರಾಜ್ಯಸತ್ತೆ ಉದಯಕ್ಕೆ ಬರಲಿಲ್ಲ. ಅವರು ಬಹು ಉದಾರರು ಮತ್ತು ಏಕವಚನಿಗಳು. ಅನೇಕ ವಿಶ್ವಾಸ ಘಾತಕೀ ಶತ್ರುಗಳು ಅವರ ಈ ಔದಾರ್ಯದ ಲಾಭ ಪಡೆದದ್ದನ್ನು ಇತಿಹಾಸದಲ್ಲಿ ಕಾಣಬಹುದು. ರಾಜಪುತ ಸ್ತ್ರೀಯರೂ ಶೂರರಿದ್ದರು. ಕದನದಲ್ಲಿ ಸೋತು ಬಂದ ಗಂಡಂದಿರನ್ನು ಅವರು ಪುನಃ ಕಾಳಗಕ್ಕೆ ಕಳಿಸುತ್ತಿದ್ದರು. ಪ್ರಸಂಗ ಬಂದರೆ ಅವರು ಒಳಗೆ ಬರಬಾರದೆಂದು ಕೋಟೆಬಾಗಿಲನ್ನು ಇಕ್ಕಿಬಿಡುತ್ತಿದ್ದರು. ಯುದ್ಧ ದಲ್ಲಿ ಗೆಲುವಿನ ಆಶೆ ತೋರದಾಗ ಜೀವಿಸುವದಕ್ಕಿಂತ ಧಾರಾತೀರ್ಥದಲ್ಲಿ ಪತನ ಹೊಂದುವದಕ್ಕಾಗಿ ರಾಜಪುತರು ಕೇಶರವರ್ಣದ ಉಡಿಗೆ ತೊಡಿಗೆಯಿಂದ ಸಮ ರಕ್ಕೆ ಸನ್ನದ್ಧರಾಗುತ್ತಿದ್ದರು; ಮತ್ತು ಅವರ ಸ್ತ್ರೀಯರು ಮುಂದಿನ ದುರ್ದಶೆಯನ್ನು ತಪ್ಪಿಸುವದಕ್ಕಾಗಿ ಧೈರ್ಯದಿಂದ ಕಿಚ್ಚು ಹಾರುತ್ತಿದ್ದರು. ಈ ಅಗ್ನಿ ಪ್ರವೇಶಕ್ಕೆ 'ಜೋಹಾರ' ಎನ್ನುತ್ತಾರೆ. ರಾಜಪುತರಲ್ಲಿಯ ಒಂದು ದೋಷವೆಂದರೆ, ಅವ ರಲ್ಲಿ ಬಹುಜನರಿಗೆ ಅಫುವಿನ ವ್ಯಸನವಿತ್ತು. ಆದರೆ ಅದು ಪ್ರಮಾಣ ಮೀರಿದ್ದರಿಂದ ರಾಜ್ಯಕ್ಕೆ ಹಾನಿಯಾದಂತೆ ಐತಿಹಾಸಿಕ ಉದಾಹರಣೆ ಇಲ್ಲ. ರಾಜಪುತಾನದಲ್ಲಿ ಅಫು ಹೆಚ್ಚಾಗಿ ಬೆಳೆಯತ್ತದೆಯಾದ್ದರಿಂದ ಆಧುನಿಕ ಭಾರತದಲ್ಲಿಯ ಚಹದ ಅಥವಾ ತಂಬಾಕದ ವ್ಯಸನಗಳಂತೆ ಅದು ಶಿಷ್ಟಸಮ್ಮತವಾಗಿರಬೇಕು.

**ರಾಜಪುತರ ಮನೆತನಗಳು** :— ಈ ಕಾಲದಲ್ಲಿ ರಾಜಪುತರ ನಾಲ್ಕು ಮನೆ ತನಗಳು ಉದಯಕ್ಕೆ ಬಂದವು. ಚಿತೋಡದ ಗುಹಿಲೋತ ಮನೆತನ, ಸಾಂಬರದ ಚಾಹಮಾನ ಮನೆತನ, ಕನೋಜದ ಪ್ರತೀಹಾರ* ಮನೆತನ ಮತ್ತು ಧಾರದ ಪರ ಮಾರ ಮನೆತನ. ಈ ಮನೆತನಗಳೇ ಸ್ವಲ್ಪ ಹೆಚ್ಚುಕಡಿಮೆ ಇಂದಿನವರೆಗೆ ರಾಜ ಪುತಾನದಲ್ಲಿ ಆಳುತ್ತಿವೆ. ಇಷ್ಟು ಪ್ರಾಚೀನ ಪೂರ್ವಪರಂಪರೆಯುಳ್ಳ ಅರಸು ಮನೆ ತನಗಳು ಪೃಥ್ವಿಯಲ್ಲೇ ಕ್ವಚಿತ್ತಾಗಿ ಸಿಕ್ಕಬಹುದು.

**ಚಿತೋಡದ ಗುಹಿಲೋತರು** :— ಚಿತೋಡವು ಮೇವಾಡದ ರಾಜಧಾನಿ. ಗುಹಿಲೋತ ಮನೆತನವು ಪುರಾತನವಾಗಿದ್ದು, ಪ್ರಸಿದ್ಧವಾದದ್ದು. ಎಂಟನೆಯ ಶತಕದಲ್ಲಿ ಈ ಮನೆತನವು ಬೆಳಕಿಗೆ ಬಂದಿತು. ಪರಕೀಯರ ಆಕ್ರಮಣವನ್ನು ಪ್ರಾಣನ್ನು ಪಣಕ್ಕಿಟ್ಟು ಎದುರಿಸಿದ ರಾಜಪುತ ಮನೆತನಗಳಲ್ಲಿ ಇದು ಶ್ರೇಷ್ಠ ವಾದದ್ದು. ಈ ಮನೆತನದ ರಾಜರು ತಾವು ಸೂರ್ಯವಂಶೀಯರು, ಸಾಕ್ಷಾತ್ ರಾಮಚಂದ್ರನ ವಂಶಜರು ಎಂದು ನಂಬುತ್ತಾರೆ. ಒಂದು ಯುದ್ಧ ಸಮಯದಲ್ಲಿ, ಈ ಮನೆತನದ ಪುಷ್ಪವತಿಯೆಂಬ ರಾಣಿ ಅರಣ್ಯದ ಗುಹೆಯಲ್ಲಿ ಗಂಡುಮಗನನ್ನು ಹೆತ್ತಳು. ಆದರಿಂದ ಆ ಮಗುವಿಗೆ 'ಗುಹಿಲ' ಎಂದು ಹೆಸರಿಡಲಾಯಿತು. ಈ

* ಪ್ರತಿಹಾರ–ದ್ವಾರಪಾಲ. ಲಕ್ಷ್ಮಣನು ರಾಮನ ದ್ವಾರಪಾಲನಾಗಿದ್ದನು. ಈ ವಂಶ ಅವನಿಂದ ಬಂದದ್ದೆಂದು ಆ ಜನರು ತಿಳಿಯುತ್ತಾರೆ.

ಚಾರಿತ್ರ್ಯ, ನಾರ್ಥತ್ಯಾಗ ಇವೆಲ್ಲ ಗುಣಗಳಿಂದ ರಾಜಪುತ ಕಾಲದ ಇತಿಹಾಸವು ರೋಮಹರ್ಷಕ ಪ್ರಸಂಗಗಳಿಂದ ತುಂಬಿದೆ; ಆ ಸ್ಫೂರ್ತಿದಾಯಕ ಪ್ರಸಂಗಗಳನ್ನು



ಖಜುರಾಹೋದ ದೇವಾಲಯ

ತತ್ಕಾಲೀನ ಭಟ್ಟಂಗಿಗಳು ತಮ್ಮ ಕಾವ್ಯಗಳಲ್ಲಿ ಬಣ್ಣಿಸಿದ್ದಾರೆ. ಹಿಂದಿ ಮತ್ತು ಗುರ್ಜರ ಹೆಣ್ಣುಮಕ್ಕಳು ಈಗಲೂ ಮನೆ ಮನೆಯಲ್ಲಿ ಈ ಪ್ರಸಂಗಗಳ ಗೀತಗಳನ್ನು ಹಾಡುತ್ತ ಪರಾಕ್ರಮಿಗಳಾದ ಪೂರ್ವಜರ ನೆನವನ್ನು ಸಜೀವಗೊಳಿಸುತ್ತಿದ್ದಾರೆ. ಹದಿನೇಳು ಮತ್ತು ಹದಿನೆಂಟನೆಯ ಶತಮಾನದಲ್ಲಿ ಆದ ಸಂಗತಿಗಳು ಮರಾಠರಿಗೆ ಅಭಿಮಾನವೆನಿಸುವಂತೆ ಈ ಮೂರು ಶತಕಗಳಲ್ಲಿಯ ಸಂಗತಿಗಳ ವಿಷಯದಲ್ಲಿ ರಾಜಪುತರಿಗೂ ಗುರ್ಜರರಿಗೂ ಹೆಮ್ಮೆಯೆನಿಸುತ್ತದೆ. ಅದೇನೇ ಇರಲಿ; ೧೦–೧೧–೧೨ ಈ ಮೂರು ಶತಕಗಳ ಇತಿಹಾಸದ ಅಭ್ಯಾಸ ಮಾಡಿದ ಮೇಲೆ, ಹಿಂದುಸ್ತಾನದ ಈ ಕಾಲದ ಇತಿಹಾಸವನ್ನು ಬರೆಯುವಾಗ ಪರಕೀಯ ಮತ್ತು ಸ್ವಕೀಯ ಲೇಖಕರು ಈ ರಾಜ್ಯಗಳನ್ನು ಗೌಣತ್ವದಿಂದ ಕಂಡು, ಇಂದಿನವರೆಗೆ ಮುಸಲ್ಮಾನರ ದಾಳಿಗಳಿಗೆ ಅವಾಸ್ತವ ಮಹತ್ತ್ವ ಕೊಡುತ್ತಿದ್ದರೆಂದು ಎನಿಸುತ್ತದೆ. ವಾಸ್ತವವೆಂದರೆ, ಈ ಕಾಲದಲ್ಲಿ ಇಸ್ಲಾಮಿ ದಾಳಿಗಳಿಂದ ಸೀಮಾ ಪ್ರದೇಶದಲ್ಲಿ, ಒಮ್ಮೊಮ್ಮೆ ಒಳಪ್ರದೇಶದಲ್ಲಿ ಗೊಂದಲವುಂಟಾಗಿದ್ದರೂ ಹದಿಮೂರನೆಯ ಶತಕದಲ್ಲಿ ಗುಲಾಮ ಮನೆತನದ ಸ್ಥಾಪನೆಯಾಗುವವರೆಗೆ ಉತ್ತರ ಹಿಂದುಸ್ತಾನದಲ್ಲಿ ರಾಜಪುತ ಸಂಸ್ಕೃತಿಯ ಅಖಂಡ ವರ್ಚಸ್ವವಿತ್ತೆಂಬುದು ನಿಃಸಂದೇಹವಾಗಿದೆ.

## ಪ್ರಶ್ನೆ

೧. ರಾಜಪುತರ ಉತ್ಪತ್ತಿಯ ಬಗ್ಗೆ ನಿಮಗೆ ಗೊತ್ತಿದ್ದನ್ನು ಹೇಳಿ, ಅವರ ಸ್ವಭಾವವನ್ನು ಬಣ್ಣಿಸಿರಿ.

೨. ಪ್ರತಿಯೊಂದರ ಬಗ್ಗೆ ಒಂದೊಂದು ವಾಕ್ಯ ಬರೆಯಿರಿ:
ವಿಶಾಲದೇವ, ರಾಜಾ ಧಂಗ, ಗುಹಿಲೋತ, ಹೇಮಚಂದ್ರ ಸೂರಿ, ಪೃಥ್ವೀರಾಜ ಚಾಹಮಾನ.

೩. ರಾಜಪುತರ ಉದಯದಿಂದ ಭಾರತದ ಮೇಲಾದ ಪರಿಣಾಮಗಳು ಯಾವವು ?

## ೩. ದಕ್ಷಿಣದ ರಾಜ್ಯಗಳು

ಆರನೆಯ ಶತಕದಲ್ಲಿ ಬಾದಾಮಿಯ ಚಾಲುಕ್ಯರು, ಎಂಟನೆಯ ಶತಕದಲ್ಲಿ ರಾಷ್ಟ್ರಕೂಟರು, ಹತ್ತನೆಯ ಶತಕದಲ್ಲಿ ಕಲ್ಯಾಣದ ಚಾಲುಕ್ಯರು, ಹನ್ನೆರಡನೆಯ ಶತಕದಲ್ಲಿ ದೇವಗಿರಿಯ ಯಾದವರು ಮತ್ತು ದ್ವಾರ ಸಮುದ್ರದ ಹೊಯ್ಸಳರು ಉದಯಕ್ಕೆ ಬಂದರು. (ಹದಿನಾಲ್ಕನೆಯ ಶತಕದ ಆರಂಭದಿಂದ ದಕ್ಷಿಣದಲ್ಲಿ ಉದಯವಾದ ಮುಸಲ್ಮಾನೀ ಪ್ರಭುತ್ವವು ಹದಿನೆಂಟನೆಯ ಶತಕದಲ್ಲಿ ಅಸ್ತವಾಯಿತು.) ಈ ಎಲ್ಲ ರಾಜಮನೆತನಗಳು ಮಾಡಿದ ಕಾರ್ಯವು ಇಂದಿನ ಕರ್ನಾಟಕ ಮಹಾರಾಷ್ಟ್ರಗಳ ಉಜ್ವಲವಾದ ಗತವೈಭವಕ್ಕೆ ಸಾಕ್ಷಿಯಾಗಿವೆ.

ತೀರ ದಕ್ಷಿಣದಲ್ಲಿ ಚೋಳರು, ಚೇರರು, ಪಾಂಡ್ಯರು, ಪಲ್ಲವರು, ಆಳುತ್ತಿದ್ದರು. ಚೋಳರಲ್ಲಿ ಪ್ರಸಿದ್ಧನಾಗಿ ಹೋದ ಕುಲೋತ್ತುಂಗ ರಾಜೇಂದ್ರನು ಬೌದ್ಧ ಧರ್ಮವನ್ನು ಪ್ರೋತ್ಸಾಹಿಸಿದನೆಂದು ತಿಳಿಯುತ್ತದೆ. ಚೋಳ, ಪಾಂಡ್ಯರ ಕಾಲದಲ್ಲಿ ತಮಿಳು ನಾಡಿನಲ್ಲಿ ಶೈವ ವೈಷ್ಣವ ಭಕ್ತಿ ಪಂಥಗಳು ತಲೆಯೆತ್ತಿದವು. ಅರವತ್ತು ಮೂರುಮಂದಿ ಪುರಾತನರೆಂದು ಪ್ರಸಿದ್ಧರಾಗಿರುವ ಪ್ರಾಚೀನ ಶಿವಭಕ್ತರೆಲ್ಲರೂ ತರುವಾಯ ಕರ್ನಾಟಕದಲ್ಲಿ ವೈದೋರಿದ ವೀರಶೈವ ಮತಕ್ಕೆ ಸ್ಫೂರ್ತಿಯನ್ನಿತ್ತ ಆದ್ಯರು. ಆಳ್ವಾರರೆಂದು ಪ್ರಸಿದ್ಧರಾದ ಹನ್ನೆರಡು ಜನ ವಿಷ್ಣುಭಕ್ತರು ೭-೯ನೆಯ ಶತಕಗಳಲ್ಲಿ ಭಾರತದ ಭಕ್ತಿ ಚಳವಳಿಯಲ್ಲಿ ಪ್ರಮುಖಪಾತ್ರ ವಹಿಸಿ ತರುವಾಯದ ರಾಮಾನುಜ ಮತಕ್ಕೆ ಸ್ಫೂರ್ತಿಯಿತ್ತರು. ಈ ಉಭಯ ಪ್ರಾಚೀನ ಭಕ್ತರಲ್ಲಿ ಎಲ್ಲ ಜಾತಿಯವರುಂಟು; ಪ್ರಾದೇಶಿಕ ಭಾಷೆಯಾದ ತಮಿಳನ್ನು ಇವರು ಭಕ್ತಿಪ್ರಚಾರದ ಸಾಧನವನ್ನಾಗಿ ಮಾಡಿದರು. ಶಿವಭಕ್ತರಲ್ಲಿ ಬೇಡರ ಕಣ್ಣಪ್ಪನೂ, ಸಿರಿಯಾ ಸೆಟ್ಟಿಯೂ, ಕೋಳೂರು ಕೊಡಗೂಸೂ (ಸ್ತ್ರೀಭಕ್ತಳು) ಪ್ರಸಿದ್ಧರಾಗಿದ್ದಾರೆ; ಆಳ್ವಾರರಲ್ಲಿ ನಮ್ಮಾಳ್ವಾರ್, ಎಂಬವರು ತಿರುಪ್ಪಣಾಳ್ವಾರ್ ಮತ್ತು ಆಡಾಂಳ್ (ಸ್ತ್ರೀಭಕ್ತಳು) ಎಂಬವರು ನಾಮಾಂಕಿತರಾಗಿದ್ದಾರೆ.

ಈಗ ಕರ್ನಾಟಕದ ಗತವೈಭವಕ್ಕೆ ಕಾರಣ ಪುರುಷರಾದ ಚಾಲುಕ್ಯರು ರಾಷ್ಟ್ರಕೂಟರು ಮೊದಲಾದವರ ಬಗ್ಗೆ ಸ್ವಲ್ಪ ಹೆಚ್ಚಿನ ವಿವರಗಳನ್ನು ತಿಳಿದುಕೊಳ್ಳುವಾ.

**ಬಾದಾಮಿಯ ಚಾಲುಕ್ಯರು** :— ಇವರಲ್ಲಿ ಶ್ರೀ ಹರ್ಷನನ್ನು ಸೋಲಿಸಿದ **೨ನೇ ಪುಲಿಕೇಶಿ**ಯಂತೂ ಪ್ರಸಿದ್ಧನಾಗಿದ್ದಾನೆ. ಈತನು ಪಶ್ಚಿಮ ಪೂರ್ವ ದಕ್ಷಿಣ ಸಮುದ್ರಗಳ ನಡುವಿನ ಎಲ್ಲ ರಾಜ್ಯಗಳನ್ನು ಗೆದ್ದು ಸಮ್ರಾಟನೆನಿಸಿಕೊಂಡನು. ಇಂಥ ಮಹಾವಿಜಯಕ್ಕೆ ಕಾರಣವಾದ ಅವನ ಸೈನ್ಯಕ್ಕೆ 'ಕಾಂಚೀಶ ಕೇರಳ ನರಾಧಿಪ

ಪಾಂಡ್ಯ ಚೋಳ ಶ್ರೀ ಹರ್ಷ ವಜ್ರಟ ವಿಭೇದ ವಿಧಾನ ದಕ್ಷಂ ಕರ್ನಾಟಕ ಬಲಂ' ಎಂಬ ಬಿರುದು ಇತ್ತು. ಇವನಿಗೆ ಸತ್ಯಾಶ್ರಮ ಪೃಥ್ವೀವಲ್ಲಭ ಎಂಬ ಬಿರುದುಗಳಿದ್ದವು. ಇವನು ವೈದಿಕ ಧರ್ಮಾನುಯಾಯಿಯಾಗಿ ಅಶ್ವಮೇಧ ಯಜ್ಞವನ್ನು ಮಾಡಿದನು; ಆದರೂ ಬೌದ್ಧ, ಜೈನಾದಿ ಮತದವರನ್ನು ಸಹಾನುಭೂತಿಯಿಂದ ಕಂಡನು. ಹ್ಯುಏನ್‌ತ್ಸಂಗನನ್ನು ಮರ್ಯಾದೆಯಿಂದ ನೋಡಿಕೊಂಡನು. ಈತನ ಕಾಲಕ್ಕೆ ಪಶ್ಚಿಮ ದಂಡೆಯ ಮೇಲಿನ ಭಡೋಚ, ಸುರತ ಮೊದಲಾದ ಅನೇಕ ಬಂದರಗಳಿಂದ ದಕ್ಷಿಣ ಭಾರತದ ವ್ಯಾಪಾರವು ನಡೆಯುತ್ತಿತ್ತು. ಇರಾಣದ ಅರಸನು ಈತನ ಓಲಗಕ್ಕೆ ತನ್ನ ವಕೀಲನನ್ನು ಕಳಿಸಿದ್ದನು. ಬದಾಮಿಯಲ್ಲಿರುವ 'ಮೇಣ ಬಸದಿ'ಗಳಲ್ಲಿಯೂ ಐಹೊಳೆ ಪಟ್ಟದಕಲ್ಲುಗಳ ಗುಡಿಗಳಲ್ಲಿಯೂ ಕಂಡುಬಂದಿರುವ ತೇಜಸ್ವಿ ಶಿಲ್ಪಕಲೆಗೆ ಚಾಲುಕ್ಯ ಶಿಲ್ಪವೆಂದೇ ಹೆಸರಿದೆ. ಅಜಂತಾ ಗುಹೆಯಲ್ಲಿಯ ಕೆಲವು ಬಣ್ಣದ ಚಿತ್ರಗಳು ಈ ಕಾಲದವೇ. ಪುಲಿಕೇಶಿಯ ತರುವಾಯ ಆತನ ಮಗ ವಿಕ್ರಮಾದಿತ್ಯನು ತನ್ನ ತಂದೆಯ ಮೇಲೆ ಕೈ ಮಾಡಿದ ಕಾಂಚಿಯ ಪಲ್ಲವರ ಮೇಲೆ ದಾಳಿಮಾಡಿ ಸೇಡು ತೀರಿಸಿಕೊಂಡನು. ಚಾಲುಕ್ಯ—ಪಲ್ಲವ ಮನೆತನದವರಲ್ಲಿ ಕಲಹಗಳು ಎದ್ದು ಇಬ್ಬರೂ ನಿರ್ವೀರ್ಣ್ಣರಾದರು.

**ರಾಷ್ಟ್ರಕೂಟರು** :— ಇವರು ಮೊದಲು ಲಾತೂರನ್ನೂ ತರುವಾಯ ಮಾನ್ಯಖೇಟ (ಮಳಖೇಡ) ವನ್ನೂ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಿದರು. ಈ ಮನೆತನದಲ್ಲಿ ದಂತಿವರ್ಮ, ಇಂದ್ರ, ಕೃಷ್ಣ (ಕಕ್ಕ) ಧ್ರುವ, ೩ನೆಯ ಗೋವಿಂದ, ನೃಪತುಂಗ, ಅಕಾಲವರ್ಷರೆಂಬವರೇ ಮುಖ್ಯ ರಾಜರಾಗಿ ಹೋದರು. ಕೃಷ್ಣ ರಾಜನು ಜಗತ್‌ಪ್ರಸಿದ್ಧವಾದ ವೇರೂಳದ ಕೈಲಾಸ ದೇವಾಲಯವನ್ನು ಕಟ್ಟಿಸಿದನು. ಇವನ ತರುವಾಯ ಆಳಿದ ಧ್ರುವರಾಜನು ದಕ್ಷಿಣದಲ್ಲಿಯ ಪಲ್ಲವರನ್ನು ಸೋಲಿಸಿದ್ದಲ್ಲದೆ ಅಲಹಾಬಾದದ ಹತ್ತಿರ ಕೌಶಾಂಬಿಯವರೆಗೂ ದಾಳಿಮಾಡಿ ಅಲ್ಲಿಯ ಪ್ರತಿಹಾರ ಮನೆತನದ ವತ್ಸರಾಜನನ್ನು ಸೋಲಿಸಿದನು. ಧ್ರುವನ ಮಗನಾದ **೩ನೆಯ ಗೋವಿಂದನು** 'ಜಗತ್ತುಂಗ' ಎಂಬ ಬಿರುದನ್ನು ಧರಿಸಿದನು. ರಾಷ್ಟ್ರಕೂಟ ರಾಜರಲ್ಲಿ ಈತನೇ ಅತಿ ಬಲಾಢ್ಯನು. ೧೨ ಜನ ರಾಜಪುತರು ಒಟ್ಟಾಗಿ ಇವನ ಮೇಲೆ ಏರಿ ಬಂದರೂ ಇವನನ್ನು ಮಣಿಸುವದಾಗಲಿಲ್ಲ. ಗುರ್ಜರ ಮಾಳವೆಗಳೂ ವೆಂಗಿಮಂಡಲದ ಚಾಲುಕ್ಯ ರಾಜರೂ ಕಪ್ಪ ಕಾಣಿಕೆ ಸಲ್ಲಿಸಿದರು. ಇವನ ಮಗನೇ **ನೃಪತುಂಗನು**. ೬೦ ವರ್ಷ ಶಾಂತಿಸಮೃದ್ಧಿಗಳಿಂದ ರಾಜ್ಯ ಗೈದು ಅಮೋಘವರ್ಷನೆಂಬ ಬಿರುದನ್ನು ಈತನು ಧರಿಸಿದನು. ಈತನೇ ಮಾನ್ಯಖೇಟವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಈತನ ಕಾಲದಲ್ಲಿ ಜೈನ ಧರ್ಮವು ಕರ್ನಾಟಕದ ರಾಷ್ಟ್ರಧರ್ಮವೆಂಬ ಘನತೆಯನ್ನು ಪಡೆಯಿತು. ಈ ರಾಜನೇ ಬರೆದ 'ಕವಿರಾಜಮಾರ್ಗ'ವೆಂಬ ಅಲಂಕಾರ ಗ್ರಂಥವು ಕನ್ನಡದಲ್ಲಿ ಇಲ್ಲಿಯವರೆಗೂ ದೊರೆತ ಮೊದನೆಯ ಗ್ರಂಥವಾಗಿದೆ. 'ಪ್ರಶ್ನೋತ್ತರ ರತ್ನಮಾಲಿಕಾ' ಎಂಬ ಸಂಸ್ಕೃತ ಗ್ರಂಥವನ್ನು ಇವನೇ ಬರೆದನೆಂದು ದಿಗಂಬರ ಪಂಥದ ಜೈನರು

ಹೆಮ್ಮೆಯಿಂದ ಹೇಳುತ್ತಾರೆ. ಇವನು ತನ್ನ ರಾಜ್ಯವು 'ಕಾವೇರಿ ಗೋದಾವರಿ' ಗಳ ನಡುವಿನ ರಾಜ್ಯವೆಂದು ಹೇಳಿದ್ದಾನೆ. ಕನ್ನಡ ಭಾಷೆಯ ವ್ಯಾಪ್ತಿಯ ಮೇರೆಗಳು




ಇವೆರಡು ನದಿಗಳೆಂದು ಇವನು ಸಾರುತ್ತಾನೆ. 'ಕಾವೇರಿಯಿಂದಮಾಗೋದಾವರಿ ವರೆಯಿರ್ದ ನಾಡದಾ ಕನ್ನಡದೊಳ್' ಎಂಬ ವಾಕ್ಯವು ಇಂದಿಗೂ ಕನ್ನಡಿಗರಿಗೆ ಸ್ಫೂರ್ತಿಯನ್ನು ಕೊಡುತ್ತಿದೆ. ನೃಪತುಂಗನ ಮಗನೇ ಅಕಾಲವರ್ಷನು 'ಅಕಾಲ ವರ್ಷನ ಆನೆಗಳು ಗಂಗಾನದಿಯಲ್ಲಿ ಮೈದೊಳೆಯುತ್ತವೆ' ಎಂದು ಆ ಕಾಲದ ಕವಿ ಯೊಬ್ಬನು ಮೈಯುಬ್ಬಿ ವರ್ಣಿಸಿದ್ದಾನೆ.

**ಕಲ್ಯಾಣದ ಚಾಲುಕ್ಯರು** :— ಈ ಚಾಲುಕ್ಯರು ಮೂಲತಃ ಬಾದಾಮಿಯ ಚಾಲುಕ್ಯರ ವಂಶದವರೇ. ರಾಷ್ಟ್ರಕೂಟರ ಕೊನೆಯ ಅರಸನಾದ ಕಕ್ಕಲನನ್ನು ಪಟ್ಟದಿಂದ ತಳ್ಳಿ ಪಟ್ಟವೇರಿದ **ತೈಲಪನೇ** ಈ ವಂಶದ ಮೊದಲಿಗನು. ಈ ಮನೆತನದ ಅರಸರಲ್ಲಿ **ತೈಲಪ,** ಜಗದೇಕಮಲ್ಲ **ಜಯಸಿಂಹ,** ಆಹವಮಲ್ಲ **ಸೋಮೇಶ್ವರ,** ತ್ರಿಭುವನಮಲ್ಲ **ಆರನೆಯ ವಿಕ್ರಮಾದಿತ್ಯ** ಮೊದಲಾದವರು ಮುಖ್ಯರು—ಈ ಕಾಲಕ್ಕೆ ಉತ್ತರ ಭಾರತವು ಮುಸಲ್ಮಾನರಿಂದ ಆಕ್ರಮಿಸಲ್ಪಟ್ಟಿದ್ದರಿಂದ ವಿದ್ವಾಂಸ ರೆಲ್ಲರೂ ದಕ್ಷಿಣದ ರಾಜ್ಯದಲ್ಲಿ ಆಶ್ರಯ ಪಡೆದರು. ಕಾಶ್ಮೀರದಿಂದ ಕಲ್ಯಾಣನಗರಕ್ಕೆ ಬಂದು ಆಸ್ಥಾನ ಕವಿಯೆನಿಸಿದ ಬಿಲ್ಹಣನು 'ವಿಕ್ರಮಾಂಕ ದೇವ ಚರಿತಂ' ಎಂಬ ಸಂಸ್ಕೃತ ಗ್ರಂಥದಲ್ಲಿ ಇವನ ಪ್ರಭಾವವನ್ನು ಬಣ್ಣಿಸಿದ್ದಾನೆ.—ಕೊನೆಯ ಅರಸನಾದ ಚನೆಯ ಸೋಮೇಶ್ವರನನ್ನು ಕಲಚೂರ್ಯ ಮನೆತನದ ಬಿಜ್ಜಳನು ಪಟ್ಟದಿಂದ ತಳ್ಳಿ ತಾನೇ ಪಟ್ಟವೇರಿದನು. ಇಲ್ಲಿಗೆ ಕಲ್ಯಾಣ ಚಾಲುಕ್ಯರ ಆಳಿಕೆ ಕೊನೆ ಗೊಂಡಿತು. ( ಕ್ರಿ. ಶ. ೧೨೦೦ )

**ಯಾದವರೂ—ಹೊಯ್ಸಳರೂ :—** ದೇವಗಿರಿಯ ಯಾದವರಲ್ಲಿ ಸಿಂಘಣನು ಪರಾಕ್ರಮಿಯಾದ ದೊರೆಯು. ಮಹಾರಾಷ್ಟ್ರ ಸಾಹಿತ್ಯದ ಉಷಃಕಾಲವು ಯಾದವರ ಆಳಿಕೆಗೇ ಸಂಬಂಧಿಸಿದ್ದಾಗಿದೆ. ದೋರ ಸಮುದ್ರದ ಹೊಯ್ಸಳರಲ್ಲಿ ಜೈನನಾದ ವಿಷ್ಣುವರ್ಧನನು ರಾಮಾನುಜಾಚಾರ್ಯರ ಶಿಷ್ಯನಾಗಿ ಶ್ರೀ ವೈಷ್ಣವ ಮತವನ್ನು ಮುಂದಕ್ಕೆ ತಂದನು. ಇವನ ಹೆಂಡತಿ ಶಾಂತಲಾ ರಾಣಿ ಜೈನಳಾಗಿಯೇ ಉಳಿದಳು. ಇವರ ಕಾಲದಲ್ಲಿ ಬೇಲೂರಿನ ಚೆನ್ನಕೇಶವ ದೇವಾಲಯವು ಸ್ಥಾಪಿತವಾಗಿ ನಯನಾಜೂಕುಗಳಿಗೆ ಪ್ರಸಿದ್ಧವಾದ ಹೊಯ್ಸಳ ಶಿಲ್ಪವು ಹೆಸರಾಯ್ತು.

**ಉತ್ತರ ದಕ್ಷಿಣ ಭಾರತೀಯರ ತುಲನೆ :—** ರಾಜಪುತ ರಾಜರಂತೆ ಈ ಅನೇಕ ಅರಸು ಮನೆತನಗಳಲ್ಲಿ ಕದನಗಳಾಗುತ್ತಿದ್ದವು; ಗಡಿಯ ರಾಜ್ಯಗಳೊಡನೆ ಯುದ್ಧಗಳು ನಡೆಯುತ್ತಿದ್ದವು. ಮುಸಲ್ಮಾನರೊಡನೆ ಜೀವದ ಹಂಗುದೊರೆದು ಕಾದುವ ಪ್ರಸಂಗ ರಾಜಪುತ್ರರಿಗೆ ಬೇಗನೇ ಬಂದಂತೆ, ದಕ್ಷಿಣದ ರಾಜ್ಯಗಳಿಗೆ ಹದಿಮೂರನೆಯ ಶತಕದ ಕೊನೆಯ ವರೆಗೆ ಬರಲಿಲ್ಲ. ರಾಜಪುತರ ಶೌರ್ಯದ ರೋಮಾಂಚಕಾರಿ ಪ್ರಸಂಗಗಳ ವರ್ಣನೆ ಇತಿಹಾಸದಲ್ಲಿ ದೊರಕುವಂತೆ, ದಕ್ಷಿಣದಲ್ಲಿಯ ಯುದ್ಧಗಳ ವಿಷಯವು ಇನ್ನೂ ಬೆಳಕಿಗೆ ಬರಬೇಕಾಗಿದೆ. ಆದರೆ, ಈ ದಕ್ಷಿಣದ ರಾಜ್ಯಗಳಲ್ಲಿ ವ್ಯಾಪಾರದ ಅಭಿವೃದ್ಧಿ, ಸಮುದ್ರ ಪರ್ಯಟನ ಪ್ರವೃತ್ತಿ, ವಿಶಾಲ ಭಾರತದಲ್ಲಿ ಸಾಮ್ರಾಜ್ಯ ವಿಸ್ತರಣೆ, ಇಂದಿಗೂ ಶಿಲ್ಪಕಲೆಯ ಉತ್ಕರ್ಷದ ಸಾಕ್ಷಿಯಾಗಿ ನಿಂತಿರುವ ಅಸಂಖ್ಯ ಭವ್ಯ ದೇವಾಲಯುಗಳ ನಿರ್ಮಿತಿ ಮೊದಲಾದವುಗಳು ರಾಜಪುತರ ಮಾನದಿಂದ ವಿಶೇಷತ್ವದಿಂದ ನಿದರ್ಶನಕ್ಕೆ ಬರುತ್ತಿವೆಯೆಂಬುದನ್ನು ಗಮನಿಸುವುದು ಅಗತ್ಯ.

## ಪ್ರಶ್ನೆ

೧. ಒಟ್ಟೊಬ್ಬರ ಬಗ್ಗೆ ಒಂದೊಂದು ವಾಕ್ಯ ಬರೆಯಿರಿ.
ರಾಷ್ಟ್ರಕೂಟ ಕೃಷ್ಣ, ೩ ನೆಯ ಗೋವಿಂದ, ನೃಪತುಂಗ, ಕುಲೋತ್ತುಂಗ ರಾಜೇಂದ್ರ, ೬ನೆಯ ವಿಕ್ರಮಾದಿತ್ಯ.

೨. ರಾಷ್ಟ್ರಕೂಟ ಕಾಲದ ಕನ್ನಡ ಕವಿರತ್ನತ್ರಯವಾವುದು ? ಅವರು ಯಾವ ಕಾವ್ಯಗಳನ್ನು ಬರೆದಿದ್ದಾರೆ ?

# ತ್ರಯೋದಶ ಖಂಡ

## ಮಧ್ಯ ಆಶಿಯಾ, ಚೀನ ಮತ್ತು ಭಾರತ

### ಭಾರತದ ಬಾಹ್ಯವಿಸ್ತಾರ

**ವಿಶಾಲ ಭಾರತ :—** ರಾಜೇಂದ್ರ ಚೋಳನು ಸಮುದ್ರಮಾರ್ಗದಿಂದ ದಂಡಯಾತ್ರೆ ಮಾಡಿ ಸುಮಾತ್ರಾದ್ವೀಪದಲ್ಲಿ ತನ್ನ ವರ್ಚಸ್ಸವನ್ನು ನೆಲೆಗೊಳಿಸಿದ ಸಂಗತಿ ೧೨ನೆಯ ಭಾಗದಲ್ಲಿ ಬಂದಿದೆ. ಆದರೆ ಮೊನ್ನೆ ಮೊನ್ನೆಯ ವರೆಗೆ, ಹಿಂದು ಧರ್ಮದಲ್ಲಿ ಪರದೇಶಗಮನ ಮತ್ತು ಸಮುದ್ರ ಪರ್ಯಟನ ನಿಷಿದ್ಧವೆನಿಸಿದ್ದರಿಂದ

ಈ ದೇಶದವರು ಹೊರಗೆ ಹೋಗಿ ಯಾವ ಸಾಂಸ್ಕೃತಿಕ ಮತ್ತು ರಾಜಕೀಯ ದಿಗ್ವಿಜಯವನ್ನೂ ಸಾಧಿಸಿರಲಿಕ್ಕಿಲ್ಲವೆಂದು ಸರ್ವಸಾಮಾನ್ಯ ತಿಳಿವಳಿಕೆಯಿದ್ದಿತು. ಸಮುದ್ರಗಮನವು ನಿಜವಾಗಿ ಧರ್ಮ ವಿರುದ್ಧವಾಗಿರಲಿ ಬಿಡಲಿ, ಹತ್ತೊಂಬತ್ತನೆಯ ಶತಕದಲ್ಲಿ ಜನರ ಕಲ್ಪನೆ ಹಾಗಿದ್ದದ್ದು ನಿಜ. ಆದರೆ ಪ್ರಾಚೀನ ಕಾಲದಿಂದ ಕ್ರಿ. ಪೂ. ೩ ನೆಯ ಶತಕದಿಂದ ಕ್ರಿ. ವ. ೧೪ ನೆಯ ಶತಕದ ವರೆಗಿನ ಕಾಲದಲ್ಲಿ ಉತ್ತರಕ್ಕೆ ಖೋತಾನದ ಪ್ರದೇಶದಿಂದ ದಕ್ಷಿಣದಲ್ಲಿ ಆಗ್ನೇಯಕ್ಕೆ ಜಾವಾ–ಸುಮಾತ್ರಾಗಳ ವರೆಗೆ ಭೂ-ಜಲ ಮಾರ್ಗಗಳೆರಡರಿಂದಲೂ ದೊರನಾಡುಗಳೊಡನೆ ಭಾರತದ ರಾಜಕೀಯ ಸಾಂಸ್ಕೃತಿಕ ಮತ್ತು ವ್ಯಾಪಾರಿ ಸಂಬಂಧವಿದ್ದಿತೆಂಬುದಕ್ಕೆ ನಿರ್ವಿವಾದ ಪ್ರಮಾಣಗಳು ಸಿಕ್ಕಿವೆ. ಜಾವಾ ಸಮೀಪದ ಬಾಲಿ ನಡುಗಡ್ಡೆಯಲ್ಲಿ ಭಾರತೀಯ ಸಂಸ್ಕೃತಿ ಇಂದು ಕೂಡ ತಳವೂರಿ ನಿಂತಿದೆ. ಬಾಹ್ಯ ಜಗತ್ತಿನೊಡನೆ ಭಾರತೀಯರ ಸಂಬಂಧ ಯಾವ ರೀತಿ ಇತ್ತೆಂಬುದನ್ನು ತಿಳಿಯುವ ಕಡೆ ಪಂಡಿತರ ಲಕ್ಷ್ಯ ಈಗೀಗ ಮಾತ್ರ ಹೊರಳಿದೆ. ಸಂಶೋಧನೆ ಆದಾದಂತೆ ಈ ವಿಷಯದ ಮೇಲೆ ಹೆಚ್ಚು ಬೆಳಕು ಬೀಳಬಹುದಾಗಿದೆ. ಭಾರತದ ಗಡಿಯಾಚೆಯಲ್ಲಿಯ ಭಾರತೀಯ ಸಂಸ್ಕೃತಿಯನ್ನು ವರ್ಣಿಸುವಾಗ 'ವಿಶಾಲಭಾರತ' ಎಂಬ ಸುಂದರ ಶಬ್ದವನ್ನು ಹಿಂದೀ ಲೇಖಕರು ಬಳಸುತ್ತಾರೆ. ಅದು ಅರ್ಥವಾಹಕವೂ ಸಮರ್ಪಕವೂ ಇರುವುದರಿಂದ ನಾವೂ ಅದನ್ನು ಉಪಯೋಗಿಸಲು ಅಡ್ಡಿಯಿಲ್ಲ.

**ಭಾರತ ಯುರೋಪ ಸಂಬಂಧ** :— ಬಹು ಪ್ರಾಚೀನ ಕಾಲದಿಂದ ಇರಾಣ ಆಖಾತ ಮತ್ತು ಕೆಂಪು ಸಮುದ್ರಗಳ ಮಾರ್ಗವಾಗಿ ಭಾರತ–ಯುರೋಪಗಳಲ್ಲಿ ವ್ಯಾಪಾರ ವ್ಯವಹಾರ ನಡೆಯುತ್ತಿತ್ತು. ಭಾರತದ ಮಲಮಲಿಗೆ ರೋಮನ್ ಸಾಮ್ರಾಜ್ಯದಲ್ಲಿ ಬಹಳ ಬೇಡಿಕೆ ಇತ್ತು. ಇದರಿಂದ ರೋಮದ ಸಂಪತ್ತಿ ಭಾರತದ ಕಡೆ ಹರಿಯುತ್ತಿದ್ದ ಬಗ್ಗೆ ಪ್ಲೀನೀ ಎಂಬ ರೋಮನ್ ಇತಿಹಾಸಕಾರನು ಚಿಂತೆಯನ್ನು ವ್ಯಕ್ತಗೊಳಿಸಿದ್ದಾನೆ ಇತ್ತೀಚೆಯ ಸಂಶೋಧನೆಯಲ್ಲಿ ಆ ಕಾಲದ ರೋಮನ್ ನಾಣ್ಯಗಳು ದೊರೆತುದರಿಂದ ಈ ವಿಧಾನಕ್ಕೆ ಪುಷ್ಟಿ ದೊರೆತಿದೆ. ರೋಮನ್ ಸಾಮ್ರಾಜ್ಯದ ಮೊದಲೂ ಗ್ರೀಕರಿಗೆ ಡಾಕಾ ಮಲಮಲ್ಲು ಗಂಜೆಟಿಕಾ ಎಂಬ ಹೆಸರಿನಿಂದ ಗೊತ್ತಿತ್ತು. ಅದಕ್ಕಿಂತ ಮುಂಚೆ ಕ್ರಿ. ಪೂ. ೭ನೆಯ ಶತಕದಲ್ಲಿ ಅಸುರ ವನಿಪಾಲ ಅಥವಾ ಅಸೀರಿ ರಾಜನ ಗ್ರಂಥಸಂಗ್ರಹದಲ್ಲಿ ಭಾರತದ ಬಟ್ಟೆಗೆ 'ಸಿಂಧು' ಎಂಬ ಹೆಸರು ಕೊಟ್ಟಿದ್ದು ಉಲ್ಲೇಖವಾಗಿದೆ. ಇಜಿಪ್ತದಲ್ಲಿದ್ದ ಗ್ರೀಕ ನಾವಿಕನೊಬ್ಬನು ಕೆಂಪು ಸಮುದ್ರ, ಅರಬಿ ಸಮುದ್ರಗಳ ಮಾರ್ಗವಾಗಿ ಭಾರತಕ್ಕೆ ಬಂದನು. 'ಪೆರಿಪ್ಲಸ್' ಎಂಬ ಹೆಸರಿನಿಂದ ಪ್ರಸಿದ್ಧವಿದ್ದ ಅವನ ಪ್ರವಾಸವೃತ್ತದಿಂದ ತತ್ಕಾಲೀನ ಭಾರತದ ಎಷ್ಟೋ ಸಂಗತಿಗಳು ತಿಳಿಯುತ್ತವೆ. ಕ್ರಿ. ಪೂ. ಮೊದಲ ಶತಕದಲ್ಲಿ ಪಾಂಡ್ಯ ರಾಜರು ರೋಮನ್ ಸಮ್ರಾಟ್ ಆಗಸ್ಟಸನ ಕಡೆ ರಾಯಭಾರಿಯನ್ನು ಕಳಿಸಿದ್ದರು. ಮುಂದೆ ಕ್ರಿ. ವ. ನಾಲ್ಕನೆಯ ಶತಕದಲ್ಲಿ ರೋಮನ್ ಸಮ್ರಾಟ್ ಕಾನ್‌ಸ್ಟಂಟೈನನ ಓಲಗದಲ್ಲಿ ಭಾರತೀಯ ವಕೀಲನಿದ್ದಂತೆ ಪ್ರಮಾಣ

ವುಂಟು. ಹಾಗೆಯೆ, ಈ ಶತಕದಲ್ಲಿ ಯುಫ್ರೆಟಿಸ್ ನದಿಯ ದಡದಲ್ಲಿ ಎಷ್ಟೋ ಹಿಂದೂ ದೇವಾಲಯಗಳಿದ್ದವು. ಅವನ್ನು ಕ್ರೈಸ್ತ ಧರ್ಮಗುರು ಸೇಂಟ್ ಗ್ರೇಗರಿ ಎಂಬಾತನು ಕ್ರಿ. ಶ. ೩೦೪ ರಲ್ಲಿ ಹಾಳ್ಗೈದನೆಂದು ತಿಳಿಯುತ್ತದೆ.

ಕ್ರಿ. ಪೂ. ಸುಮಾರು ೮೦೦ ರಲ್ಲಿ ಸಾಲೊಮನ್ ಎಂಬ ಹಿಬ್ರೂ ರಾಜನು ಆಗಿ ಹೋದನು. ಅವನು ಮೂರು ವರುಷಕ್ಕೊಮ್ಮೆ ಪೂರ್ವದ ಕಡೆಗೆ ಸಮುದ್ರ ಪರ್ಯಟನ ಮಾಡುತ್ತಿದ್ದನು. ಬರುವಾಗ ಬೆಳ್ಳಿ, ಬಂಗಾರ ಮುತ್ತು, ರತ್ನ, ಹಸ್ತಿದಂತ, ಮಂಗ-ನವಿಲುಗಳು ಮೊದಲಾದವನ್ನು ಸಂಗ್ರಹಿಸಿಕೊಂಡು ತರುತ್ತಿದ್ದನು. ಮಧ್ಯದಲ್ಲಿ ‘ ಓಫೀರ್ ’ ಎಂಬಲ್ಲಿ ತಂಗುತ್ತಿದ್ದನು. ಭಾರತದ ಪಶ್ಚಿಮ ಕಡೆಯಲ್ಲಿರುವ ಸೋಪಾರಾ ಬಂದರವೇ ಈ ‘ ಓಫೀರ್ ’ ಎಂದು ಕೆಲವರ ಮತ. ಸಾಲೋಮನನ ಸಂಗ್ರಹದಲ್ಲಿಯ ಮಂಗಗಳಿಗೆ ‘ ಕೋಪ್ ’ ಎನ್ನಲಾಗಿದೆ. ಕೋಪ್ ಮತ್ತು ಕಪಿಗಳಲ್ಲಿ ಸಾಮ್ಯವಿದೆ. ಹಾಗೆಯೆ ನವಿಲಿಗೆ ಹಿಬ್ರೂ ಭಾಷೆಯಲ್ಲಿ ಥುಕಿ ಇಂ ಎನುತ್ತಾರೆ; ಇದು ತಮಿಳಿನ ತೊಕೇಇ ಶಬ್ದದಂತಿದೆ. ಅಲ್ಲದೆ ಹಿಬ್ರೂ ‘ ಕರ್ಪಸ್ ’ ಸಂಸ್ಕೃತ ‘ ಕಾರ್ಪಾಸ ’ ( ಹತ್ತಿ ) ಮತ್ತು ಗ್ರೀಕ ‘ ಸಂತಲನ್ ’ ಸಂಸ್ಕೃತ ‘ ಚಂದನ ’ ಇವುಗಳಲ್ಲಿಯೂ ಒಡೆದು ಕಾಣುವ ಹೋಲಿಕೆಯುಂಟು. ಇನ್ನೂ ಎಷ್ಟೋ ಇಂತಹ ಸದೃಶ ಶಬ್ದಗಳನ್ನು ಕಾಣಬಹುದು. ಆದರೆ, ಇದರಿಂದ ಕಾಯಾಸ ಕಟ್ಟುವಾಗ ಮಾತ್ರ ವಿಶೇಷ ಜಾಗರೂಕತೆ ಇರಬೇಕು.

**ಭಾರತ-ಮಧ್ಯಆಶಿಯಾ ಸಂಬಂಧ** :— ಭಾರತ ಮಧ್ಯ ಆಶಿಯಾಗಳ ಸಂಬಂಧವು ಭಾರತ ಯುರೋಪಗಳ ಸಂಬಂಧದಂತೆಯೆ,- ಅದೇಕೆ, ಅದಕ್ಕಿಂತ ಪ್ರಾಚೀನವೂ ದೃಢತರವೂ ಇದೆ. ಪ್ರಾಚೀನ ಕಾಲದಲ್ಲಿ ರೂಢವಾಗಿದ್ದ, ‘ ಕಾಬೂಲವೂ ಕಂದಹಾರಗಳೂ ಭಾರತದ ಎರಡು ಬಾಗಿಲುಗಳು ’ ಎಂಬ ಮಾತನ್ನು ಅಕಬರ ಕಾಲದ ಅಬುಲ್ ಫಜಲನು ತನ್ನ ಗ್ರಂಥದಲ್ಲಿ ಉದ್ಧರಿಸಿದ್ದಾನೆ. ಈ ಭಾಗದಲ್ಲಿಯ ಯುಏಚಿ ಮತ್ತು ಪಾರ್ಥಿಯನ್ನರೊಡನೆ ಇದ್ದ ಭಾರತೀಯರ ರಾಜಕೀಯ ಸಂಬಂಧವನ್ನು ಹಿಂದೆ ( ಖಂಡ ೯ ) ವಿವರಿಸಿದೆ. ಬಕ್ಟ್ರಿಯದಲ್ಲಿ ಸಾವಿರಾರು ಬ್ರಾಹ್ಮಣರೂ ಶ್ರಮಣ ( ಬೌದ್ಧ )ರೂ ನೆಲಸಿದ್ದರೆಂದು ಗ್ರೀಕರಲ್ಲಿ ಉಲ್ಲೇಖವಿದೆ. ಅಫಗಾಣಿಸ್ತಾನದಲ್ಲಿ ಅನೇಕ ಕಡೆಗಳಲ್ಲಿ ಬೌದ್ಧಸ್ತೂಪಗಳ ಅವಶೇಷಗಳು ಉಪಲಬ್ಧವಾಗಿವೆ. ಇವೆಲ್ಲವುಗಳಿಂದ, ಆ ಭಾಗಕ್ಕೂ ಭಾರತಕ್ಕೂ ಇದ್ದ ಧಾರ್ಮಿಕ ಸಂಪರ್ಕದ ಕಲ್ಪನೆ ಬರುವಂತಿದೆ. ರಾಜಕೀಯ-ಧಾರ್ಮಿಕ ವಿಷಯಗಳಲ್ಲಲ್ಲದೆ ಭಾರತ ಮಧ್ಯ ಆಶಿಯಗಳಲ್ಲಿ ಪ್ರಾಚೀನಕಾಲದಿಂದಲೂ ವ್ಯಾಪಾರ ಸಂಬಂಧವೂ ಇತ್ತು. ಬಲ್ಖ ಎಂಬುದು ಆಗಿನ ಮಧ್ಯ ಆಶಿಯಾದ ಒಂದು ವ್ಯಾಪಾರ ಕೇಂದ್ರವಾಗಿತ್ತು. ಭಾರತೀಯ ವ್ಯಾಪಾರಿಗಳು ಖೈಬರ ಕಣಿವೆಯ ಮಾರ್ಗವಾಗಿ ಹಿಂದುಕುಶದ ವರೆಗೆ ಬೆಟ್ಟಗಳನ್ನು ದಾಟಿ ಬಲ್ಖಿಗೆ ಹೋಗುತ್ತಿದ್ದರು. ಅಲ್ಲಿಂದ ಅಮುದಾರಿಯ ನದಿಯ ಮಾರ್ಗವಾಗಿ ಕಾಸ್ಪಿಯನ್ ಸಮುದ್ರದ ಹತ್ತಿರ ಹೊರಳಿ ಕಪ್ಪುಕಡಲಿನ ಕಡೆಗೆ ಒಂದು ಗುಂಪಿನವರು ಹೋಗುತ್ತಿದ್ದರು. ಇನ್ನೊಂದು ಗುಂಪು ಹಿರಾತ-ಇರಾಣ-ಆಶಿಯಾ

ಮಾಯನರಗಳ ಮೂಲಕವಾಗಿ ಗ್ರೀಸಕ್ಕೆ ಹೋಗುತ್ತಿತ್ತು. ಪೂರ್ವ ಆಶಿಯಾ ಮತ್ತು ಚೀನಗಳಿಂದ ಕಾಶ್ಗರ, ಯಾರ್ಕಂದ ಭಾಗಗಳಿಗೆ ಬರುವ ಮಾರ್ಗಗಳೂ ಬಲ್ಖಿನಲ್ಲಿ ಸೇರುತ್ತಿದ್ದವು. ಈ ಎಲ್ಲ ಮಾರ್ಗಗಳಿಂದಲೂ ಭಾರತೀಯರು ಬಹು ಪ್ರಾಚೀನ ಕಾಲದಿಂದ ಬಾಹ್ಯ ಜಗತ್ತಿನೊಂದಿಗೆ ಸಂಬಂಧ ಬೆಳೆಸುತ್ತಿದ್ದರು.

**ಭಾರತ–ಚೀನ ಸಂಬಧದ ಪ್ರಾಚೀನತೆ :—** ಭಾರತ ಚೀನಗಳ ಪ್ರಾಕ್ಕಾಲೀನ ಸಂಬಂಧದ ಬಗ್ಗೆ ಕಾಲಿದಾಸನ ವಾಙ್ಮಯದಲ್ಲಿ ಅಪ್ರತ್ಯಕ್ಷ ಪ್ರಮಾಣಗಳು ಸಿಕ್ಕುತ್ತವೆ. ಅವನ ಶಾಕುಂತಲದಲ್ಲಿ ರೇಶಿಮೆ ಬಟ್ಟೆಯೆಂಬರ್ಥದಲ್ಲಿ 'ಚೀನಾಂಶುಕ' ಎಂಬ ಶಬ್ದವನ್ನು ಬಳಸಲಾಗಿದೆ. ಬಹುಪ್ರಾಚೀನ ಕಾಲದಿಂದ ರೇಶಿಮೆ ಚೀನದಿಂದ ಇಲ್ಲಿಗೆ ಬರುತ್ತಿತ್ತು. ಆದರಿಂದಲೇ ರೇಶಿಮೆಗೆ ಆ ದೇಶದ ಹೆಸರು ಬಂದಿತು. ರೇಶಿಮೆಗೆ 'ಚೀನ' ಎಂಬ ಶಬ್ದವನ್ನು ಕೌಟಿಲ್ಯನೂ ತನ್ನ ಅರ್ಥಶಾಸ್ತ್ರದಲ್ಲಿ ಉಪಯೋಗಿಸಿದ್ದಾನೆ. ಕೌಟಿಲ್ಯನ ಕಾಲ ಕ್ರಿ. ಪೂ. ೪ನೆಯ ಶತಕ. ಅದಕ್ಕಿಂತಲೂ ಮೊದಲು 'ಚೀನ' ಶಬ್ದವು ಸಂಸ್ಕೃತದಲ್ಲಿ ಎಂದು ಬಂದಿತೆಂದು ಹೇಳುವುದು ಕಠಿಣ. ಆದರೆ ಚೀನ–ಭಾರತಗಳ ಸಂಪರ್ಕ ಪ್ರಾಚೀನತೆಯನ್ನು ಕ್ರಿ. ಪೂ. ೪ನೆಯ ಶತಕದ ವರೆಗೆ ನಿಃಸಂದೇಹವಾಗಿ ಚಾಚಬಹುದು. ಭಾರತದಿಂದ ಚೀನಕ್ಕೆ ಆಗ ಮೂರು ದಾರಿಗಳಿದ್ದವು. ಮೇಲೆ ಹೇಳಿದ, ಬಲ್ಖ ಮಾರ್ಗವಾಗಿ ಕಾಶಗರ, ಗೋಬಿ ಬಯಲುಗಳಲ್ಲಿ ಹಾಯ್ದು ಪೂರ್ವಕ್ಕೆ ಹೋಗುವುದು ಒಂದು; ಬ್ರಹ್ಮದೇಶದಲ್ಲಿ ಹಾಯ್ದು ಚೀನದ ನೈರುತ್ಯ ಭಾಗವನ್ನು ಸೇರುವುದು ಇನ್ನೊಂದು; ಜಲಮಾರ್ಗವಾಗಿ ಜಾವಾ–ಸುಮಾತ್ರಗಳ ಮೂಲಕ, ಅಲ್ಲಿಂದ ಉತ್ತರಕ್ಕೆ ಸಾಗುವುದು ಮತ್ತೊಂದು; ಈ ಮೂರು ಮಾರ್ಗಗಳಲ್ಲಿ ಸಂಚಾರವಿದ್ದಿತೆಂಬ ಬಗ್ಗೆ ಕೆಲವು ಪ್ರಮಾಣಗಳು ಉಪಲಬ್ಧವಾಗಿವೆ. ವಂಶದೃಷ್ಟಿಯಿಂದ ನೋಡಿದರೆ, ಭಾರತ ಪೂರ್ವಭಾಗದಲ್ಲಿ ಬಂಗಾಲ–ಆಸಾಮುಗಳಲ್ಲಿ ಅಧಿಕವಾಗಿ ಕಂಡುಬರುವ ಉಬ್ಬುಗಲ್ಲದ, ದುಂಡು ದುಂಡು ಮಾತಾಡುವ ಜನರು ಮಂಗೋಲಿಯನ್ ವಂಶದವರಿರಬೇಕೆಂದು ವಂಶಶಾಸ್ತ್ರಜ್ಞರು ತರ್ಕಿಸಿದ್ದಾರೆ ಈ ಜನರು ಭಾರತಕ್ಕೆ ಯಾವಾಗ ಬಂದರೋ ಗೊತ್ತಾಗುವುದಿಲ್ಲ.

**ಬೌದ್ಧ ಧರ್ಮದ ಪ್ರಸಾರ :—** ಅಶೋಕನ ಮಗ ಕುಣಾಲನು ಚೀನದ ಪಶ್ಚಿಮ ಮೂಲೆಯ ಖೋತಾನದಲ್ಲಿ ಕ್ರಿ. ಪೂ. ಎರಡನೆಯ ಶತಕದಲ್ಲಿ ತನ್ನ ವಸಾಹತನ್ನು ಸ್ಥಾಪಿಸಿದ ಬಗ್ಗೆ ಉಲ್ಲೇಖವಿದೆ. ತರುವಾಯದಲ್ಲಿ ಕ್ರಿ. ವ. ಪ್ರಾರಂಭದಲ್ಲಿ ಕಾಶಗರ, ಖೋತಾನ ಶಾನಶಾನ ಭಾಗಗಳಲ್ಲಿ ಬೌದ್ಧಧರ್ಮದ ಪ್ರಸಾರ ಭರದಿಂದಾಯಿತು. ಆ ಕಾಲದಲ್ಲಿ ಅಲ್ಲಿ ಬ್ರಾಹ್ಮಿ ಮತ್ತು ಖರೋಷ್ಠಿ ಲಿಪಿಯಲ್ಲಿ ಬರೆಯಲಾಗುತ್ತಿತ್ತು. ಉಚ್ಚ ಅಧ್ಯಯನಕ್ಕಾಗಿ ಅಲ್ಲಿ ಸಂಸ್ಕೃತ ಭಾಷೆಯನ್ನು ಬಳಸುತ್ತಿದ್ದರೆಂದು ಫಾಹಿಏನನು ಅಂದಿದ್ದಾನೆ. ಆ ಭಾಗದಲ್ಲಿದ್ದ ಅನೇಕ ಬೌದ್ಧ ಮಠಗಳಿಗೆ ಕಾಶ್ಮೀರದ ಪಂಡಿತರನ್ನು ಕರೆಸಲಾಗುತ್ತಿತ್ತು. ಖೋತಾನ ಭಾಗದಲ್ಲಿಯ ಗೋಮತೀ ವಿಹಾರವು ಒಂದು ಕಾಲದಲ್ಲಿ ಬೌದ್ಧ ಗ್ರಂಥಗಳ ಅಧ್ಯಯನದ ಒಂದು ದೊಡ್ಡ ಕೇಂದ್ರವಾಗಿತ್ತು. ಗೋಮತಿ ವಿಹಾರದಲ್ಲಿ ೩೦೦೦ ಬೌದ್ಧ ಭಿಕ್ಷುಗಳಿದ್ದರು.

ಆ ಮಠದಲ್ಲಿಯು ಜನರ ಜೀವನದ ಮತ್ತು ತೇರು–ಜಾತ್ರೆಗಳಂತಹ ಉತ್ಸವಗಳ ವರ್ಣನೆ, ಅನಂತರ ಕಾಲದಲ್ಲಿ ಭಾರತಕ್ಕೆ ಬಂದುಹೋದ ಫಾಹಿಯಾನನ ಬರೆಹಗಳಲ್ಲಿ ದೊರೆಯುತ್ತದೆ. ಅಲ್ಲಿಯ ಭಾಷೆಯಲ್ಲಿ ಭಾಷಾಂತರಿಸಿದ ಹಿಂದೀ ವೈದ್ಯಕ ಗ್ರಂಥಗಳು ಇತ್ತೀಚೆಗೆ ದೊರೆಯುತ್ತವೆ. ಖೋತಾನದ ಉತ್ತರಕ್ಕೆ ಕುಚಿ ಎಂಬ ಭಾಗದಲ್ಲಿ ಬುದ್ಧನ ಸ್ತೂಪ ಸಿಕ್ಕುತ್ತವೆ. ಅಲ್ಲಿನ ರಾಜರಿಗೆ ಸುವರ್ಣಗುಪ್ತ, ಹರಿಗುಪ್ತ ಇತ್ಯಾದಿ ಸಂಸ್ಕೃತ ಪ್ರಚುರ ಹೆಸರುಗಳಿದ್ದವು. ಆ ಬಳಿಕಿನ ಕಾಲದಲ್ಲಿ ಬೌದ್ಧ ಧರ್ಮವು ಇಡೀ ಚೀನದಲ್ಲಿ ಹಬ್ಬಿತು. ತಿಬೇಟದ ಬೌದ್ಧ ಭಿಕ್ಷುಗಳು ಅಧ್ಯಯನಕ್ಕಾಗಿ ನಾಲಂದಕ್ಕೆ ಬರುತ್ತಿದ್ದರು. ನೂರಾರು ತತ್ಕಾಲೀನ ಸಂಸ್ಕೃತ ಗ್ರಂಥಗಳು ತಿಬೇಟಿ ಭಾಷೆಯಲ್ಲಿ ಭಾಷಾಂತರಿತವಾಗಿರುವವು.

**ಕಶ್ಯಪ ಮತಂಗ ಮತ್ತು ಕುಮಾರ ಜೀವ:**—ಕ್ರಿ.ಪ. ಮೊದಲನೆಯ ಶತಕದಲ್ಲಿ ಹ್ಯಾನ್‌ವಂಶೀಯ ಚೀನೀ ರಾಜನಾದ ಮಿಂಗದ್ರಿ ಎಂಬವನು ಶ್ರೇಷ್ಠ ಬೌದ್ಧ ಬಿಕ್ಷುಗಳನ್ನು ಹುಡುಕಿ ಚೀನಕ್ಕೆ ಕರೆತರಲೆಂದು ಅನೇಕ ದೂತರನ್ನು ಅಲ್ಲಲ್ಲಿಗೆ ಕಳಿಸಿದನು. ಅವನ ಕರೆಯ ಮೇರೆಗೆ ಕಶ್ಯಪಮತಂಗ ಮತ್ತು ಧರ್ಮರತ್ನ ಎಂಬವರು ಚೀನಕ್ಕೆ ಕ್ರಿ. ವ. ೬೭ರಲ್ಲಿ ಹೋದರು. ತಮ್ಮೊಡನೆ ಅವರು ಅನೇಕ ಧರ್ಮಗ್ರಂಥಗಳನ್ನು ಕುದುರೆಯಮೇಲೆ ಹೇರಿಕೊಂಡು ಒಯ್ದರು. ರಾಜನು ಅವರಿಗಾಗಿ ವಿಹಾರವನ್ನು ಕಟ್ಟಿಸಿಕೊಟ್ಟನು. ಅದಕ್ಕೆ ಶ್ವೇತಾಶ್ವಮಠವೆಂದು ಹೆಸರಿದೆ. ಕಶ್ಯಪಮತಂಗ ಮತ್ತು ಧರ್ಮರತ್ನರು ಬೌದ್ಧಧರ್ಮದ ಪ್ರಸಾರ ಮಾಡುತ್ತ, ಬೌದ್ಧಧರ್ಮ ಗ್ರಂಥಗಳನ್ನು ಚೀನೀ ಭಾಷೆಯಲ್ಲಿ ಭಾಷಾಂತರಿಸುತ್ತ ತಮ್ಮ ಉಳಿದ ಆಯುಷ್ಯವನ್ನು ಚೀನದಲ್ಲಿ ಕಳೆದರು. ಇವರಲ್ಲಿಯ ಧರ್ಮರತ್ನನು ೩೬ ಭಾಷೆಗಳನ್ನು ಕಲಿತು ಒಟ್ಟು ೧೧೧ ಗ್ರಂಥಗಳನ್ನು ಭಾಷಾಂತರಿಸಿದನೆಂದು ತಿಳಿದುಬರುತ್ತದೆ.

ಕಶ್ಯಪಮತಂಗ ಮತ್ತು ಧರ್ಮರತ್ನರ ತರುವಾಯ ಚೀನಕ್ಕೆ ಹೋದ ಪ್ರಸಿದ್ಧ ಬೌದ್ಧ ಭಿಕ್ಷುವೆಂದರೆ ಕುಮಾರಜೀವನು ಅವನ ಪೂರ್ವ ಪೀಠಿಕೆಯೂ ಚರಿತ್ರೆಯೂ ಅತ್ಯಂತ ಮನೋರಂಜಕವಾಗಿದೆ. ಕ್ರಿ. ವ. ನಾಲ್ಕನೆಯ ಶತಕದಲ್ಲಿ ಕುಮಾರಯಾನನೆಂಬ ತರುಣನು ಧರ್ಮಬುದ್ಧಿಯಿಂದ ಪ್ರೇರಿತನಾಗಿ ಭಾರತದಿಂದ ಉತ್ತರಕ್ಕೆ ಪ್ರಯಾಣ ಮಾಡುತ್ತ ಮಾಡುತ್ತ ಕುಚಿ ಎಂಬಲ್ಲಿಗೆ ತಲುಪಿದನು. ಅಲ್ಲಿ ಅವನಿಗೆ ರಾಜಗುರುವಿನ ಪದವು ದೊರೆಯಿತು. ಮುಂದೆ ಅವನು ರಾಜನ ಸೋದರಿಯನ್ನು ಮದುವೆಯಾದನು. ಆಕೆಯ ಹೆಸರು ಜೀವಾ. ಅವರಿಗೆ ಒಂದು ಗಂಡು ಹುಟ್ಟಿತು; ಅದರ ಹೆಸರು ಕುಮಾರಜೀವ. ಈ ಮಗುವಿಗೆ ಏಳು ತುಂಬಿದಾಗ ತಾಯಿ ಭಿಕ್ಷುಣಿಯಾಗಲು ನಿರ್ಧರಿಸಿದಳು. ಮತ್ತು ಮಗನೊಡನೆ ಕಾಶ್ಮೀರಕ್ಕೆ ಬಂದಳು. ಕುಮಾರಜೀವನು ಅಲ್ಲಿ ಬೌದ್ಧ ಧರ್ಮದ ಅಭ್ಯಾಸ ಮಾಡಿದನು. ಮರಳಿ ಹೋಗುವಾಗ ಅವನು ಕಾಶ್ಗರದಲ್ಲಿ ನಾಲ್ಕೂ ವೇದಗಳನ್ನು ಅಭ್ಯಸಿಸಿದನು. ಮುಂದೆ ಯಾರ್ಕಂದದಲ್ಲಿ ಮಹಾಯಾನ ಪಂಥದ ಪರಿಚಯವಾಯಿತು. ಕೊನೆಯಲ್ಲಿ ಕುಚಿಯ ರಾಜಮಠದಲ್ಲಿದ್ದುಕೊಂಡು ಜನರಿಗೆ ಬೌದ್ಧಧರ್ಮ ಗ್ರಂಥಗಳ ಅಧ್ಯಯನ

ದಲ್ಲಿ ಮಾರ್ಗದರ್ಶನ ಮಾಡುತ್ತಿದ್ದನು. ಕ್ರಿ. ಶ. ೩೮೩ ರಲ್ಲಿ ಚೀನ ರಾಜನು ಕುಚಿಯ ಮೇಲೆ ದಾಳಿ ಮಾಡಿದಾಗ ಕುಮಾರಜೀವನು ಬಂಧಿತನಾದನು. ಕ್ರಿ. ಶ. ೪೦೧ರಲ್ಲಿ ಧರ್ಮಗ್ರಂಥಗಳ ಭಾಷಾಂತರಕ್ಕಾಗಿ ದೊಡ್ಡ ಖಾತೆಯನ್ನೇ ತೆಗೆದು ಅದಕ್ಕೆ ಕುಮಾರಜೀವನನ್ನು ನಿಯಮಿಸಿದನು. ಕ್ರಿ. ಶ. ೪೧೨ ರೊಳಗಾಗಿ ಸುಮಾರು ೧೦೦ ಧರ್ಮ ಗ್ರಂಥಗಳನ್ನು ಚೀನೀ ಭಾಷೆಯಲ್ಲಿ ಭಾಷಾಂತರಿಸಿದನು. ಆ ಮೇಲೆ ಅವನು ಮಡಿದನು. ಅವನ ಶಿಷ್ಯರಾಶಿ ಅತ್ಯಂತ ದೊಡ್ಡದಾಗಿದೆ.

**ಗುಣವರ್ಮ ಮತ್ತು ಅಮೋಘವಜ್ರ :—** ಗುಣವರ್ಮನು ಚೀನಕ್ಕೆ ಹೋದ ಇನ್ನೊಬ್ಬ ಭಾರತೀಯನು. ಅವನು ಮೂಲತಃ ಕಾಶ್ಮೀರದವನು; ಅರಸು ಮನೆತನದಲ್ಲಿ ಹುಟ್ಟಿದವನು. ಆದರೆ ಚಿಕ್ಕವನಿರುವಾಗಲೇ ರಾಜವೈಭವವನ್ನು ತ್ಯಜಿಸಿ ಭಿಕ್ಷುವಾದನು. ಬಳಿಕ ಕಾಶ್ಮೀರದಿಂದ ಸಿಲೋನಿಗೆ ಹೋದನು. ಅಲ್ಲಿಂದ ಕ್ಯಾಂಟನ್ ಮಾರ್ಗವಾಗಿ ಕ್ರಿ. ಶ. ೪೩೧ರಲ್ಲಿ ನಾನ್ಕಿಂಗಿಗೆ ಹೋದನು. ಭಾರತೀಯ ವಿದ್ವಾಂಸರು ಚೀನಕ್ಕೆ ಹೋಗುವ ಈ ಪರಿಪಾಠ ಎಂಟನೆಯ ಶತಕದಲ್ಲಿಯೂ ಮುಂಬರಿದಿತ್ತು. ಈ ಕಾಲದಲ್ಲಿ ವಜ್ರಭೋಧಿ ಮತ್ತು ಅವನ ಶಿಷ್ಯನಾದ ಅಮೋಘ ವಜ್ರರೆಂಬ ಭಾರತೀಯರು ಚೀನಕ್ಕೆ ಹೋದರು. ಕ್ರಿ. ಶ. ೭೩೨ರಲ್ಲಿ ವಜ್ರಬೋಧಿ ತೀರಿಕೊಂಡನು. ಅಮೋಘವಜ್ರನು ಬಹುಕಾಲ ಅಲ್ಲಿ ವಾಸವಾಗಿದ್ದು ಸುಮಾರು ೭೭ ಧರ್ಮಗ್ರಂಥಗಳನ್ನು ಚೀನೀ ಭಾಷೆಗೆ ಭಾಷಾಂತರಿಸಿದನು. ಹತ್ತನೆಯ ಶತಕ ದಲ್ಲಿ ಇಬ್ಬರು ಭಾರತೀಯರು ಚೀನಕ್ಕೆ ಹೋದರು. ಅವರ ಚೀನೀ ಹೆಸರುಗಳು ತಿನ್–ಸಿತ್–ತ್ಸಾಹಿ ಮತ್ತು ಚೀಹು ಎಂದು ಉಪಲಬ್ಧವಿವೆ; ಭಾರತೀಯ ಹೆಸರು ಗಳು ಗೊತ್ತಾಗಿಲ್ಲ. *

**ಚೀನೀ ಬೌದ್ಧ ಧರ್ಮದ ವೈಶಿಷ್ಟ್ಯ:—** ಹೀಗೆ ಚೀನದಲ್ಲಿ ಬೌದ್ಧ ಧರ್ಮದ ಪ್ರಸಾರವಾಗುತ್ತಲಿದ್ದರೂ ಖೋತಾನ ಅಥವಾ ಮಧ್ಯ ಆಶಿಯದಲ್ಲಿಯಂತೆ ಚೀನ ದಲ್ಲಿ ಅದು ಜನಮನವನ್ನು ಸೂರೆಗೊಳ್ಳಲಿಲ್ಲ ಅಲ್ಲಿ ಕುಂಗ್–ಫ್ಯೂ–ತ್ಸೆಯ ಬೋಧನೆ ಜನರಿಗೆ ಪರಿಚಯವಾಗಿತ್ತು; ಅದರಿಂದ ಚೀನದಲ್ಲಿಯ ಬೌದ್ಧಧರ್ಮಕ್ಕೆ ಕುಂಗ್–ಫ್ಯೂತ್ಸೆಯ ಪ್ರವೃತ್ತಿಪರ ದೃಷ್ಟಿಕೋನದ ಜೋಡು ದೊರೆತಿತ್ತು. ಚೀನದಲ್ಲಿಯ ಬೌದ್ಧರು ಆನಂದವೃತ್ತಿಯವರು; ಐಹಿಕ ಸುಖವನ್ನು ತುಚ್ಛೀಕರಿಸುವವರಲ್ಲ. ಬೇರೆ ಕಡೆಗಳಲ್ಲಿಯ ಬೌದ್ಧರು ಐಹಿಕಸುಖೋಪಭೋಗಗಳಿಗೆ ಪರಾಙ್ಮುಖರಾಗಿರುವುದು ಕಂಡುಬರುತ್ತದೆ.

**ಫಾಹಿಯೆನ್:—** ಕ್ರಿ. ಶ. ಮೊದಲನೆಯ ಶತಕದ ಕಶ್ಯಪ ಮತಂಗನಿಂದ

* ಪ್ರಾಚೀನ ಕಾಲದಲ್ಲಿ ಚೀನಕ್ಕೆ ಹೋದ ಭಾರತೀಯರು ಸಂಸ್ಕೃತ ಗ್ರಂಥಗಳನ್ನು ಚೀನೀ ಭಾಷೆಗೆ ಪರಿವರ್ತಿಸಿ ಭಾರತೀಯ ವಿದ್ಯೆಯ ಮೇಲೆ ದೊಡ್ಡ ಉಪಕಾರ ಮಾಡಿದ್ದಾರೆ. ಏಕೆಂದರೆ ಮುಂದೆ ಮುಸಲ್ಮಾನರ ದಾಳಿಗಳಿಂದ, ಅದರಿಂದುಂಟಾದ ಅನರ್ಥಗಳಿಂದ ಅನೇಕ ಸಂಸ್ಕೃತ ಗ್ರಂಥಗಳು ನಾಶವಾದವು. ಆದರೆ ಆ ಗ್ರಂಥಗಳು ಚೀನೀ ಭಾಷೆಯಲ್ಲಿಯೇ ಆಗಲಿ ನಮಗೆ ಸಿಕ್ಕುವಂತಾಯಿತು. ಖೋತಾನ ಭಾಗದಲ್ಲಿ ಎಷ್ಟೋ ಮೂಲ ಸಂಸ್ಕೃತ ಗ್ರಂಥಗಳೂ ದೊರೆತಿವೆ.

ಮೊದಲಾಗಿ ಮೇಲಿಂದ ಮೇಲೆ ಭಾರತೀಯ ಬೌದ್ಧ ಭಿಕ್ಷುಗಳು ಚೀನಕ್ಕೆ ಹೋಗಿ ಬೌದ್ಧಧರ್ಮವನ್ನು ಪ್ರಚುರಪಡಿಸಿದರು. ಅದರಿಂದ, ಆ ಧರ್ಮದ ಮೂಲ ಸ್ಥಾನವನ್ನು ನೋಡಬೇಕೆಂದು ಚೀನೀಯರಿಗೆ ಇಚ್ಛೆಯುಂಟಾಯಿತು. ಅನೇಕ ಚೀನೀ ಪ್ರವಾಸಿಗಳು ಬೌದ್ಧಧರ್ಮದ ಅಭ್ಯಾಸಕ್ಕಾಗಿ ಭಾರತಕ್ಕೆ ಬಂದರು. ಅವರಲ್ಲಿ ಫಾಹಿಏನ್, ಯುಅನ್-ಚ್ವಂಗ್ ಮತ್ತು ಇತ್ಸಿಂಗ್ ಇವರು ಪ್ರಸಿದ್ಧರು ಫಾಹಿಏನ್‌ನು ಕುಮಾರಜೀವನ ಶಿಷ್ಯನು. ಅವನು ಕ್ರಿ. ಶ. ೩೯೯ರಲ್ಲಿ ತನ್ನ ದೇಶದಿಂದ ಹೊರಟು ಕಾಶ್ಮೀರ ಮಾರ್ಗವಾಗಿ ಭಾರತವನ್ನು ಪ್ರವೇಶಿಸಿದನು. ಈ ಪ್ರವಾಸದಲ್ಲಿ ಅವನು ಭಾರತದ ೫೦೦ ಸಂಘಾರಾಮ (ವಿಹಾರ) ಗಳನ್ನು ಸಂದರ್ಶಿಸಿದನು. ಸಂಘಾರಾಮವೆಂದರೆ ವಿದ್ಯೆಯ ಸಂಘಟಿತ ಕೇಂದ್ರ. ಇವುಗಳಲ್ಲಿ ಕಾನ್ಯಕುಬ್ಜ, ಶ್ರಾವಸ್ತಿ, ಕುಶನಗರಗಳಲ್ಲಿಯ ಸಂಘಾರಾಮಗಳನ್ನು ಅವನು ಒಳ್ಳೇ ಗೌರವ ಪೂರ್ವಕವಾಗಿ ಉಲ್ಲೇಖಿಸಿದ್ದಾನೆ. ಅವನು ನೋಡಿದಂತೆ ಒಂದೊಂದು ವಿಹಾರದಲ್ಲಿ ೩,೦೦೦ ಭಿಕ್ಷುಗಳಿದ್ದರು. ಫಾಹಿಏನನು ಕಾಶಿ, ರಾಜಗೃಹ, ಗಯೆ, ಕೋಶಾಂಬಿ, ಚಂಪಾ ಮುಂತಾದ ಊರುಗಳನ್ನು ನೋಡಿದನು. ಅಲ್ಲಿಯ ವಿಹಾರಗಳಿಗೆ ವ್ಯಾಪಾರಿಗಳು ಬಗೆಬಗೆಯ ಕಾಣಿಕೆ ಸಲ್ಲಿಸುತ್ತಿದ್ದರು. ಆದುದರಿಂದ ಅಲ್ಲಿಯ ಜನರ ಜೀವನವು ಸಾಮಾನ್ಯ ಜನತೆಯ ಜೀವನಕ್ಕಿಂತ ಸಮೃದ್ಧವಾಗಿತ್ತು. ವಿಹಾರವಾಸಿಗಳ ಬಗ್ಗೆ ರಾಜರ ಮತ್ತು ಜನತೆಯ ಸಹಾನುಭೂತಿಯಿದ್ದುದರಿಂದ, ಅನೇಕ ತರುಣರು ವಿದ್ಯಾರ್ಜನೆಯ ನೆವದಿಂದ ಅಲ್ಲಿದ್ದು ಸ್ವಕೀಯ ಲಾಭ ಮಾಡಿಕೊಳ್ಳುತ್ತಿದ್ದರು. ಈ ಅನಿಷ್ಟ ಪ್ರವೃತ್ತಿಯನ್ನು ಫಾಹಿಏನನು ತನ್ನ ಲೇಖನಗಳಲ್ಲಿ ಉಲ್ಲೇಖಿಸಿರುವನು. ಈ ದೇಶದಲ್ಲಿದ್ದಾಗ ಅವನು ಹಲವು ಗ್ರಂಥಗಳನ್ನು ಪ್ರತಿ ಮಾಡಿಕೊಂಡನು. ಅವುಗಳಲ್ಲಿ ವಿನಯ ಸರ್ವಾಸ್ತಿವಾದ, ಸಂಯುಕ್ತಾಭಿಧರ್ಮಹೃದಯ ಶಾಸ್ತ್ರ ಇತ್ಯಾದಿ ದೊಡ್ಡ ದೊಡ್ಡ ಗ್ರಂಥಗಳಿವೆ.



ಯುಅನ್-ಚ್ವಂಗ್

**ಯುಅನ್-ಚ್ವಂಗ:**— ಕ್ರಿ. ಶ. ಏಳನೆಯ ಶತಕದಲ್ಲಿ ಯುಅನ್-ಚ್ವಂಗ್ ಎಂಬ ಚೀನದ ಭಿಕ್ಷು ಭಾರತಕ್ಕೆ ಬಂದನು. ಆಂಗ್ಲ ಗ್ರಂಥಗಳಲ್ಲಿ ಇವನನ್ನು ಹುಏನ್ ತ್ಸಂಗ್ ಎಂದು

ಸಂಬೋಧಿಸಲಾಗಿದೆ. ಇವನು ಕ್ರಿ. ವ. ೬೨೯ ರಿಂದ ೬೪೫ರ ವರೆಗೆ ಭಾರತದಲ್ಲಿದ್ದನು. "ಬೌದ್ಧಧರ್ಮದ ಸೂರ್ಯನು ಮುಳುಗಿದ ಮೇಲೆ ಸುತ್ತಲಿನ ಅಂಧಕಾರದಲ್ಲಿ ಭಾರತವು ಹುಣ್ಣಿಮೆಯ ಚಂದ್ರನಂತೆ ಜಗತ್ತಿಗೆ ಬೆಳಕನ್ನು ಬೀರಿತು." ಎಂದು ಅವನು ಎಂದಿದ್ದಾನೆ. ಯುಅನ್ ಚ್ವಂಗ್ ಭಾರತಕ್ಕೆ ಬಂದಾಗ ಬೌದ್ಧ ಧರ್ಮವು ಹಿಂದೆ ಬಿದ್ದು ವೈದಿಕ ಧರ್ಮವು ಉದಯವಾಗುತ್ತಲಿತ್ತು. ಭಾರತವನ್ನು ಅವನು ಬ್ರಾಹ್ಮಣ ದೇಶವೆಂದು ಕರೆದಿದ್ದಾನೆ. ಈಗ ಪಾಲಿಯಂತಹ ಭಾಷೆ ಹಿಂದೆ ಬಿದ್ದು ಸಂಸ್ಕೃತ ವಿದ್ಯೆಯು ಪುನರುಜ್ಜೀವನವಾಗುತ್ತಿತ್ತು. ಯುಅನ್ ಚ್ವಂಗನು ಭಾರತದಲ್ಲಿ ಅನೇಕ ನಗರಗಳನ್ನು ಸಂದರ್ಶಿಸಿದನು. ಗಾಂಧಾರ, ತಕ್ಷಶಿಲೆ, ಪ್ರಯಾಗ, ಅಯೋಧ್ಯೆ, ಕೋಶಾಂಬಿ, ನಾಲಂದಾ, ವೈಶಾಲಿ, ಮೋಂಘೀರ, ಚಂಪಾ, ಧನಕಟಕ (ಬೆಝುವಾಡ) ಭಡೋಚ, ಸುರತ, ವಲ್ಲಭಿ, ಉಜ್ಜಯನಿ, ಚಿತೋಡ, ಬಾದಾಮಿ ಇತ್ಯಾದಿಗಳನ್ನು ಅವನು ನೋಡಿದನು; ಮಹಾರಾಷ್ಟ್ರಕ್ಕೂ ಬಂದಿದ್ದನು. ಭಾರತದಲ್ಲಿ ಅವನು ಒಟ್ಟು ೫೦೦೦ ವಿಹಾರಗಳನ್ನು ಸಂದರ್ಶಿಸಿ, ಅವುಗಳಲ್ಲಿ ಒಟ್ಟು ೨೧೨೧೩೦ ಭಿಕ್ಷುಕರಿದ್ದರೆಂದು ಲೆಕ್ಕಮಾಡಿ ಉಲ್ಲೇಖಿಸಿದ್ದಾನೆ. ಯುಅನ್ ಚ್ವಂಗ್ ಅಲ್ಲಲ್ಲಿಯ ಶಿಕ್ಷಣ ಸಂಸ್ಥೆಗಳನ್ನು ಸಂದರ್ಶಿಸುತ್ತಿದ್ದಾಗ, ಜ್ಞಾನೋಪಾಸನೆಗಾಗಿ ಸಂನ್ಯಾಸದಲ್ಲಿ ಪ್ರೀತಿ, ವಿದ್ಯೆಗೆ ರಾಜಾಶ್ರಯ, ಜಗತ್ತಿನ ಕಲ್ಯಾಣಕ್ಕಾಗಿ ಐಹಿಕ ಜೀವನದ ತ್ಯಾಗ ಈ ಬೌದ್ಧಿಕ ಜೀವನದ ತ್ರಿವಿಧ ಲಕ್ಷಣಗಳು ಭಾರತದಲ್ಲಿ ಅವನಿಗೆ ಕಂಡವು. ಈ ವಿಷಯವನ್ನು ಗೌರವಪೂರ್ವಕವಾಗಿ ಅವನು ಉಲ್ಲೇಖಿಸಿದ್ದಾನೆ.

**ಇತ್ಸಿಂಗ್ :—** ಯುಅನ್ ಚ್ವಂಗನ ತರುವಾಯ ಕ್ರಿ. ವ. ಏಳನೆಯ ಶತಕದ ಕೊನೆಯ ಭಾಗದಲ್ಲಿ (ಕ್ರಿ. ವ. ೬೭೩) ಇತ್ಸಿಂಗ್ ಎಂಬ ಚೀನೀ ಭಿಕ್ಷು ಇಲ್ಲಿಗೆ ಬಂದನು. ನಾಲಂದದಲ್ಲಿ ಹತ್ತು ವರುಷ ಅವನಿದ್ದನು. ಅಲ್ಲದೆ, ಕಪಿಲವಸ್ತು, ಶ್ರಾವಸ್ತಿ, ವಾರಣಾಸಿ, ಕುಶಿನಗರ ಮೊದಲಾದವುಗಳನ್ನು ನೋಡಿದನು. ಬುದ್ಧ ವಚನಗಳನ್ನು ಸಂಗ್ರಹಿಸುವುದು, ಬೌದ್ಧ ಧರ್ಮೀಯ ಹಸ್ತಲಿಖಿತ ಗ್ರಂಥಗಳನ್ನು ಕಲೆಹಾಕುವುದು ಅವನ ಉದ್ದೇಶವಾಗಿತ್ತು. ಒಟ್ಟು ಐದು ಲಕ್ಷ ಶ್ಲೋಕಗಳುಳ್ಳ ೪೦೦ ಹಸ್ತ ಪ್ರತಿಗಳನ್ನು ಅವನು ಕೂಡಿಸಿದನು, ಮತ್ತೆ ಮುಂದೆ ಅವುಗಳನ್ನು ೫೬ ಗ್ರಂಥಗಳ ರೂಪದಲ್ಲಿ ಚೀನೀ ಭಾಷೆಗೆ ಪರಿವರ್ತಿಸಿದನೆಂದು ತಿಳಿದುಬರುತ್ತದೆ. ಇತ್ಸಿಂಗನ ಇಲ್ಲಿಯ ಸಂಚಾರದಲ್ಲಿ ಕೆಲ ಚೀನೀ ವಿದ್ಯಾರ್ಥಿಗಳೂ ಅವನಿಗೆ ಭೆಟ್ಟಿಯಾದರಂತೆ. ಅವನು ತನ್ನ ಗ್ರಂಥದಲ್ಲಿ ಆ ಕಾಲದ ವಿಹಾರಗಳನ್ನೂ ಅಲ್ಲಿಯ ಸಚ್ಚರಿತ ವಿದ್ವಾಂಸರನ್ನೂ ವರ್ಣಿಸಿದ್ದಾನೆ.

**ಜಾವಾ–ಸುಮಾತ್ರಾ ಕಡೆಗಳಲ್ಲಿ ಹಬ್ಬುಗೆ:—** ಚೀನ ಭಾರತಗಳ ಸಂಬಂಧದ ಸಿಂಹಾವಲೋಕನವಾಯಿತು. ಇನ್ನು ಭಾರತದ ಆಗ್ನೇಯದಲ್ಲಿದ್ದ ಜಾವಾ, ಸುಮಾತ್ರಾ, ಕಾಂಬೋಡಿಯ ಭಾಗಗಳೊಡನಿದ್ದ ಭಾರತದ ಸಂಬಂಧವನ್ನು ಸಮಾಲೋಚಿಸಿ ಈ ಖಂಡವನ್ನು ಮುಗಿಸುವ. ಈ ಪ್ರದೇಶಗಳಲ್ಲಿ ಭಾರತೀಯರು ಕೇವಲ



ಪ್ರಾಚೀನ ಭಾರತೀಯ ಪ್ರವಾಸಿಗಳು ಜಾವಾ ದ್ವೀಪಕ್ಕೆ ಹೋಗುತ್ತಿದ್ದಾರೆ

ಸಂಸ್ಕೃತಿಯ ಪ್ರಸಾರವನ್ನು ಮಾಡಿರದೆ, ಎಷ್ಟೋ ಕಡೆಗಳಲ್ಲಿ ರಾಜಕೀಯ ಸತ್ತೆಯನ್ನು ಸ್ಥಾಪಿಸಿದರು. ಕ್ರಿ. ಪ. ಎರಡನೆಯ ಶತಕದಲ್ಲಿ ಅಲೆಕ್ಝಾಂಡ್ರಿಯದಲ್ಲಿ ಇರುತ್ತಿದ್ದ ಟಾಲೆಮಿ ಎಂಬ ಅಭ್ಯಾಸಕನು ತತ್ಕಾಲೀನ ಜಗತ್ತಿನ ಭೌಗೋಲಿಕ ಜ್ಞಾನವನ್ನು ಸಂಪಾದಿಸಿದನು; ಜಗತ್ತಿನ ನಕ್ಷೆಯನ್ನು ತೆಗೆಯಲು ಪ್ರಯತ್ನಿಸಿದನು. ಅವನು ಕೊಟ್ಟ ಜಾವಾದ್ವೀಪದ ಪ್ರಸಿದ್ಧ ವ್ಯಾಪಾರ ಕೇಂದ್ರಗಳ ಹೆಸರುಗಳು ಸಂಸ್ಕೃತ ಸ್ವರೂಪದವಾಗಿವೆ. ಜಾವಾ ಮೊದಲು 'ಯವದ್ವೀಪ' ಎಂದು ಹೆಸರಾಗಿತ್ತು. ಅಲ್ಲದೆ 'ಜಾತಕ'ವೆಂಬ ಬೌದ್ಧಗ್ರಂಥದಲ್ಲಿ, 'ನನ್ನಲ್ಲಿ ಸಂಪತ್ತಿರುವತನಕ ನಾನೊಂದು ಹಡಗಿನಲ್ಲಿ ಸುವರ್ಣದ್ವೀಪಕ್ಕೆ ಹೋಗಿ ಅಲ್ಲಿಂದ ಧನವನ್ನು ತರುತ್ತೇನೆ' ಎಂಬ ವಾಕ್ಯವುಂಟು. ಸುಮಾತ್ರಾ ದ್ವೀಪವೇ ಈ ಸುವರ್ಣ ದೇಶವೆಂದು ಪಂಡಿತರು ತರ್ಕಿಸಿದ್ದಾರೆ. ಇಂತಹ ಎಷ್ಟೋ ಅಲ್ಲಲ್ಲಿ ಚದರಿಹೋಗಿರುವ ಉಲ್ಲೇಖಗಳಿಂದ ಪೂರ್ವ ದಿಕ್ಕಿನ ದ್ವೀಪಗಳೊಡನೆ ಬಹು ಪ್ರಾಚೀನ ಕಾಲದಿಂದ ಭಾರತದ ವ್ಯಾಪಾರಿ ಸಂಬಂಧವಿತ್ತೆಂಬುದು ಸಿದ್ಧವಾಗುತ್ತದೆ. ಸಯಾಮದ ಆಚೆ ಈಗ ಇಂಡೋಚಾಯನಾ ಎಂದು ಹೆಸರಾಗಿರುವ ಭಾಗದಲ್ಲಿ ಚಂಪಾ ಮತ್ತು ಕಂಬುಜ ಅಥವಾ ಕಂಬುದ್ವೀಪ (ಈಗಿನ ಕಾಂಬೋಡಿಯಾ) ಎಂಬೆರಡು ಭಾರತೀಯ ವಸಾಹತುಗಳಿದ್ದವು ಚಂಪಾ ರಾಜ್ಯದ ಹನ್ನೊಂದನೆಯ ಶತಕದ ರಾಜರ ಹೆಸರುಗಳ ಜಯಪರಮೇಶ್ವರ, ಮಹಾದೇವ, ಈಶ್ವರಮೂರ್ತಿ. ರುದ್ರವರ್ಮನ್, ಹರಿಹರವರ್ಮನ್, ಇಂದ್ರವರ್ಮನ್ ಹೀಗೆ ಭಾರತೀಯ ಮತ್ತು ಸಂಸ್ಕೃತ ಸ್ವರೂಪದವಿವೆ. ಕ್ರಿ. ಪ. ಹದಿನಾರನೆಯ ಶತಕದಲ್ಲಿ ಈ ರಾಜ್ಯ ಮಂಗೋಲರ ದಾಳಿಗೆ ಬಲಿಯಾಯಿತು.

**ಕೌಂಡಿಣ್ಯನ ಪರಾಕ್ರಮ** :— ಕಂಬುಜದಲ್ಲಿ ಕ್ರಿ. ವ. ಒಂದನೆಯ ಅಥವಾ ಎರಡನೆಯ ಶತಕದಲ್ಲಿ ಸೋಮಾ ಎಂಬ ನಾಗಕನ್ಯೆ ಆಳುತ್ತಿದ್ದಳು ಕೌಂಡಿಣ್ಯನು ಜಲಮಾರ್ಗದಿಂದ ದಾಳಿಮಾಡಿ ಅದನ್ನು ಗೆದ್ದುಕೊಂಡನು; ಅವಳು ಅವನ ಪಟ್ಟದ ರಾಣಿಯಾದಳು. ಅಂದಿನಿಂದ ಅಲ್ಲಿ ಸಂಸ್ಕೃತಿಯ ಪ್ರಸಾರವಾಯಿತೆಂದೂ ಜನರು ವಸ್ತ್ರಪ್ರಾವರಣಗಳನ್ನು ಉಪಯೋಗಿಸಿಕೊಂಡು ಇರಲಾರಂಭಿಸಿದರೆಂದೂ ಉಲ್ಲೇಖವಿದೆ. ಈ ಕೌಂಡಿಣ್ಯ ವರ್ಣದಿಂದ ಬ್ರಾಹ್ಮಣ. ಆದರೆ ಅವನು ಕಂಬುಜದ ಮೇಲೆ ದಾಳಿ ಮಾಡಿದ್ದು ಭಾರತದಿಂದಲೋ ಹೇಗೆ ಎಂಬುದಾಗಿ ಶ್ರೀ. ಪಣಿಕ್ಕರರು ತಮ್ಮ 'ಎ ಸರ್ವೇ ಆಫ್ ಇಂಡಿಯನ್ ಹಿಸ್ಟ್ರಿ'ಯಲ್ಲಿ ಪ್ರಶ್ನಿಸಿದ್ದು ಅದಕ್ಕೆ ನಿಶ್ಚಿತ ಉತ್ತರವನ್ನು ಕೊಟ್ಟಿಲ್ಲ. ಆದರೆ ಮೂರನೆಯ ಶತಕದಲ್ಲಿ ಕಂಬುಜರನ್ನು ಸಂದರ್ಶಿಸಿದ ಚೀನೀ ವಕೀಲನೊಬ್ಬನ ಮತದಂತೆ ಕೌಂಡಿಣ್ಯನು ಮಲಯದಿಂದ ಆ ಕಡೆ ದಿಗ್ವಿಜಯ ಮಾಡಿರಬೇಕು. ಅದನ್ನು ಸಾಧಾರವೆಂದು ಒಪ್ಪಿದರೆ ಮಲಯದಲ್ಲಿಯ ಹಿಂದ ಸಂಸ್ಕೃತಿಯ ಪ್ರಾಚೀನತ್ವವು ಸಹಜವಾಗಿ ಲಕ್ಷಕ್ಕೆ ಬರುವುದು. ಇರಲಿ. ಕಂಬುಜಕ್ಕೆ ಚೀನೀ ಜನರು ಫೂನಾನ ಎನ್ನುತ್ತಾರೆ. ಆರನೆಯ ಶತಕದಲ್ಲಿ ಈ ದೇಶ ಬಹಳ ಊರ್ಜಿತಸ್ಥಿತಿಯಲ್ಲಿತ್ತು. ಜಯವರ್ಮನ್, ಯಶೋವರ್ಮನ್, ಸೂರ್ಯವರ್ಮನ್ ಇತ್ಯಾದಿಯಾಗಿ ಅಲ್ಲಿಯ ತತ್ಕಾಲೀನ ಪ್ರಸಿದ್ಧ ರಾಜರ ಹೆಸರುಗಳಿದ್ದವು ಪ್ರಾಚೀನ ಸಂಸ್ಕೃತ

ಶಿಲಾಲೇಖಗಳಿಂದ ಈ ರಾಜರ ವಿಷಯದಲ್ಲಿ ಹೆಚ್ಚು ಹೆಚ್ಚು ಸಂಗತಿಗಳು ಉಪಲಬ್ಧವಾಗುತ್ತಿವೆ. ಕಂಬುಜ ದೇಶದಲ್ಲಿ ಅಂಗರಕೋರವಟ ಎಂಬ ಹೆಸರಿನ ವಿಷ್ಣುವಿನ




ಪ್ರಚಂಡ ಶಿವದೇವಾಲಯವಿದೆ. ಇದಕ್ಕೆ ಒಂದರ ಮೇಲೊಂದು ಗಚ್ಚಿನ ಅಂತಸ್ತುಗಳಿವೆ; ಪ್ರತಿ ಅಂತಸ್ತಿಗೂ ಸುಶೋಭಿತವಾದ ಗ್ಯಾಲರಿಯಿದೆ; ಇಂತಹ ಮೂರು ಅಂತಸ್ತುಗಳಿದ್ದು, ಸೋಪಾನಗಳಿಂದ ಅವುಗಳನ್ನೇರಿ ಹೋದರೆ ಮನುಷ್ಯನು ಮುಖ್ಯ ಮಂದಿರದ ಎದುರಿಗೆ ಹೋಗಿ ತಲುಪುತ್ತಾನೆ; ಈ ಮಂದಿರದ ಎತ್ತರ ನೆಲದಿಂದ ೨೧೩ ಅಡಿಯಿದೆ; ಮಂದಿರದ ಪವಳಿ ಎರಡುಮೂರಾಂಶ ಮೈಲು ಉದ್ದ ಮತ್ತು ಅರ್ಧ ಮೈಲು ಅಗಲವಿದೆ. ಕಂಬುಜದ ರಾಜಧಾನಿ ಯಶೋಧರಪುರವನ್ನು ಯಶೋವರ್ಮನು ನಿರ್ಮಿಸಿದನು. ಅಲ್ಲಿ ಅವನು ಭವ್ಯವಾದ ಕಟ್ಟಡಗಳನ್ನೂ ಕೆರೆಗಳನ್ನೂ ಕಟ್ಟಿಸಿದನು. ಯಶೋಧಪುರದ ಸರ್ವಾಂಗೀಣ ಭವ್ಯತೆಯನ್ನು ಕಂಡರೆ, ಆ ಕಾಲದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಅದರ ಗಣನೆಯಾಗುತ್ತಿರಬೇಕೆಂದು ಹೇಳಲಭ್ಯಂತರವಿಲ್ಲ.

**ಮಲಯದಲ್ಲಿ ಶೈಲೇಂದ್ರರ ಆಳಿಕೆ :—** ಮಲಯದ್ವೀಪಕಲ್ಪದಲ್ಲಿ ಶೈಲೇಂದ್ರ ವಂಶದ ಸ್ಥಾಪನೆ ಕ್ರಿ. ವ. ಎಂಟನೆಯ ಶತಕದಲ್ಲಿ ಆಯಿತು. ಜಾವಾ, ಸುಮಾತ್ರ, ಬಾಲಿ-ಬೋರಿಯೋಗಳ ವರೆಗೆ ಇವರ ರಾಜ್ಯವ್ಯಾಪ್ತಿಯಿತ್ತು. ಆಗ ಅಲ್ಲಿಗೆ ವ್ಯಾಪಾರಕ್ಕಾಗಿ ಬಂದು ಹೋದ ಅರಬರು ಅದರ ವೈಭವವನ್ನು ವರ್ಣಿಸಿದ್ದಾರೆ. ರಾಜನನ್ನು 'ಮಹಾರಾಜ' ಎಂಬ ಪದದಿಂದ ಸಂಬೋಧಿಸುತ್ತಿದ್ದರು. ಮಹಾರಾಜನು ಅಲ್ಲಿಯ ಕೆರೆಯಲ್ಲಿ ದಿನಾಲು ಒಂದು ಬಂಗಾರದ ಇಟ್ಟಿಗೆಯನ್ನು ಚೆಲ್ಲುತ್ತಿದ್ದನೆಂಬ ದಂತಕಥೆಯುಂಟು. ಇದರಿಂದ ಅಲ್ಲಿ ಸುವರ್ಣವು ವೆಗ್ಗಳವಾಗಿತ್ತೆಂದು ತರ್ಕಿಸಬಹುದು. ಶೈಲೇಂದ್ರ ರಾಜರು ಮಹಾಯಾನ ಪಂಥಿಗಳಾಗಿದ್ದರು. ಕುಮಾರ ಘೋಷನೆಂಬ ಬೌದ್ಧ ಭಿಕ್ಷು ಶೈಲೇಂದ್ರನ ಗುರು. ಜಾವಾದ್ವೀಪದ ಬೋರೋ

ಬುದುರದಲ್ಲಿಯ ಸ್ತೂಪವನ್ನು ಶೈಲೇಂದ್ರನು ಕಟ್ಟಿಸಿದನು. ಇದು ಒಂಬತ್ತು ಮಜಲಿನ ಕಟ್ಟಡ; ಕೊನೆಯ ಅಂತಸ್ತಿನಲ್ಲಿ ಘಂಟಾಕಾರದ ಸ್ತೂಪವಿದೆ. ಪ್ರತಿ ಅಂತಸ್ತಿನ ಗ್ಯಾಲರಿಯ ಗೋಡೆಗಳಲ್ಲಿ ಬೌದ್ಧಭಿಕ್ಷುಗಳ ಜೀವನದಲ್ಲಿಯ ವಿವಿಧ ಪ್ರಸಂಗಗಳನ್ನು ಕೊರೆದಿದ್ದಾರೆ. ಇದರ ಎಲ್ಲ ಕಟ್ಟುವಿಕೆಯ ಭವ್ಯತೆಯೂ ವಿವರದ ಸೂಕ್ಷ್ಮತೆಯೂ ಸಹಜವಾಗಿ ಮನಮುಟ್ಟುವಂತಿದೆ. ಇದರಿಂದಲೆ ಬೋರೋಬುದುರದಲ್ಲಿಯ ಮನೋಹರ ಶಿಲ್ಪಕಲೆ ಜಗತ್ತಿನಲ್ಲಿಯ ಎಂಟನೆಯ ಆಶ್ಚರ್ಯವೆಂದು ತಿಳಿಯಲಾಗಿದೆ. ಈ ಶಿಲ್ಪಕಲೆಯ ಮಾದರಿ ನಿಶ್ಚಿತವಾಗಿ ಭಾರತೀಯದಾಗಿದ್ದರೂ ಈ ಮಂದಿರಗಳು ಭಾರತದಲ್ಲಿಯ ಶಿಲ್ಪಕಲೆಯನ್ನೂ ಹಿಂದೆ ಹಾಕುತ್ತಿವೆಯೆಂದು ಡಾ. ಮುಜುಮದಾರರು ಅಭಿಪ್ರಾಯ ಪಟ್ಟಿದ್ದಾರೆ.

ಶೈಲೇಂದ್ರರು ಹನ್ನೊಂದನೆಯ ಶತಕದ ವರೆಗೆ ಆಳಿದರು ಮುಂದೆ ರಾಜೇಂದ್ರ ಚೋಳನು ಅವರ ಮೇಲೆ ಹಡಗುಪಡೆಯ ದಾಳಿ ಮಾಡಿ ಗೆದ್ದನು. (ಭಾಗ ೧೨ ನೋಡಿರಿ). ಆದರೆ ಸುಮಾರು ಒಂದು ಶತಕದ ತರುವಾಯ ಶೈಲೇಂದ್ರರು ಮತ್ತೆ ಸ್ವತಂತ್ರರಾದರು. ಕೊನೆಗೆ ಹದಿಮೂರನೆಯ ಶತಕದಲ್ಲಿ ಅವರ ರಾಜ್ಯ ಮುಗ್ಗಿತು.

**ಜಾವಾದ್ವೀಪದಲ್ಲಿ ಭಾರತೀಯ ವರ್ಚಸ್ಸ :—**ಶೈಲೇಂದ್ರರ ಅಸ್ತಗತವಾಗುತ್ತಿದ್ದಾಗ ಜಾವಾದ್ವೀಪದಲ್ಲಿ ಇನ್ನೊಂದು ಅರಸುಮನೆತನ ಮೂಡುತ್ತಲಿತ್ತು. ಅಲ್ಲಿ ಒಂಬತ್ತನೆಯ ಶತಕದ ವರೆಗೆ ಶೈಲೇಂದ್ರರ ಪ್ರಭುತ್ವವಿತ್ತು. ಆಮೇಲೆ ಜಾವಾ ಸ್ವತಂತ್ರವಾಯಿತು. ಹದಿಮೂರನೆಯ ಶತಕದಲ್ಲಿ ವಿಜಯರಾಜನು ಅಲ್ಲಿ ತನ್ನ ಪ್ರಭುತ್ವ ಸ್ಥಾಪಿಸಿ ಮಜಪಹಿತವನ್ನು ರಾಜಧಾನಿ ಮಾಡಿಕೊಂಡನು. ಮುಂದಿನ ಶತಕದಲ್ಲಿ ಮಜಪಹಿತ ರಾಜ್ಯವು ಬೆಳೆದು, ಸುಮಾರು ಮಲಯದ್ವೀಪಕಲ್ಪವೆಲ್ಲ ಅದಕ್ಕೆ ಒಳಪಟ್ಟಿತು. ೧೬ನೆಯ ಶತಕದಲ್ಲಿ ಅದು ಇಸ್ಲಾಂವರ್ಚಸ್ಸಿಗೆ ಒಳಗಾಗಿ ಅಲ್ಲಿಯ ಅರಸುಮನೆತನ ಬಾಲಿ ದ್ವೀಪವನ್ನು ಆಶ್ರಯಿಸಿ, ಅಲ್ಲಿ ತನ್ನ ಸಂಸ್ಕೃತಿಯನ್ನು ರಕ್ಷಿಸಿತು. ಇಂದು ಬಾಲಿ ದ್ವೀಪದ ಹೊರತಾಗಿ ಮಿಕ್ಕ ಮಲಯದಲ್ಲೆಲ್ಲ ಇಸ್ಲಾಮೀ ಸಂಸ್ಕೃತಿಯ ವರ್ಚಸ್ಸಿದೆ. ಆದರೂ ಜಾವಾದ್ವೀಪದಲ್ಲಿ ಹಿಂದು ಸಂಸ್ಕೃತಿಯ ಅವಶೇಷಗಳು ಇಂದಿಗೂ ಗೋಚರಿಸುತ್ತವೆ. ನೂರಾರು ಹಿಂದು ದೇವಾಲಯಗಳನ್ನು ಭಗ್ನ ಸ್ಥಿತಿಯಲ್ಲಿ ಕಾಣಬಹುದು. ಅಲ್ಲಿಯ ಸಾಹಿತ್ಯದಲ್ಲಿ ರಾಮಾಯಣ-ಮಹಾಭಾರತಗಳ ಪ್ರಸಂಗಗಳ ಪ್ರಭಾವ ಕಂಡು ಬರುತ್ತದೆ. ಜನರು ಮುಸಲ್ಮಾನ ಧರ್ಮೀಯರಾಗಿದ್ದರೂ ಅವರ ಹೆಸರುಗಳು ಇನ್ನೂ ಹಿಂದುಗಳ ಹೆಸರುಗಳಂತಿವೆ.

**ವಿಶಾಲ ಭಾರತದ ಸಮಾಲೋಚನೆ :—** ಮೇಲಣ ಭಾರತೀಯ ಸಂಸ್ಕೃತಿ ಪ್ರಸಾರದ ತ್ರೋಟಕ ವರ್ಣನೆಯನ್ನೋದಿದರೆ ಜಿಜ್ಞಾಸೆ ತಣಿಯಲಾರದು. ಪಶ್ಚಿಮದಲ್ಲಿ ಯುಫ್ರೆಟಿಸ್ ನದಿಯ ದಡದಲ್ಲಿ ಹಿಂದು ದೇವಾಲಯಗಳು ಒಂದು ಕಾಲದಲ್ಲಿದ್ದವು. ಉತ್ತರದಲ್ಲಿ ಕಾಶಗರ, ಖೋತಾನಗಳಲ್ಲಿ ಬೌದ್ಧ ಸಂಸ್ಕೃತಿ ಹರಡಿತ್ತು. ನಾಲಂದದೊಡನೆ ತಿಬೇಟದ ಘನಿಷ್ಠ ಸಂದಂಧವಿತ್ತು. ಪೂರ್ವದಲ್ಲಿ

ಇಂಡೋಚಾಯನಾದಲ್ಲಿಯ ಚಂಪಾ ಕಂಬುಜ ರಾಜ್ಯಗಳು, ಮಲಯ ದ್ವೀಪಕಲ್ಪದಲ್ಲಿಯ ಶೈಲೇಂದ್ರ ರಾಜ್ಯ, ಜಾವಾ ಸುಮಾತ್ರಾಗಳಲ್ಲಿಯ ವಿಜಯನ ರಾಜ್ಯ ಇವೆಲ್ಲವುಗಳ ಮೇಲೂ ಭಾರತೀಯ ಸಂಸ್ಕೃತಿಯ ಮುದ್ರೆ ಇತ್ತು. ಕ್ರಿ. ಪ. ದ ಆರಂಭದಿಂದ ಕ್ರಿ. ಪ. ಹನ್ನೊಂದನೆಯ ಶತಕದವರೆಗೆ ಸಾವಿರ ಹನ್ನೆರಡುನೂರು ವರುಷಗಳ ಅವಧಿಯ ವಿಶಾಲ ಭಾರತದ ಈ ವೃತ್ತಾಂತವು ಸ್ಫೂರ್ತಿದಾಯಕವಾಗಿದೆ. ಉದಿಸುವ ಸೂರ್ಯನ ಕಿರಣಗಳು ಅರ್ಧವರ್ತುಲಾಕಾರದಲ್ಲಿ ಪಸರಿಸುವವೆಂದು ಚಿತ್ರದಲ್ಲಿ ತೋರಿಸುತ್ತಾರೆ. ಹಾಗೆಯೇ ಭಾರತದ ಮಗಧ ದೇಶದ ಕೇಂದ್ರದಿಂದ ವಾಯವ್ಯದ ಯುಫ್ರೆಟಿಸದಿಂದ ಆಗ್ನೇಯದ ಜಾವ ಸುಮಾತ್ರಗಳ ವರೆಗಿನ ಪ್ರದೇಶಗಳಲ್ಲಿ ಭಾರತೀಯ ಸಂಸ್ಕೃತಿಯ ಕಿರಣಗಳು ಅರ್ಧವರ್ತುಲಾಕಾರವಾಗಿ ಎಲ್ಲೆಡೆಗಳನ್ನೂ ಬೆಳಗುತ್ತಿದ್ದುದು ಕಂಡುಬರುವುದು; ಮತ್ತು ಇದರಿಂದ ವೇದಕಾಲದಲ್ಲಿ ಮಾತ್ರವಲ್ಲ, ಕ್ರಿಸ್ತಾಬ್ದದ ಮೊದಲಿನ ಹತ್ತುಶತಕದಲ್ಲಿಯೂ ಭಾರತದ ಇತಿಹಾಸವು ಅಭ್ಯಾಸಕರಿಗೆ ನವೀನ ದೃಷ್ಟಿಯನ್ನು ಕೊಡುವಂತಹದಿದೆ ಎಂದು ಮನವರಿಕೆಯಾಗುವುದು. ಇದುವರೆಗೂ ಅಭ್ಯಾಸಕರ ಲಕ್ಷ್ಯವು ಈ ವಿಷಯದ ಕಡೆಗೆ ಹೋಗುವಷ್ಟು ಹೋಗಿಲ್ಲ. ಭಾರತದ ಹೊರಗಿನ ಜನರು ಭಾರತೀಯ ಸಂಸ್ಕೃತಿಯನ್ನು ಅಂಗೀಕರಿಸುತ್ತಿರಬಹುದೆಂಬ ಕಲ್ಪನೆಯೇ ಜನರಿಗೆ ಸಂಭವನೀಯವಾಗಿ ತೋರುತ್ತಿರಲಿಲ್ಲ. ಪಾರತಂತ್ರ್ಯ ಸಮಯದಲ್ಲಿ ಐತಿಹಾಸಿಕ ಸಂಶೋಧನೆಯಲ್ಲಿಯೂ ಆತ್ಮವಿಶ್ವಾಸದ ಅಭಾವ ಕಂಡುಬರುತ್ತಿದ್ದುದರ ಚಿಹ್ನವಿದು. ಈಗ ಕಾಲ ಬದಲಾಗಿರುವುದರಿಂದ ಅಭ್ಯಾಸಕರು ಹೊಸ ಹುರುಪಿನಿಂದ, ಹೊಸ ನೋಟದಿಂದ ಈ ಅಜ್ಞಾತ ಇತಿಹಾಸಭಾಗದ ಮೇಲೆ ಬೆಳಕನ್ನು ಚೆಲ್ಲುತ್ತ ಹೋದಂತೆ ಪ್ರಾಚೀನ ಭಾರತದ ಕಡೆಗೆ ನೋಡುವ ಭಾರತೀಯರ ಹಾಗೂ ಹೊರಗಿನ ಜಗತ್ತಿನ ದೃಷ್ಟಿಕೋನ ಬದಲಾಗುವುದರಲ್ಲಿ ಸಂದೇಹವಿಲ್ಲ.

## ಪ್ರಶ್ನೆ

೧. ವಿಶಾಲ ಭಾರತವೆಂದರೇನು? ಪ್ರಾಚೀನ ಕಾಲದಲ್ಲಿ ಅದರ ಸ್ವರೂಪ ಹೇಗಿತ್ತು?

೨. ಜಾವಾದ್ವೀಪದಲ್ಲಿಯ ಭಾರತೀಯ ಸಂಸ್ಕೃತಿಯ ಪರಿಚಯ ಮಾಡಿಕೊಡಿರಿ.

೩. ಟಿಪ್ಪಣಿ ಬರೆಯಿರಿ :— ಶೈಲೇಂದ್ರ ಸಾಮ್ರಾಜ್ಯ ಬೇರೋಬುದುರು, ರೋಮ-ಭಾರತ ಸಂಬಂಧ.



## ಚತುರ್ದಶ ಖಂಡ

# ಮೌರ್ಯೋತ್ತರ ಪ್ರಾಚೀನ ಭಾರತದ ಸ್ವರೂಪ

**ಪ್ರಾಸ್ತಾವಿಕ :—** ಇದುವರೆಗೂ ಜಾಗತಿಕ ಆಂದೋಲನಗಳ ಹಿನ್ನೆಲೆಯಲ್ಲಿ ಪ್ರಾಚೀನ ಭಾರತದ ಜೀವನವನ್ನು ಹಕ್ಕಿನೋಟದಿಂದ ನೋಡುತ್ತ, ಕ್ರಿ. ಶ. ಹತ್ತ ನೆಯ ಶತಕದ ವರೆಗೆ ಬಂದುದಾಯಿತು. ಕ್ರಿ. ಶ. ೧೨೦೦ ದ ಸುಮಾರಿಗೆ ಭಾರತದ ಲ್ಲಿಯ ಪ್ರಾಚೀನ ಯುಗವು ಮುಗಿದು ಮಧ್ಯಯುಗವು ಆರಂಭವಾಗುತ್ತದೆ. ಮುಸ ಲ್ಮಾನರ ಆಗಮನದಿಂದ ಭಾರತದ ಇತಿಹಾಸಕ್ಕೆ ಬೇರೆ ರೂಪು ಬಂದಿತು. ವಾಸ್ತವ ವಾಗಿ, ಮುಸಲ್ಮಾನರು ಮೊದಲು ಭಾರತಕ್ಕೆ ಬಂದದ್ದು ಎಂಟನೆಯ ಶತಕದ ಆರಂಭದಲ್ಲಿಯೇ. ಆದರೆ ಆ ದೇಶದೊಡನೆ ಅವರ ಸಂಬಂಧವು ಹೆಚ್ಚು ನಿಕಟ ವಾಗತೊಡಗಿದ್ದು ಹತ್ತನೆಯ ಶತಕದ ಕೊನೆಯಿಂದ; ಹನ್ನೆರಡನೆಯ ಶತಕದ ಕೊನೆ ಯಿಂದಂತೂ ಅವರು ಇಲ್ಲಿ ರಾಜ್ಯ ಕಟ್ಟಿ ದಿಲ್ಲಿಯಲ್ಲಿ ಆಳತೊಡಗಿದರು; ಇದರ ಎಲ್ಲ ವಿಷಯಗಳು ಮುಂದಿನ ಪುಸ್ತಕದಲ್ಲಿ ಬರುತ್ತವೆ. ಈ ಮೊದಲನೆಯ ಪುಸ್ತಕದ ಈ ಕೊನೆಯ ಖಂಡದಲ್ಲಿ ಪ್ರಾಚೀನ ಭಾರತದ ಉತ್ತರ ಕಾಲದಲ್ಲಿಯ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಜೀವನದ ಸಮಾಲೋಚನೆ ಮಾಡಬೇಕಾಗಿದೆ.

**ಉತ್ಕರ್ಷಾಪಕರ್ಷಗಳ ಕಾಲ :—** ಪ್ರಾಚೀನ ಭಾರತದ ಉತ್ತರ ಕಾಲ ಎಂದರೆ ಮೌರ್ಯೋತ್ತರ ಕಾಲ. ಮೌರ್ಯಪೂರ್ವ ಕಾಲದ ಜೀವನದ ಸಮಾ ಲೋಚನೆ ಆರನೆಯ ಖಂಡದಲ್ಲಿ ಬಂದಿದೆ. ಕ್ರಿ. ಪೂ. ೧೮೫ರ ಸುಮಾರಿಗೆ ಮೌರ್ಯರ ಸಾಮ್ರಾಜ್ಯಾಧಿಪತ್ಯವು ಭಗ್ನವಾಯಿತು. ಅಂದಿನಿಂದ ಕ್ರಿ.ಶ. ೧೦೦೦ ದ ವರೆಗಿನ, ಎಂದರೆ ಸುಮಾರು ೧೨೦೦ ವರುಷಗಳ ಸುದೀರ್ಘ ಕಾಲದಲ್ಲಿ, ಶಕ, ಕುಶಾಣ, ಹೂಣ ಮೊದಲಾದ ಪರಕೀಯರ ದಾಳಿಗಳು, ಗುಪ್ತಕಾಲೀನ ಭಾರತದ ಸರ್ವಾಂಗೀಣ ಉತ್ಕರ್ಷತೆ, ಶಂಕರಾಚಾರ್ಯರು ಮಾಡಿದ ವೈದಿಕ ಧರ್ಮದ ಪುನರುಜ್ಜೀವನ, ದಕ್ಷಿಣಭಾರತದಿಂದ ಹೋಗಿ ವಿಶಾಲ ಭಾರತದಲ್ಲಿ ಭಾರತೀಯರು ಸ್ಥಾಪಿಸಿದ ನೆಲೆವೀಡುಗಳು, ವೈಭವಶಾಲಿ ವಿದ್ಯಾಪೀಠಗಳಲ್ಲಿ ನಡೆದ ನಾನಾ ವಿದ್ಯೆಗಳ ಅಧ್ಯಯನ, ರಾಜಪುತರ ಉದಯ ಮತ್ತು ಅವರು ಮುಸಲ್ಮಾನರಿಗೆ ಒಡ್ಡಿದ ಪ್ರತೀ ಕಾರ,—ಹೀಗೆ ವಿವಿಧ ಆಂದೋಲನಗಳು ಜರುಗಿದವು. ಈ ಕಾಲದಲ್ಲಿ ಸಹಜೀವನ ಮತ್ತು ಸಂಘರ್ಷ, ವಿಜಯ ಮತ್ತು ಪರಾಭವ, ಸಾಮ್ರಾಜ್ಯಗಳು ಮತ್ತು ಸಣ್ಣ ರಾಜ್ಯಗಳು, ಒಕ್ಕಟ್ಟಿನ ಪ್ರಯತ್ನಗಳು ಮತ್ತು ಒಡಕಿನ ಪ್ರಸಂಗಗಳು—ಹೀಗೆ ಒಳಿತು-ಕೆಡಕುಗಳೊಳಗಿಂದ ಭಾರತವು ಹಾಯ್ದು ಬಂದಿದೆ. ವಿಶೇಷವಾಗಿ, ಪ್ರಾಚೀನ ಕಾಲದ ಕೊನೆಯಲ್ಲಿ ಒದಗಿದ ಮುಸಲ್ಮಾನರ ದಾಳಿಗಳನ್ನು ಯಶಸ್ವಿಯಾಗಿ ಎದುರಿ ಸುವುದು ಭಾರತೀಯ ರಾಜ್ಯಸತ್ತೆಗಳಿಂದ ನೀಗಲಿಲ್ಲ. ಬರುಬರುತ್ತ ಶಾಸ್ತ್ರಗಳ ಅಭ್ಯಾ ಸವು ಹಿಂದೆ ಬಿದ್ದು, ಕರ್ಮಠ ಧಾರ್ಮಿಕವೃತ್ತಿ ಮತ್ತು ದೈವವಾದಗಳು ಜನಜೀವನ

ವನ್ನು ವ್ಯಾಪಿಸಿದವು. ಜಾಗತಿಕ ಜೀವನ ಹೋರಾಟದಲ್ಲಿ ಭಾರತವು ಹಿಂದುಳಿಯಿತು. ಯುರೋಪು ಮುಂದುವರಿಯಿತು. ಇವೆಲ್ಲವನ್ನು ಬರೆಯುವುದು ಅಪ್ರಿಯವಾದರೂ ನಡೆದುದನ್ನು ಹೇಳುವುದು ಕ್ರಮಪ್ರಾಪ್ತವಾಗಿದೆ. ಅವು ಹೇಗೆ ಘಟಿಸುತ್ತ ಹೋದವೆಂಬುದನ್ನು ಗೊತ್ತುಹಚ್ಚುವುದೂ ಅವಶ್ಯ.

**ರಾಜಕೀಯ ಸ್ಥಿತಿ:—** ಈ ಹನ್ನೆರಡುನೂರು ವರುಷಗಳಲ್ಲಿ ರಾಜಕೀಯ ದೃಷ್ಟಿಯಿಂದ ಮೊದಲು ಉನ್ನತಿಯೂ ಉತ್ತರೋತ್ತರ ಅವನತಿಯೂ ಕಾಣುತ್ತದೆ. ಈ ಕಾಲದ ಆರಂಭದಲ್ಲಿ ಇಲ್ಲಿಗೆ ಬಂದ ಶಕರೂ ಕುಶಾಣರೂ ಭಾರತೀಯ ಸಮಾಜದಲ್ಲಿ ಬೆರೆತುಹೋದರು. ಗುಪ್ತ ಕಾಲದಲ್ಲಿ ಸಮುದ್ರಗುಪ್ತನು ಭಾರತದಲ್ಲಿ ಮಾದರಿಯ ರಾಜ್ಯವನ್ನು ಸ್ಥಾಪಿಸಿದನು; ವಿಕ್ರಮಾದಿತ್ಯನು ವಿದ್ವಾಂಸರನ್ನು ಪೋಷಿಸಿದನು; ಹರ್ಷನು ಪರಾಕ್ರಮದೊಂದಿಗೆ ದಾತೃತ್ವ ಮತ್ತು ಧರ್ಮಶೀಲತೆಗಳನ್ನು ಜೊತೆಗೊಳಿಸಿ ಸಾಮ್ರಾಜ್ಯವನ್ನು ಧರ್ಮನಿಷ್ಠವಾಗಿ ರೂಪುಗೊಳಿಸಿದನು. ರಾಜಕೀಯ ದೃಷ್ಟಿಯಿಂದ ಇದು ಭಾರತದ ವೈಭವಸಂಪನ್ನತೆಯ ಉಚ್ಚಬಿಂದುವೆನ್ನಬಹುದು. ಇಲ್ಲಿಂದ ಜಾರುಗುಂಡಿಗೆ ಆರಂಭವಾಯಿತು. ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ಸಣ್ಣ ರಾಜ್ಯಗಳು ಮತ್ತು ಅವುಗಳಲ್ಲಿ ಸರಸ ವಿರಸಗಳು ಇವುಗಳ ಹೊರತು ಹೆಚ್ಚಿನ ಉದ್ಬೋಧಕ ವಿಷಯಗಳು ಕಂಡುಬರುವುದಿಲ್ಲ. ಎಷ್ಟೋ ರಾಜ್ಯಗಳಲ್ಲಿ ಜಗಳಗಳು ವಂಶಪರಂಪರೆಯಾಗಿಯೆ ನಡೆದಿರುತ್ತಿದ್ದವು. ಒಮ್ಮೆ ರಾಜಕನ್ಯೆಯ ಮದುವೆಯ ನಿಮಿತ್ತವಾದರೆ, ಇನ್ನೊಮ್ಮೆ ಮಾನಾಪಮಾನದ ನೆಪವಿರುತ್ತಿತ್ತು. ಹೂಣರ ತರುವಾಯ, ಸಿಂಧು–ರಾಜಪುತಾನಗಳ ಮೇಲಾದ ಮಹಮ್ಮದ ಕಾಶಿಮನ ದಾಳಿಯೊಂದನ್ನು ಬಿಟ್ಟರೆ, ಸುಮಾರು ಹತ್ತನೆಯ ಶತಕದ ಕೊನೆಯವರೆಗೆ ಭಾರತದ ಮೇಲೆ ಪರಕೀಯರ ದಾಳಿಯೇ ಆಗಲಿಲ್ಲ. ಸರಿ. ಸುಮಾರು ಐನೂರು ವರುಷಗಳು ನಿಷ್ಕಂಟಕವಾಗಿ ಕಳೆದವು. ಆದುದರಿಂದ ತಮ್ಮ ದೇಶದ ಮೇಲೆ ಕೈ ಮಾಡುವವರೇ ಇಲ್ಲವೆಂಬ ಗರ್ವದಲ್ಲಿಯೇ ಇಲ್ಲಿಯ ರಾಜರಿದ್ದರು. ಇವರೆಲ್ಲರನ್ನು ಏಕ ಸೂತ್ರದಲ್ಲಿ ತರುವಂಥವರು ಯಾರೂ ಆಗಲಿಲ್ಲ. ಸುಮ್ಮನೆ ಹೊತ್ತುಗಳೆಯುತ್ತ ಅವರು ಸುಖವಿಲಾಸದಲ್ಲಿದ್ದರು. ಅವರಲ್ಲಿ ಕೆಲವೊಬ್ಬರು ಪ್ರಜಾಹಿತವನ್ನು ಮಾಡುತ್ತಿದ್ದರು. ಅಶೋಕ–ವಿಕ್ರಮಾದಿತ್ಯ ಮೊದಲಾದವರ ಕೆಲವು ಆದರ್ಶಗಳು ಅವರ ಮುಂದಿದ್ದಂತೆ ಮಾತ್ರ ತೋರುವುದಿಲ್ಲ. ಮೌರ್ಯರೂ ಗುಪ್ತರೂ ಭಾರತವು ರಾಜಕೀಯ ದೃಷ್ಟಿಯಿಂದ ಒಂದು ಎಂಬ ಭಾವನೆಯನ್ನು ನಿದರ್ಶನಕ್ಕೆ ತಂದುಕೊಟ್ಟರು.* ಅಲ್ಲಿಂದೀಚೆಯ ಕಾಲದಲ್ಲಿ ಈ ಭಾವನೆ ಧಾರ್ಮಿಕ ಕ್ಷೇತ್ರದಲ್ಲಿ ಇದ್ದರೂ ರಾಜಕೀಯ ಕ್ಷೇತ್ರದಲ್ಲಿ ಸಂಪೂರ್ಣ ಇಲ್ಲದಂತಾಗಿತ್ತು.

ಮಹಾಭಾರತ, ಅರ್ಥಶಾಸ್ತ್ರ ಮತ್ತು ಮನುಸ್ಮೃತಿಗಳಲ್ಲಿ ವರ್ಣಿಸಿದ ರಾಜನ

---

* ಉತ್ತರಂ ಯತ್ ಸಮುದ್ರಸ್ಯ, ಹಿಮಾದ್ರೇಶ್ಚೈವ ದಕ್ಷಿಣಮ್॥
ವರ್ಷಂ ತತ್ ಭಾರತಂ ನಾಮ, ಭಾರತೀ ಯತ್ರ ಸಂತತಿಃ ॥

ವಿಷ್ಣು ಪುರಾಣ ೩. ೧

ಕರ್ತವ್ಯಗಳು ಹೊತ್ತಿಗೆಯಲ್ಲಿಯೇ ಉಳಿದವು. ರಾಜನನ್ನು ನಿಯಂತ್ರಿಸುವಂತಹ ಜಾಗೃತ ಲೋಕಶಕ್ತಿ ನಿದ್ರಿಸುತ್ತಿತ್ತು ಎನಿಸುತ್ತದೆ. ಮೊದಲಿನಂತೆಯೇ ನಡೆದು ಬಂದ ಗ್ರಾಮಪಂಚಾಯತಿಯ ಕಾರಭಾರವು ಮಾತ್ರ ಈ ಮಾತಿಗೆ ಅಪವಾದವಾಗಿರುವದು. ಆದುದರಿಂದ ರಾಜರಾಜರೊಳಗಿನ ಜಗಳದ ಸೆಕೆ ಹಳ್ಳಿಗಳ ಬಾಳಿಗೆ ತಾಗಲಿಲ್ಲ. ರಾಜನಿಗೆ ಕೊಡತಕ್ಕುದನ್ನು ಒಪ್ಪಿಸಿ ಕೊಟ್ಟುಬಿಟ್ಟರಾಯಿತು, ಅವರು ಸಹಸಾ ಹಳ್ಳಿಗಳ ತಂಟೆಗೆ ಬರುತ್ತಿರಲಿಲ್ಲ. ಹಳ್ಳಿಗಳ ಅಗತ್ಯಗಳ ಪೂರಯಿಕೆ ಬಹುಮಟ್ಟಿಗೆ ಅಲ್ಲಿಯೇ ಆಗುತ್ತಿತ್ತು.

**ಸಾಮಾಜಿಕ ಸ್ಥಿತಿ:—** ಮಹಾಭಾರತ ಕಾಲದ ಕೊನೆಯಲ್ಲಿ ಹಿಂದು ಸಮಾಜದಲ್ಲಿ ಹುಟ್ಟಿನಿಂದ ಜಾತಿಯನ್ನು ನಿರ್ಧರಿಸುವುದು ರೂಢಿಗೆ ಬಂದಿತು. ಮಹಾಭಾರತ ಕಾಲದಲ್ಲಿ ಬ್ರಾಹ್ಮಣನಾದ ದ್ರೋಣನು ಕ್ಷತ್ರಿಯನ ಕಾರ್ಯವನ್ನು ಮಾಡಿದ್ದಾನೆ; ಮೀನುಗಾರ ಯುವತಿಯ ಮಕ್ಕಳು ರಾಜರೆಂದು ವಿಖ್ಯಾತರಾದ ಉದಾಹರಣೆಗಳಿವೆ.* ಗುಪ್ತಕಾಲದಲ್ಲಿ ಸಮಾಜವು ವರ್ಣಾಶ್ರಮಧರ್ಮಪ್ರಧಾನವಾಗಿದ್ದಿತು. ಆಗಿನ ವಾಙ್ಮಯಗಳಿಂದ ಆ ಸಮಾಜವು ಸಂತುಷ್ಟವಾಗಿದ್ದಿತೆಂದು ತೋರುತ್ತದೆ. ಗುಪ್ತಾನಂತರದಲ್ಲಿ ರಾಜನಾಗಿದ್ದ ಹರ್ಷನು ಕ್ಷತ್ರಿಯನಲ್ಲ, ವೈಶ್ಯನು. ಆ ತರುವಾಯದ ಕಾಲದಲ್ಲಿ ಮಾತ್ರ ರಾಜಪುತ್ರರು ಅಥವಾ ಪುತ್ರಿಯರು ಇವರೇ ರಾಜರಾದದ್ದು ಕಂಡುಬರುತ್ತದೆ. ಮುಸಲ್ಮಾನರು ಇಲ್ಲಿಗೆ ಬಂದ ಬಳಿಕ ಈ ಜಾತಿಬಂಧನಗಳು ಹೆಚ್ಚು ದೃಢವಾದಂತೆ ಕಂಡು ಬರುತ್ತದೆ. ಮುಸಲ್ಮಾನರ ಆಕ್ರಮಣದಿಂದ ತಮ್ಮ ರಕ್ಷಣೆ ಮಾಡಿಕೊಳ್ಳುವುದಕ್ಕಾಗಿ ಈ ಜಾತಿಬಂಧನಗಳನ್ನು ಬಿಗಿಗೊಳಿಸಲಾಯಿತೆಂದು ಕೆಲವರ ತರ್ಕವಿದೆ. ಗ್ರೀಕರಂತಹ ಪರಕೀಯ ರಾಜರೂ ಶಕ–ಕುಶಾಣ ರಾಜರೂ ವೈಷ್ಣವ ಅಥವಾ ಹಿಂದುಗಳಾಗುತ್ತಿದ್ದರೆಂದು ತೋರುತ್ತದೆ. ಆದರೆ ಗುಪ್ತಕಾಲಾನಂತರದಲ್ಲಿ ಪರಕೀಯರಿಗೆ ಹಿಂದುಧರ್ಮದಲ್ಲಿ ಸೇರುವುದನ್ನು ಪ್ರತಿಬಂಧಿಸಲಾಯಿತು. ಆಲ್ಬೇರುನೀ ಎನ್ನುವುದೇನೆಂದರೆ, "ತಮ್ಮ ಧರ್ಮದವರಲ್ಲದವರನ್ನು–ಅವರು ತಮ್ಮ ಧರ್ಮದ ಕಡೆಗೆ ಆಕೃಷ್ಟರಾಗುತ್ತಿದ್ದರೂ ಕೂಡ— ತಮ್ಮಲ್ಲಿ ಬರಮಾಡಿಕೊಳ್ಳಲು ಹಿಂದುಗಳಿಗೆ ನಿರ್ಬಂಧವಿದೆ. ತಮ್ಮಲ್ಲಿದ್ದುದರ ಬಗ್ಗೆ ಪೊಳ್ಳು ಹೆಮ್ಮೆ ಅವರಿಗೆ ಉಂಟಾಗುತ್ತ ಬಂದಿತು. ಹೊಸ ಜ್ಞಾನದ ಅಗತ್ಯ ಅವರಿಗಿಲ್ಲ ಎಂದೆನಿಸತೊಡಗಿತು." ಹನ್ನೊಂದನೆಯ ಶತಕದ ಪರಿಸ್ಥಿತಿಯನ್ನು ವರ್ಣಿಸುತ್ತ ಆಲ್ಬೆರುನಿ, "ತಮ್ಮ ದೇಶದ ಹೊರತು ಜಗತ್ತಿನಲ್ಲಿ ಮತ್ತೊಂದು ಒಳ್ಳೆಯ ದೇಶವಿಲ್ಲ, ಅದರಂತಹ ರಾಷ್ಟ್ರವಿಲ್ಲ; ತಮ್ಮ ರಾಜರಂಥ ರಾಜರು, ತಮ್ಮ ಧರ್ಮದಂತಹ ಧರ್ಮವಿಜ್ಞಾನಗಳು ಇನ್ನೆಲ್ಲಿಯೂ ಇಲ್ಲ ಎಂದು ಹಿಂದುಗಳು ನಂಬಿದ್ದಾರೆ. ಅವರು ಶೀಘ್ರಕೋಪಿಗಳೂ ವೃಥಾಭಿಮಾನಿಗಳೂ ತಾವು ಪಂಡಿತರೆಂದು ತಿಳಿಯುವವರೂ ಜಡಬುದ್ಧಿಗಳೂ ಆಗಿದ್ದಾರೆ. ಅವರು ಪ್ರವಾಸ ಮಾಡಿದ್ದಾದರೆ ಎರಡನೆಯ ರಾಷ್ಟ್ರದೊಡನೆ ಸಂಪರ್ಕ ಬೆಳೆಸಿದರೆ ಅವರ ಈ ವೃತ್ತಿಯು ಬೇಗನೆ

* ಶಂತನು—ಮತ್ಸ್ಯಗಂಧೆ

ಬದಲಾದೀತು. ಏಕೆಂದರೆ ಅವರಷ್ಟು ಅವರ ಈ ಪೂರ್ವಜರು ಸಂಕುಚಿತವೃತ್ತಿಯವರಾಗಿರಲಿಲ್ಲ."* ಎಂದಿದ್ದಾನೆ.

**ಸ್ತ್ರೀಯರ ಸ್ಥಿತಿ :—** ಸ್ತ್ರೀಯರಿಗೆ ಪುರುಷರಿಗೆ ಸಮಾನವಾದ ಸ್ಥಾನ ವೇದ ಕಾಲದಲ್ಲಿತ್ತು. ಧರ್ಮಪತ್ನಿಯ ಸಹಕಾರ್ಯವಿಲ್ಲದೆ ಯಜ್ಞಗಳಾಗುತ್ತಿರಲಿಲ್ಲ. ವೇದೋತ್ತರ ಕಾಲದಲ್ಲಿ ಸ್ತ್ರೀಯರ ವೇದಾಧಿಕಾರವನ್ನು ಕಸಿದುಕೊಂಡಿರಬೇಕು. ಮೌರ್ಯ–ಗುಪ್ತ–ಹರ್ಷಕಾಲದಲ್ಲಿ ಅರಸುಮನೆತನದ ಹೆಣ್ಣು ಮಕ್ಕಳು ಶಿಕ್ಷಣ ಪಡೆಯುತ್ತಿದ್ದರೆಂದು ಹೇಳಬಹುದು. ಅನಂತರ ರಾಜ್ಯಶ್ರೀಯಂತಹ ಉದಾಹರಣೆಗಳು ವಿರಳವಾಗಿವೆ, ಗಂಡಸರ ಜ್ಞಾನಲಾಲಸೆಯೆ ಕಡಿಮೆಯಾಗಿರುವಾಗ ಹೆಂಗಸರ ಗಮನವು ವಿದ್ಯೆಯ ಕಡೆಗೆ ಹೋಗುವುದಾದರೂ ಹೇಗೆ? ಪ್ರೌಢವಿವಾಹವು ನಿಷಿದ್ಧವಾಗಿರಲಿಲ್ಲ. ಅಥವಾ, ಬಾಲವಿವಾಹವನ್ನೇ ಮಾಡಬೇಕೆಂಬ ನಿರ್ಬಂಧವೂ ಇರಲಿಲ್ಲ. ಆದರೂ ಕೂಡ ಸಮಾಜವು ಬಾಲವಿವಾಹದ ಕಡೆಗೆ ಒಲಿಯಹತ್ತಿತ್ತು. ರಜಪೂತರಲ್ಲಿ ವೀರಮಾತೆ ಮತ್ತು ವೀರಪತ್ನಿಯರು ಆಗುವದು ಭೂಷಣವೆಂದು ತಿಳಿಯುತ್ತಿದ್ದರು. ಆದರೆ ಸತಿಹೋಗುವ ಸ್ತ್ರೀಯರ ಬಗ್ಗೆಯೂ ಆಕೆಯ ಎರಡೂ ಕಡೆಯ ಕುಲಗಳ ಬಗ್ಗೆಯೂ ಸಮಾಜದಲ್ಲಿ ಆದರವಿತ್ತು. ಸ್ತ್ರೀಯರ ಪುನರ್ವಿವಾಹಕ್ಕೆ ಪ್ರತಿಬಂಧವಿರಲಿಲ್ಲ; ಆದರೆ ಅದು ಶಿಷ್ಟಸಮ್ಮತವಾಗಿರಲಿಲ್ಲ.

**ಸಂಯುಕ್ತ ಕುಟುಂಬ ಪದ್ಧತಿ :—** ಸಂಯುಕ್ತ ಕುಟುಂಬ ಪದ್ಧತಿ ಪ್ರಚಲಿತವಾಗಿತ್ತು. ಒಂದೇ ಮನೆಯಲ್ಲಿ ಯಜಮಾನ, ಅವನ ಅಣ್ಣತಮ್ಮಂದಿರು ಅವರೆಲ್ಲರ ಮಕ್ಕಳು ಮತ್ತು ಅವರವರ ಹೆಂಡಿರು ಎಲ್ಲರೂ ಕೂಡಿ ಇರುತ್ತಿದ್ದರು. ಬೇಸಾಯವೇ ಅವರ ಮುಖ್ಯ ಉದ್ಯೋಗವಾಗಿದ್ದರಿಂದ ಈ ಕುಟುಂಬಗಳು ತಮ್ಮ ಹಳ್ಳಿಯಲ್ಲಿರುವುದು ಶಕ್ಯವಿತ್ತು. ಗಂಡಸರು ಹೊಲಗಳಲ್ಲಿ ದುಡಿದರೆ ಹೆಂಗಸರು ಮಕ್ಕಳು ಮರಿ ಜೋಪಾನ ಮಾಡುವರು. ಮನೆಯಲ್ಲಿ ಸ್ತ್ರೀಯರಿಗೆ ದ್ವಿತೀಯ ದರ್ಜೆಯೇ ಇತ್ತು. ಪುರಾಣಗಳಲ್ಲಿಯ ವ್ರತವೈಕಲ್ಯಗಳನ್ನು ಮಾಡುವುದೇ ಧರ್ಮವೆಂದು ಸ್ತ್ರೀಯರು–ಪುರುಷರೂ ಕೂಡ–ನಂಬಿದ್ದರು. ಗುಡಿಗಳನ್ನು ಕಟ್ಟುವುದು, ಅನ್ನಸಂತರ್ಪಣೆ ನಡೆಸುವುದು, ಕಥೆ ಕೀರ್ತನೆ ಕೇಳುವುದು, ತೀರ್ಥಯಾತ್ರೆ ಮಾಡುವುದು ಪುಣ್ಯದ ಕೆಲಸಗಳೆಂದು ಜನರಿಗೆನಿಸುತ್ತಿತ್ತು. ಈ ಕಥೆಕೀರ್ತನಗಳಿಗೆ ಜೊತೆಯಾಗಿಯೇ ನೃತ್ಯಗೀತಾದಿ ಮನೋರಂಜನೆಯ ಕಾರ್ಯಕ್ರಮಗಳನ್ನು ಯೋಜಿಸುತ್ತಿದ್ದರು.

**ಧರ್ಮಸ್ಥಿತಿ :—** ಧರ್ಮಾಚಾರದ ದೃಷ್ಟಿಯಿಂದ ವಿಚಾರಮಾಡಿದರೆ, ಬೌದ್ಧಧರ್ಮವು ಕಳೆಗುಂದಿ, ಶಂಕರಾಚಾರ್ಯರಿಂದ ಪುನಃ ವೈದಿಕಧರ್ಮವು ಊರ್ಜಿತಗೊಂಡುದು ಕಂಡುಬರುತ್ತದೆ. ಈ ರೀತಿ ತಯಾರಾದ ಹೊಸ ಹಿಂದು ಸಮಾಜವು ವೈದಿಕಕಾಲದಲ್ಲಿಯ ಹಿಂದು ಧರ್ಮದಂತೆ ಜಯಿಷ್ಣುವಾಗಲಿಲ್ಲ. ಅದು ದೈವವಾದಿಯಾಯಿತು. ತಮ್ಮ ಕಲ್ಯಾಣದ ಭಾರವನ್ನು ದೇವರ ಮೇಲೆ ಹೇರತೊಡಗಿತು. ಗುಪ್ತಕಾಲದಲ್ಲಿ ಮೂರ್ತಿ ಪೂಜೆ ಆರಂಭವಾಗಿತ್ತು. ಮುಂದೆ ದೇವರಿಗಾಗಿ ದೊಡ್ಡ

* ಹಿಂದುಸ್ತಾನದ ಸಾಧನರೂಪ ಇತಿಹಾಸ ಪುಟ ೭೮, ೭೯.

ದೊಡ್ಡ ಗುಡಿಗಳು ಹುಟ್ಟತೊಡಗಿದವು. ರಾಜಪುತ್ರರು ಅನೇಕ ಮಂದಿರಗಳನ್ನು ನಿರ್ಮಿಸಿದರು. ದಕ್ಷಿಣದಲ್ಲಿಯೂ ಎತ್ತರೆತ್ತರವಾದ ಗೋಪುರಗಳುಳ್ಳ ಗುಡಿಗಳು ಅಲ್ಲಲ್ಲಿ ದೃಗ್ಗೋಚರವಾಗುತ್ತವೆ. ದಾನಧರ್ಮಗಳ ಪ್ರವಾಹವು ದೇವಾಲಗಳ ಕಡೆ ಹರಿದುದರಿಂದ ಅವು ಸಂಪತ್ತಿನ ಕೇಂದ್ರಗಳಾದವು ಗಝ್ನಿ ಮಹಮೂದನು ಸೋಮನಾಥನ ಮೇಲೆ ಕೇವಲ ಮೂರ್ತಿಯನ್ನು ಒಡೆಯುವದಕ್ಕಾಗಿ ದಾಳಿ ಮಾಡಲಿಲ್ಲ; ಅಲ್ಲಿಯ ಅಗಣಿತ ಸಂಪತ್ತಿಯನ್ನು ಒಯ್ಯುವುದಿತ್ತು. ಆದರೆ ಈ ಕಾಲದಲ್ಲಿಯೇ ಭಕ್ತಿಪಂಥವು ಹುಟ್ಟಿತು. ಹಿಂದು ಸಮಾಜವು ಮುಸಲ್ಮಾನರ ದಾಳಿಗಳನ್ನೆದುರಿಸಿ ಬದುಕುವಂತಾಯಿತು. ಮತ್ತು ಅದರಿಂದಲೇ ಮಾನವ ಸಮಾಜದಲ್ಲಿಯ ವಿಷಮತೆಯು ಪರಮೇಶ್ವರನ ಎದುರಿನಲ್ಲಿ ಮಾನವ ಸಮತೆಯನ್ನು ಸ್ಥಾಪಿಸಿತು. ಏಕಛತ್ರಾಧಿಪತ್ಯವಿಲ್ಲದ ಸಮಯದಲ್ಲಿ ಭಾರತೀಯ ಐಕ್ಯದ ಶ್ರುತಿಯನ್ನು ಅಖಂಡವಾಗಿ ಹಿಡಿದದ್ದು ಈ ಭಕ್ತಿಮಾರ್ಗವೇ ಎಂಬುದು ಈ ಪ್ರಶ್ನೆಯ ಉಜ್ವಲವಾದ ಬದಿಯಾಗಿದೆ.

**ಭಕ್ತಿಮಾರ್ಗದ ಲೋಕಪ್ರಿಯತೆ** :— ಈ ಭಕ್ತಿಮಾರ್ಗವು ನಿಜವಾಗಿ ಬಹು ಪ್ರಾಚೀನವಾದುದು, ಎಂದರೆ ಕ್ರಿಸ್ತ ಪೂರ್ವದ್ದು. ಕ್ರಿ. ಪೂ. ಮೊದಲನೆಯ ಶತಕದಲ್ಲಿ ಭಾರತದ ಗಡಿಯಲ್ಲಿಯ ಗ್ರೀಕ ಜನರಲ್ಲಿ ಅದರ ಅಸ್ತಿತ್ವವು ಗೋಚರಿಸುತ್ತದೆ. ಹೆಲಿಓಡೋರಸನಂತೂ ಭೇಲಸಾದಲ್ಲಿ ಗರುಡ ಧ್ವಜವನ್ನು ನಿಲ್ಲಿಸಿ ತನ್ನ ವಿಷ್ಣುಭಕ್ತಿಯನ್ನು ಪ್ರಕಟಿಸಿದ್ದಾನೆ. ಕೆಲಕೆಲವು ಕಡೆ ಕೃಷ್ಣಭಕ್ತಿ ಅಥವಾ ಶಿವ ಭಕ್ತಿ ಕಂಡುಬರುತ್ತದೆ. ಕುಶಾಣರ ಎರಡನೆಯ ಕಡ್ಫಿಸೆಸ್ ರಾಜನು ಶಿವಭಕ್ತನಾಗಿದ್ದನು. ಉಪಾಸ್ಯದೇವತೆಗಳು ಭಿನ್ನವಾಗಿದ್ದರೂ ಭಕ್ತಿಯ ಸ್ವರೂಪವು ಎಲ್ಲೆಡೆ ಒಂದೇ ಇತ್ತು. ಹೀಗೆ ಭಕ್ತಿಮಾರ್ಗವು ಬಹಳ ಹಳೆಯದಾಗಿದ್ದರೂ ಗುಪ್ತೋತ್ತರ ಕಾಲದಲ್ಲಿ ಶೈವರೂ ವೈಷ್ಣವರೂ ಭಕ್ತಿಯಲ್ಲಿ ಶಿವ–ವಿಷ್ಣುಗಳನ್ನು ಆವಾಹನಮಾಡಿ ಆ ಮಾರ್ಗವನ್ನು ಉಜ್ವಲಗೊಳಿಸಿದರು. ಅಂದಿನಿಂದ, ಜನರ ಮನಸಿನ ಮೇಲಾದ ಪ್ರಭಾವವು ಸ್ಥಿರವಾಗಿ ಉಳಿದಿದೆ. ಭಕ್ತಿಮಾರ್ಗದ ಸಂದೇಶವು ಎಲ್ಲರಿಗೂ ತಿಳಿಯುವಂತಹದಿರುವದೇ ಅದರ ಲೋಕಪ್ರಿಯತೆಗೆ ಕಾರಣವಾಗಿದೆ. ಸಂಸಾರದಲ್ಲಿಯ ವಿವಿಧ ಸಂಕಷ್ಟಗಳಿಂದ ಬೆಂದವರಿಗೆ ಪರಮೇಶ್ವರ ಭಕ್ತಿ ಆಪ್ಯಾಯನವಾಗಿದ್ದುದರಿಂದ ಈ ಸಂದೇಶವು ಅಂತಃಕರಣವನ್ನು ತಟ್ಟುತ್ತದೆ. ಭಕ್ತಿ ಪಂಥಕ್ಕೆ ಯಾವ ಸಾಧನಗಳ ಆಡಂಬರವೂ ಬೇಕಾಗಿಲ್ಲವಾದುದರಿಂದ ಇದು ಎಲ್ಲರಿಗೂ ಸುಲಭ ದಾರಿಯಾಗಿದೆ. ಶೀತೋಷ್ಣಪ್ರದೇಶಗಳಲ್ಲಿ, ಹಾಗೆಯೆ ಅತಿ ಚಳಿ–ಅತಿ ಬೇಸಗೆಯಲ್ಲಿ ಭಕ್ತಿಮಾರ್ಗದಂತೆ ಆಚರಿಸುವ ತೊಂದರೆಯಿಲ್ಲ. ಭಕ್ತಿಮಾರ್ಗವು ತಪ್ಪುವವನನ್ನು ಕ್ಷಮಾದೃಷ್ಟಿಯಿಂದ ಕಾಣುತ್ತದೆ, ಶ್ರದ್ಧಾಚರಣೆಗೆ ಮಹತ್ವಕೊಡುತ್ತದೆ; ಮಾನವೀಯ ಸಮಾನತೆಯನ್ನು ಪುರಸ್ಕರಿಸುತ್ತದೆ; ಇದರಿಂದ ಇದು ಕೊನೆಗೆ ಬೌದ್ಧ ಧರ್ಮವನ್ನು ಜಯಿಸಿತು. ವಿವಿಧತೆಯಿಂದ ತುಂಬಿದ ಭಾರತದ ಮೇಲೆ ಭಕ್ತಿಮಾರ್ಗವು ಸಮತ್ವಬುದ್ಧಿಯ ಮತ್ತು ಸಮಾನತೆಯ ಹೊದಿಕೆ ಹಾಕಿತು. ಭಾರತದ ಉತ್ತರ

ದಿಂದ ದಕ್ಷಿಣದ ವರೆಗೆ ಭಾಷೆ. ವಂಶ, ರೀತಿ–ನಡತೆ ಮೊದಲಾದವುಗಳಲ್ಲಿಯ ಭಿನ್ನತೆಯನ್ನು ಬದಿಗಿರಿಸಿ, ದೇಶದ ಐಕ್ಯವನ್ನು ಅಖಂಡವಾಗಿರಿಸಿದ ಶ್ರೇಯವು ಹೆಚ್ಚಾಗಿ ಈ ಪಂಥಕ್ಕೆ ಸಲ್ಲುತ್ತದೆ. ಶಂಕರಾಚಾರ್ಯರ ಅದ್ವೈತ, ರಾಮಾನುಜರ ವಿಶಿಷ್ಟಾದ್ವೈತ ಮತ್ತು ಮಧ್ವಾಚಾರ್ಯರ ದ್ವೈತ–ಈ ತತ್ವಜ್ಞಾನಗಳಲ್ಲಿ ಭೇದವಿದೆ. ಆದರೆ ಎಲ್ಲರೂ ಭಕ್ತಿಮಾರ್ಗವನ್ನು ಪುರಸ್ಕರಿಸುತ್ತಾರೆ. ಭಾರತದಲ್ಲಿಯ ತಾತ್ತ್ವಿಕ ವೈವಿಧ್ಯದಲ್ಲಿ ಕಂಡುಬರುವ ಈ ಮತೈಕ್ಯವು ಅಪೂರ್ವವಾದುದು.

**ವಿದ್ಯಾಪೀಠಗಳು:—** ಪ್ರಾಚೀನ ಕಾಲದಲ್ಲಿ ಒಟ್ಟು ಹತ್ತೊಂಬತ್ತು ವಿದ್ಯಾಪೀಠಗಳು ದೇಶದ ನಾನಾ ಭಾಗಗಳಲ್ಲಿ ಇದ್ದವು. ವಾಯುವ್ಯದಲ್ಲಿ ತಕ್ಷಶಿಲೆ, ಮಗಧ ರಾಜ್ಯದಲ್ಲಿ ನಾಲಂದ, ಪೂರ್ವದಲ್ಲಿ ಬಂಗಾಲದಲ್ಲಿ ಉದಂತಪುರಿ, ದಕ್ಷಿಣದಲ್ಲಿ ಮಧುರೆ, ಪಶ್ಚಿಮದಲ್ಲಿ ಕಾಠೆವಾಡದಲ್ಲಿ ವಲಭಿ–ಈ ವಿದ್ಯಾಪೀಠಗಳನ್ನು ಉದಾಹರಣೆಗಾಗಿ ಉಲ್ಲೇಖಿಸಬಹುದು. ಪ್ರತಿಯೊಂದು ವಿದ್ಯಾಪೀಠದಲ್ಲೂ ಒಂದಿಲ್ಲೊಂದು ವೈಶಿಷ್ಟ್ಯವಿರುತ್ತಿತ್ತು. ತಕ್ಷಶಿಲೆಯಲ್ಲಿ ಶಿಲ್ಪ, ವೈದ್ಯಕ ಮತ್ತು ಯುದ್ಧಕಲೆಗಳು, ನಾಲಂದದಲ್ಲಿ ಧರ್ಮಗ್ರಂಥಗಳು, ರಾಜಗೃಹದಲ್ಲಿದ್ದ ಗುಣಶೀಲಾ ವಿದ್ಯಾಪೀಠದಲ್ಲಿ ೬೪ ಕಲೆಗಳು, ವೈಶಾಲಿ ಬಳಿಯ ಕುಂಡಿನಪುರದಲ್ಲಿ ವ್ಯಾಯಾಮಶಾಸ್ತ್ರ, ಹೀಗೆ ಅಲ್ಲಲ್ಲಿಯ ಶಿಕ್ಷಣದ ವಿಶಿಷ್ಟವಿಷಯಗಳಾಗಿದ್ದವು. ಮಧುರೆಯಲ್ಲಿ ನೃತ್ಯಕಲೆ ಊರ್ಜಿತ ಸ್ಥಿತಿಯಲ್ಲಿತ್ತು. ಇವೆಲ್ಲವೂ ಸಮಕಾಲೀನ ವಿದ್ಯಾಪೀಠಗಳಲ್ಲ. ಆದರೆ ಕ್ರಿ. ವ. ಹನ್ನೊಂದನೆಯ ಶತಕದ ತರುವಾಯ ಅವು ಬಹು ಮಟ್ಟಿಗೆ ಕಳೆಗುಂದಿದವು; ಕೆಲವಂತೂ ಮುಸಲ್ಮಾನರ ದಾಳಿಗೆ ಬಲಿಯಾದವು.

**ವಾಙ್ಮಯ:—** ಈ ಕಾಲದ ಪ್ರಾರಂಭದಲ್ಲಿ ಉತ್ಕೃಷ್ಟವಾಙ್ಮಯದ ನಿರ್ಮಾಣವಾದಂತೆ ಮುಂದಿನ ಕಾಲದಲ್ಲಿ ಆಗಲಿಲ್ಲ. ವಾಲ್ಮೀಕಿ ವ್ಯಾಸರ ಕಾವ್ಯ ರಚನೆಯ ಪರಂಪರೆ ಕಾಲಿದಾಸನ ಕಾಲದಲ್ಲಿ ಮುಂದುವರೆಯಿತು; ಇಷ್ಟೇ ಅಲ್ಲ; ಉಚ್ಚ ಸ್ಥಿತಿಯನ್ನು ತಲುಪಿತು. ಆದರೆ ಮುಂದೆ ಭಾಷೆಯಲ್ಲಿ ಕೃತ್ರಿಮತೆಯುಂಟಾಯಿತು. ಏಳನೆಯ ಶತಕದ ಬಾಣನ ಕಾದಂಬರಿ–ಅದರೊಳಗಿನ ಪುಟಗಟ್ಟಲೆ ಉದ್ದವಾದ ಸಮಾಸಪ್ರಚುರವಾದ ವಾಕ್ಯಗಳು ಭಾಷೆಯ ಕೃತ್ರಿಮತೆಗೆ ಉದಾಹರಣೆಯಾಗಿದೆ. ಎಂಟನೆಯ ಶತಕದಲ್ಲಿ ಭವಭೂತಿ 'ಉತ್ತರರಾಮಚರಿತ' ವನ್ನು ಬರೆದನು; ಅದು ರಸಪೂರ್ಣವಾಗಿದೆ. ಆದರೆ ಮುಂದಿನ ಕಾಲದಲ್ಲಿ ಸಂಸ್ಕೃತ ವಾಙ್ಮಯದ ಮೊದಲಿನ ತೇಜ್ ಉಳಿಯಲಿಲ್ಲ. ಪರಂಪರಾಗತವಾದ ಪರಮಾರ್ಥಪರ ಅಥವಾ ಶೃಂಗಾರಪರ ಸಾಹಿತ್ಯಸೃಷ್ಟಿ ನಡೆಯಿತು. ಆ ಕಾಲದ ವಾಙ್ಮಯದಲ್ಲಿ ಜನರ ಸತ್ಪ್ರವೃತ್ತಿಯನ್ನು ಆವಾಹನ ಮಾಡಿ, ಅವುಗಳಿಗೆ ದಾರಿತೋರಿಸುವಂತಹದು, ಅವರನ್ನು ಕಾರ್ಯಪ್ರವೃತ್ತಗೊಳಿಸುವಂತಹದು ಏನೂ ಇರಲಿಲ್ಲ.

**ದೇಶೀಯ ಭಾಷೆಗಳ ಉದಯ :—** ಈ ಕಾಲದಲ್ಲಿಯ ಒಂದು ಹೊಸ ಪ್ರವೃತ್ತಿಯು ಗಮನಿಸುವಂತಹದಾಗಿದೆ. ಅದೆಂದರೆ ಪ್ರಾದೇಶಿಕಭಾಷೆಗಳ ಉದಯ ಸಂಸ್ಕೃತ-ಪಾಲಿ-ಅರ್ಧಮಾಗಧಿ-ಪ್ರಾಕೃತ ಭಾಷೆಗಳಿಂದ ಹಿಂದಿ, ಬಂಗಾಲಿ

ಗುಜರಾತಿ, ಮರಾಠಿ ಮೊದಲಾದ ಭಾಷೆಗಳು ಹುಟ್ಟಿದವು. ಇಷ್ಟೇ ಅಲ್ಲ; ಈ ಕಾಲದ ಕೊನೆಯ ಭಾಗದಲ್ಲಿ ಹಿಂದೀ ಭಾಷೆಯ ಮೊದಲ ಕಾವ್ಯವಾದ ' ಪೃಥ್ವೀರಾಜ ರಾಸೋ' ರಚಿತವಾಯಿತು. ಮಹಾರಾಷ್ಟ್ರದಲ್ಲಿಯೂ ಜ್ಞಾನೇಶ್ವರಿಯಂತಹ ಉತ್ತಮ ದರ್ಜೆಯ ಗ್ರಂಥವು ಮುಂದಿನ ಶತಕದಲ್ಲಿ ಬರೆಯಲ್ಪಟ್ಟಿತು. ಇದರಿಂದ, ಈ ಭಾಷೆಗಳು ಅದಕ್ಕಿಂತ ಎರಡು ಶತಮಾನಗಳಷ್ಟಾದರೂ ಮೊದಲು ಹುಟ್ಟಿರಬೇಕೆಂದು ಹೇಳಲಡ್ಡಿಯಿಲ್ಲ. *ಈ ಕಾಲದಲ್ಲಿ ದೇಶೀಯ ಭಾಷೆಗಳ ಉದಯವಾಗಿ ಉತ್ಕರ್ಷಕ್ಕೆ ಆರಂಭವಾಯಿತು. ಈ ಕಾಲದ ನಂತರ ಅಂದರೆ ಕ್ರಿ. ವ. ಹದಿಮೂರನೇ ಶತಕದಲ್ಲಿಯ ಮರಾಠೀ ಉದಾಹರಣೆಗಳಿಂದ ತಿಳಿದುಬರುತ್ತದೆ.

**ಚಿತ್ರಕಲೆ :—** ಸೌಂದರ್ಯದರ್ಶನವು ಕಲೆಯ ಧ್ಯೇಯವಾಗಿದೆ. ಭಾರತೀಯ ಚಿತ್ರಕಲೆಗೆ ಬಹು ಪ್ರಾಚಿನ ಪರಂಪರೆಯಿದೆ 'ಸ್ವರ್ಗದಿಂದ ಏಳು ಜನ ಕಲಾವಿದರು ಭೂಮಿಯಲ್ಲಿ ಅವತರಿಸಿದರು; ಅವರು ಹಗಲಿನಲ್ಲಿ ಹಾಡುತ್ತ ಹಾಡುತ್ತ ಕೆಲಸಮಾಡುತ್ತಾರೆ' ಎಂದು ಋಗ್ವೇದ (೪–೧೬–೩) ದಲ್ಲಿ ವರ್ಣನೆ ಬಂದಿದೆ. ಈ ಏಳು ಮಂದಿಯಲ್ಲಿ ಚಿತ್ರಕಾರ, ಶಿಲ್ಪಿ, ನರ್ತಕ, ಕವಿ, ಗಾಯಕ, ವಾಸ್ತುಕಾರ ವಾದ್ಯವಾದಕ ಇವರ ಸಮಾವೇಶವಾಗುತ್ತದೆ. ಮೈತ್ರ್ಯುಪನಿಷತ್ತಿನಲ್ಲಿ 'ಚಿತ್ರಗಳನ್ನು ಬರೆದ ಗೋಡೆಯಂತೆ ಇದೆಲ್ಲವೂ ಮಿಥ್ಯಾಮನೋರಮವಾದುದು' ಎಂಬ ಉಪಮಾ ವಾಕ್ಯವಿದೆ. 'ರಘುವಂಶ' ಮತ್ತು 'ಶಾಕುಂತಲ'ಗಳಲ್ಲಿ ಕಾಲಿದಾಸನು ಚಿತ್ರಕಾರರನ್ನು ಗೌರವಿಸಿದ್ದಾನೆ. ಅರಮನೆಯ ಗೋಡೆಯ ಮೇಲಿನ ಆನೆಯ ಚಿತ್ರವನ್ನು ನಿಜವಾದ ಆನೆಯೇ ಎಂದು ಭ್ರಮಿಸಿ ಸಿಂಹವು ಎರಗಿತೆಂದು ರಘುವಂಶದಲ್ಲಿ ವರ್ಣನೆಯಿದೆ. ಕ್ರಿ. ವ. ಮೂರನೆಯ ಶತಕದ ವಾತ್ಸ್ಯಾಯನನ 'ಕಾಮಸೂತ್ರ' ಗ್ರಂಥದಲ್ಲಿ, ರೂಪ, ಭೇದ, ಪ್ರಮಾಣ, ಭಾವ, ಲಾವಣ್ಯಯೋಜನ, ಸಾದೃಶ್ಯ ವರ್ಣಿಕಾಭಂಗ ಎಂಬ ಆರು ಚಿತ್ರಕಲೆಯ ಅಂಗಗಳನ್ನು ಹೇಳಿದೆ. ಸೃಷ್ಟಿಯನ್ನು ತದ್ವತ್ತಾಗಿ ಅನುಕರಿಸುವುದೇ ಭಾರತೀಯ ಚಿತ್ರಕಲೆಯ ಧ್ಯೇಯವಲ್ಲ; ಯಾವುದೊಂದು ದೃಶ್ಯವನ್ನು ನೋಡಿ ಮನುಷ್ಯನ ಅಂತಃಕರಣದಲ್ಲಿ ಉಂಟಾಗುವ ಭಾವನೆಗಳನ್ನು ವ್ಯಕ್ತಗೊಳಿಸುವದು ಅದರ ಕೆಲಸ. ಭಾರತೀಯ ಚಿತ್ರಕಾರನು ತನ್ನ ಭಾವವನ್ನು ಛಾಯೆ–ಪ್ರಕಾಶ–ವರ್ಣಮಿಶ್ರಣಗಳ ಸಹಾಯದಿಂದ ವ್ಯಕ್ತಗೊಳಿಸದೆ, ಗೆರೆಗಳ ಬಾಗುಗಳಿಂದಲೇ ಆ ಆ ಭಾವವನ್ನು ಸೂಚಿಸುತ್ತಾನೆ ಉದಾಹರಣೆಗಾಗಿ ತಾಯಿ ಕೂಸನ್ನೆತ್ತಿ ಆಡಿಸುವುದನ್ನು ಚಿತ್ರಿಸಬೇಕಾಗಿದೆ; ಅದರಲ್ಲಿ ಭಾರತೀಯ ಚಿತ್ರಕಾರನು ತಾಯಿಯ ಸೌಂದರ್ಯದ ಕಡೆಗಾಗಲಿ, ಮಗುವಿನ ಹಸುಳೆತನದ ಕಡೆಗಾಗಲಿ, ಗಮನ ಕೊಡಲಿಕ್ಕಿಲ್ಲ; ತಾಯಿಯ ಹೃದಯದೊಳಗಿನ ವಾತ್ಸಲ್ಯವು ಅವಳ ಕಣ್ಣುಗಳಲ್ಲಿ ಹೇಗೆ ಹೊಮ್ಮಿದೆ, ಅದರಿಂದ ಮಗು ಹೇಗೆ ತೃಪ್ತವಾಗಿದೆ ಎಂಬುದನ್ನು

* ಮರಾಠಿಯ ಎಲ್ಲಕ್ಕೂ ಹಳೆಯ ವಾಕ್ಯವೊಂದು ಮೈಸೂರು ರಾಜ್ಯದಲ್ಲಿ ಶ್ರವಣ ಬೆಳುಗೊಳದಲ್ಲಿ ಕೊರೆದುದು ಸಿಕ್ಕಿದೆ. ಅದರ ಕಾಲ ಸುಮಾರು ಕ್ರಿ. ವ. ೯೮೩. ಆ ವಾಕ್ಯ ಹೀಗಿದೆ, 'ಶ್ರೀ ಚಾಮುಂಡರಾಯೆ ಕರವಿಯಲೆ'

ಪ್ರಕಟಿಸಲು ಅವನು ಯತ್ನಿಸುವನು. ನೋಡುವವನ ಲಕ್ಷ್ಯವು ವಾತ್ಸಲ್ಯಭಾವದಲ್ಲಿಯೇ ಕೇಂದ್ರಿತವಾಗಬೇಕೆಂದು ತಾಯಿಯ ಸೌಂದರ್ಯ, ಕೂಸಿನ ಮುದ್ದುತನಗಳಿಗೆ ಬೇಕೆಂತಲೇ ಅವನು ಎರಡನೆಯ ಸ್ಥಾನ ಕೊಡುತ್ತಾನೆ. ಈ ಪ್ರಕಾರದ ಚಿತ್ರಗಳಿಗಾಗಿ ಅವನು ಬಣ್ಣಗಿಣ್ಣಗಳನ್ನು ತಕ್ಕೊಳ್ಳದೆ ಮೊಗದ ಮತ್ತು ಅಂಗಾಂಗಗಳ ರೇಷೆಗಳನ್ನೇ ಭಾವಾನುರೂಪವಾಗಿ ರೇಖಿಸುವುದಕ್ಕೆ ಅವನು ವಿಶೇಷ ಲಕ್ಷ್ಯ ಕೊಡುತ್ತಾನೆ. ಭಾರತೀಯ ಚಿತ್ರಕಲೆಯಲ್ಲಿ ಬೌದ್ಧ, ರಜಪುತ, ಔತ್ತರೇಯ, ದಾಕ್ಷಿಣಾತ್ಯ ಹೀಗೆ ವಿವಿಧ ಪ್ರಕಾರಗಳುಂಟು. ಉದಾಹರಣೆಗಾಗಿ; ಕೃಷ್ಣಗೋಪಿಯರ ಅಥವಾ ರಾಗಮಾಲಿಯ ಚಿತ್ರಗಳು ಬಹ್ವಂಶದಿಂದ ರಾಜಪುತ ಶೈಲಿಯವಾಗಿವೆ. ಅಜಂತೆಯಲ್ಲಿಯ ಚಿತ್ರಕಲೆ ದಕ್ಷಿಣ ಕಡೆಯ ರೀತಿ ನಡತೆಗಳ ನಿದರ್ಶಕವಾಗಿವೆ.

**ಅಜಂತೆಯ ಚಿತ್ರಕಲೆ :—** ಅಜಂತೆಯಲ್ಲಿಯ ವರ್ಣಚಿತ್ರಗಳ ಕಾಲವನ್ನು ಸಾಮಾನ್ಯವಾಗಿ ಕ್ರಿ. ಶ. ೪ ಅಥವಾ ೫ನೆಯ ಶತಕದ್ದೆಂದು ಎಣಿಸುತ್ತಾರೆ. ಆದರೆ ನಿಜವಾಗಿ ಅಲ್ಲಿಯ ಗುಹೆಗಳು ಕ್ರಿ. ಪೂ. ಮೂರನೆಯ ಶತಕದಿಂದ ಕ್ರಿ. ಶ. ಏಳನೆಯ ಶತಕದ ವರೆಗಿನ ಸಾವಿರ ವರುಷಗಳ ಅವಧಿಯಲ್ಲಿ ಬೇರೆಬೇರೆ ಕಾಲದಲ್ಲಿ ಕೊರೆಯಲ್ಪಟ್ಟಿವೆ. ಕನಿಷ್ಠ ಹನ್ನೆರಡು ನೂರು ವರುಷಗಳ ಹಿಂದೆ ತೆಗೆಯಲಾದ ಈ ಚಿತ್ರಗಳ ಬಣ್ಣವು ಇಂದಿಗೂ ಅಚ್ಚಳಿಯದಿದೆ. ಅವುಗಳೊಳಗೆ ಪದ್ಮಪಾಣಿ ಬುದ್ಧನ ಚಿತ್ರವು ಅತಿಶಯ ಪ್ರೇಕ್ಷಣೀಯವಾಗಿದೆ. ಆ ಕಾಲದಲ್ಲಿಯ ಉಡುಗೆತೊಡಿಗೆಗಳು, ಬಟ್ಟೆ ಉಡುವ ರೀತಿ, ಒಟ್ಟಾರೆ ಇರುವಿಕೆ, ರೀತಿನಡತೆ ಇವುಗಳ ವಿಷಯದಲ್ಲಿ ಈ ಚಿತ್ರಗಳು ಸಾಕಷ್ಟು ಕಲ್ಪನೆ ತಂದುಕೊಡುತ್ತವೆ. ಅಜಂತಾ ಚಿತ್ರಕಲೆ ಬೌದ್ಧಶೈಲಿಯದಾಗಿದೆ.

**ಶಿಲ್ಪಕಲೆ :—** ಭವ್ಯತೆ ಮತ್ತು ಪ್ರಮಾಣಬದ್ಧತೆಗಳು ಭಾರತೀಯ ಶಿಲ್ಪಕಲೆಯ ಲಕ್ಷಣಗಳೆಂದು ಹೇಳಬಹುದು. ಹಳೆಯ ಪದ್ಧತಿಯ ಅರಮನೆಗಳು, ಕಾರ್ಲೆಯ ಕೊರೆದ ಗುಹೆಗಳು, ದೌಲತಾಬಾದಿನ ಯಾದವಕಾಲೀನ ಕೋಟೆಗಳನ್ನು ನೋಡಿದರೆ, ಅವುಗಳ ಸಾದಾತನ, ಭವ್ಯತೆ, ಭದ್ರತೆಗಳ ಪರಿಣಾಮವು ಮನಸಿನ ಮೇಲೆ ಆಗದಿರದು. ಹಿಂದು ದೇವಾಲಯಗಳ ಗೋಪುರಗಳು ಅತ್ಯುನ್ನತವಾಗಿ, ಮೇಲು ಮೇಲಕ್ಕೆ ಸಣ್ಣದಾಗಿ ಇರುವದರ ಉದ್ದೇಶವೇನೆಂದು ಹೇಳುವುದು ಕಠಿಣ. ಆದರೆ, ಅವುಗಳ ರಚನೆಯಲ್ಲಿ ಕೈಲಾಸಪರ್ವತದ ಮಾದರಿಯಿದೆಯೆಂದು ಕೆಲವರು ಹೇಳುತ್ತಾರೆ. ತಳದ ಸುತ್ತಗಲದಿಂದ ಸಣ್ಣದಾಗುತ್ತ ಹೋಗುವ ಗೋಪುರದ ರಚನೆ ಸ್ಥೂಲದಿಂದ ಸೂಕ್ಷ್ಮದ ಕಡೆಗೆ, ಮೂರ್ತದ ಕಡೆಯಿಂದ ಅಮೂರ್ತದ ಕಡೆಗೆ ನೋಟಕರ ಚಿತ್ತವನ್ನು ಸೆಳೆಯುವುದೆಂದು ಆ ಬಗ್ಗೆ ಸ್ಪಷ್ಟೀಕರಣ ಕೊಡಬಹುದು.

ಈ ದೃಷ್ಟಿಯಿಂದ ಕಾರ್ಲೆ, ಅಜಂತಾ, ವೇರೂಳ ಇವು ಮೂರು ಆ ಕಾಲದ ಪ್ರೇಕ್ಷಣೀಯ ಕಲಾಸ್ಥಾನಗಳಾಗಿವೆ. ಕಾರ್ಲೆಯಲ್ಲಿಯ ಕೊರೆದ ಗವಿಗಳು, ಅಜಂತೆಯಲ್ಲಿಯ ಬಣ್ಣದ ಚಿತ್ರ, ಮತ್ತು ವೇರೂಳದಲ್ಲಿಯ ಶಿಲ್ಪ ಇವುಗಳನ್ನು ಅನೇಕ ಭಾರತೀಯ ಮತ್ತು ವಿದೇಶೀಯ ರಸಿಕರು ಮೆಚ್ಚಿ ಕೊಂಡಾಡಿದ್ದಾರೆ. ಒಂದು ಸಾವಿರ ಜನರು ಸಹಜವಾಗಿ ಕುಳ್ಳಿರುಷ್ಟು ದೊಡ್ಡದಾದ ಕಮಾನುಗಳುಳ್ಳ ಮಹಲನ್ನು



[ ಅಜಂತಾ ಚಿತ್ರಕಲೆಯ ಒಂದು ಉತ್ಕೃಷ್ಟ ಮಾದರಿ ]

“ಒಬ್ಬ ರಾಜನು ರಾಜ್ಯವನ್ನು ತನ್ನ ರಾಣಿಗೆ ಒಪ್ಪಿಸಿ ಬೌದ್ಧ ಭಿಕ್ಷುವಾದನು. ಅವಳು ವಿರಹತಾಪದಿಂದ ಬೆಂದು ಬೆಂಡಾಗಿ ಮರಣೋನ್ಮುಖಳಾದಳು. ಅವಳ ಹಿರಿಯ ಮಗಳು ಅವಳನ್ನು ಎತ್ತಿ ಹಿಡಿದಿರುವಳು. ಚಿಕ್ಕ ಮಗಳು ಅರಗಳಿಗೆಯಲ್ಲಿ ತಾಯಿಯ ಪ್ರಾಣ ಹೋಗುವದೆಂಬ ದುಃಖಪೂರ್ಣ ವದನದಿಂದ ಅವಳೆಡೆ ನೋಡುತ್ತಿರುವಳು ಮರಣ ಸಮಯದಲ್ಲಿ ಪತಿದರ್ಶನವಂತೂ ಇಲ್ಲ. ಅವನ ರಾಜ ಮುಕುಟದ ದರ್ಶನವನ್ನಾದರೂ ಪಡೆಯಬೇಕೆಂದು ಇಬ್ಬರು ಸೇವಕರಿಂದ ಅದನ್ನು ತರಿಸಿರುವಳು. ಆದರೆ ಅದರೆಡೆ ನೋಡಲು ಸಹ ಅವಳ ಕಣ್ಣಿನ ರೆಪ್ಪೆಗಳಲ್ಲಿ ಜೀವವಿಲ್ಲ. ದಾಸಿಯೊಬ್ಬಳು ಚಾಮರದಿಂದ ಮಂದವಾಗಿ ಗಾಳಿ ಬೀಸುತ್ತಿದ್ದಾಳೆ. ಗಚ್ಚಿಯ ಮೇಲೆ ರಾಜವೈದ್ಯರು ಔಷಧದ ಪಾತ್ರೆಯೊಂದನ್ನು ಹಿಡಿದುಕೊಂಡು ಸಾಗಿದ್ದಾರೆ. ರೋಗಕ್ಕೆ ಉಪಾಯವಿಲ್ಲವೇ ಎಂದು ಯಾವಳೋ ಅವರನ್ನು ಕೇಳುತ್ತಿದ್ದಾಳೆ. ವೈದ್ಯರು ‘ ತೀರಿತು ಇನ್ನೆರಡು ಗಳಿಗೆ ’ ಎಂಬಾಶಯದ ಸಂಜ್ಞೆ ಮಾಡುತ್ತಿದ್ದಾರೆ.”

ಕಾರ್ಲೆಯ ಗುಡ್ಡದಲ್ಲಿ ಕೊರೆದಿದ್ದಾರೆ. ಈ ಮಹಲಿನ ಎರಡೂ ಬದಿಗಳಲ್ಲಿ ಸುಮಾರು ೪೦ ಅಡಿ ಎತ್ತರದ, ಕುಸುರಿನ ಕೆಲಸ ಮಾಡಿದ ಕಂಬಗಳಿವೆ; ಮಧ್ಯದಲ್ಲಿ ಸ್ತೂಪವಿದೆ.

ಈ ಮಹಲಿನ ಪ್ರವೇಶದ್ವಾರದ ಮೇಲ್ಗಡೆಯಲ್ಲಿ ಕುದುರೆಯ ನಾಲಿನಾಕಾರದ ಕಮಾನಿದ್ದು, ಅದರ ಮೂಲಕ ಬರುವ ಸೂರ್ಯನ ಬೆಳಕು ನೇರವಾಗಿ ಸ್ತೂಪದ ಮೇಲೆ ಬೀಳುತ್ತದೆ. ಇಲ್ಲಿ ಬುದ್ಧಭಿಕ್ಷುಗಳು ಪ್ರಾರ್ಥನೆಗಾಗಿ ಸೇರುತ್ತಿರಬೇಕು. ಈ ಬುದ್ಧ ಭಿಕ್ಷುಗಳಿಗೆ ಇರುವುದಕ್ಕಾಗಿ ಹತ್ತಿರದಲ್ಲಿಯೆ ಅನೇಕ ಕೋಣೆಗಳು ಕೊರೆಯಲ್ಪಟ್ಟಿವೆ. ಅದಕ್ಕೆ ವಿಹಾರ ಎನ್ನುತ್ತಾರೆ. ಸ್ತೂಪವು ಮೃತರಾದ ಪೂಜ್ಯರ ಅವಶೇಷಗಳನ್ನು ಹುಗಿದಿಟ್ಟುದರ ನಿದರ್ಶಕವಾಗಿದೆ. ಕ್ರಿ. ಪ. ಎರಡನೆಯ ಶತಕದಲ್ಲಿ ಅಥವಾ ಅನಂತರ ಶೀಘ್ರದಲ್ಲಿ ಇವನ್ನು ಕೊರೆದಿರಬೇಕು. ಕರ್ನಾಟಕದ ವೈಜಯಂತೀ ನಗರದ ಶ್ರೇಷ್ಠಿ ( ಸೆಟ್ಟಿ ) ಯೊಬ್ಬನು ಬೌದ್ಧ ಭಿಕ್ಷುಗಳಿಗೆ ಇವನ್ನು ಮಾಡಿಸಿಕೊಟ್ಟ ನೆಂದು ಹೇಳುತ್ತಾರೆ.

ವೇರೂಳದ ಬಹುಭಾಗ ಶಿಲ್ಪಕಲೆ ಬಹಳ ಈಚೆಯದು, ಅಂದರೆ ಎಂಟೊಂಬ ತ್ತನೆಯ ಶತಮಾನದ್ದು ಇರಬೇಕು. ಇಲ್ಲಿಯ ಕೈಲಾಸ ಮಂದಿರವು ಶಿಲ್ಪಕಲೆಯ ಉತ್ಕೃಷ್ಟ ಮಾದರಿಯಾಗಿದೆ. ಮಳಖೇಡದ ರಾಷ್ಟ್ರಕೂಟ ಕೃಷ್ಣನು ಈ ದೇವಾಲಯ ವನ್ನು ಕಟ್ಟಿಸಿದನು. ಇಲ್ಲಿಯ ಕೆಲವು ಗವಿಗಳನ್ನು ಜೈನ ಧರ್ಮೀಯರು ಕೊರೆದಿರುವ ರೆಂದು ತೋರುತ್ತದೆ.

**ಇತರ :—** ಚಿತ್ರ–ಶಿಲ್ಪ ಕಲೆಗಳ ಹೊರತು ನೃತ್ಯ, ಗಾಯನ ಮತ್ತು ವಾದ್ಯ ಕಲೆಗಳಲ್ಲಿಯೂ ವೈದ್ಯಕದಂತಹ ಶಾಸ್ತ್ರಗಳಲ್ಲಿಯೂ ಭಾರತೀಯರ ವೈಶಿಷ್ಟ್ಯ ಇದ್ದೇ ಇದೆ. ಹಾಗೆಯೆ, ಚದುರಂಗ, ಲೆತ್ತ, ದ್ಯೂತ ಮೊದಲಾದವು ಗಂಡುಸರ ಆಟಗಳು; ಝಿಮ್ಮಾ ( ತಾಲಗತಿಯಂತೆ ಅಂಗೈ ಅಂಗೈ ಬಡಿಯುತ್ತ ಆಡುವ ಆಟ ), ಫುಗಡಿ ಮತ್ತು ಗರ್ಬಾ ಇವು ಹೆಣ್ಣುಮಕ್ಕಳ ಆಟಗಳು. ಗೌರೀಪೂಜೆ, ನವರಾತ್ರಿ, ದೀಪಾ ವಳಿ ಮೊದಲಾದವು ಸ್ತ್ರೀ ಪುರುಷರ ಹಬ್ಬಗಳು. ಬಿಲ್ಲುಗಾರಿಕೆ, ಬೇಟೆ ಇತ್ಯಾದಿಗಳ ನಾದವುಳ್ಳ ಭಾರತೀಯರು, ಆ ವಿದ್ಯೆಗಳಲ್ಲಿ ಕುಶಲರೂ ಆಗಿದ್ದರು. ಈ ಎಲ್ಲ ವಿಷಯಗಳನ್ನು ಅರಿತುಕೊಳ್ಳದೆ ಭಾರತೀಯ ಸಂಸ್ಕೃತಿಯ ವ್ಯಾಪಕಸ್ವರೂಪ ತಿಳಿಯಲಾರದು. ಆದರೆ ಇಲ್ಲಿ ಅವೆಲ್ಲವುಗಳ ಸಮಗ್ರದರ್ಶನ ಮಾಡಿಸುವುದು ಸಾಧ್ಯವಿಲ್ಲ.

**ಯುರೋಪ-ಭಾರತ ತುಲನೆ :—** ಈ ಕಾಲದ ಕೊನೆಯಲ್ಲಿ ಭಾರತವು ಏಕೆ ಹಿಂದೆ ಬಿದ್ದಿತೆಂಬುದನ್ನು ತಿಳಿದುಕೊಳ್ಳುವುದಕ್ಕಾಗಿ, ಈ ಹನ್ನೆರಡು ನೂರು ವರುಷಗಳಲ್ಲಿ ಯುರೋಪಿನಲ್ಲಿ ಯಾವ ಯಾವ ಸ್ಥಿತ್ಯಂತರಗಳಾದವೆಂಬುದನ್ನು ನೋಡುವುದು ಅವಶ್ಯ. ಅನೇಕ ವಿದ್ಯೆ–ಶಾಸ್ತ್ರಗಳಲ್ಲಿ ಆರ್ಯರಂತೆ ಪ್ರವೀಣರಾದ ಗ್ರೀಕರ ಸಂಸ್ಕೃತಿಯೆಂಬ ನಿಧಿ, ಮೆಸಿಡೋನಿಯದ ರಾಜನಾದ ಅಲೆಕ್ಝಾಂಡರನಿಗೆ ಸಿಕ್ಕಿತು; ಅವನು ಸಾಮ್ರಾಜ್ಯವನ್ನು ಗಳಿಸಿದನು. ಆದರೆ ಅವನ ತರುವಾಯ ಕ್ಷಿಪ್ರ ದಲ್ಲಿಯೇ ಸಾಮ್ರಾಜ್ಯವು ಒಡೆದುಹೋದುದರಿಂದ ಅಲ್ಲಿ ಈ ಜ್ಞಾನ–ಸಂಸ್ಕೃತಿಗಳ



ಕಾರ್ಲೆಯ ಗುಹೆಯಲ್ಲಿ ಕೊರೆದ ಚೈತ್ಯಾಲಯದ ಒಳಭಾಗ

ಪ್ರಸಾರವು ಆಗಲಿಲ್ಲ. ಗ್ರೀಕರ ಜ್ಞಾನದೀಪವು ಅಲೆಕ್ಝಾಂಡ್ರಿಯದಲ್ಲಿ ಉರಿಯು ತ್ತಿತ್ತು; ಆದರೆ ಘನಾಂಧಕಾರದಲ್ಲಿಯ ಮಿಣಿ ಮಿಣಿ ದೀಪದಂತೆ ಅದರ ಸ್ಥಿತಿಯಾ ಗಿತ್ತು. ಮುಂದೆ ರೋಮನ್ ಸಾಮ್ರಾಜ್ಯ ಎದ್ದಿತು. ಗುಪ್ತ ಸುವರ್ಣಕಾಲದ ವರೆಗೂ ಅದು ಬಾಳಿತ್ತು. ಈ ಕಾಲವು ಆಶಿಯಾ ಮತ್ತು ಯುರೋಪ ಎರಡೂ ಖಂಡ ಗಳಲ್ಲಿಯೂ ಅಷ್ಟೇ ದೇದೀಪ್ಯಮಾನ ಕಾಲವು ಆದರೆ ರೋಮನ್ ಸಾಮ್ರಾಜ್ಯದಲ್ಲಿಯ ಗುಲಾಮರ ದುಃಸ್ಥಿತಿ, ಗ್ಲಾಡಿಏಟರ್ಸಿನ ಆಟ, ಮತ್ತು ಪಾಂಪೆ ಸೀರ್ಝರ್‌ರಂಥ ವರ ಹೊಟ್ಟೆಕಿಚ್ಚು ಇವುಗಳ ಸಾಮ್ಯವಾಗಲಿ ಪಡಿನೆಳಲಾಗಲಿ ಭಾರತದ ಗುಪ್ತ ಸಾಮ್ರಾಜ್ಯದಲ್ಲಿ ಕಂಡುಬರುವುದಿಲ್ಲ. ಮುಂದೆ ಯುರೋಪಿನಲ್ಲಿ ಅರಾಜಕತೆ ಯುಂಟಾಯಿತು. ಗಾಥ್, ವಂಡಾಲ್, ಸ್ಲಾವರ ತಂಡಗಳ ಹಾವಳಿ ಅಲ್ಲಿ ನಡೆ ದಂತೆ ಭಾರತದಲ್ಲಿ ಹೂಣರು ಹಾವಳಿ ಮಾಡಿದರು. ಅಲ್ಲಿಯ ಆ ಕಾಡು ಜನರು ಕ್ರೈಸ್ತ ಧರ್ಮದ ಸೋಜ್ಜ್ವಲ ಉಪದೇಶಕ್ಕೆ ಒಳಗಾದರು; ಹಾಗೆ ಭಾರತದಲ್ಲಿ ಶಕರು: ಕುಶಾಣರು, ಹೂಣರು ಹಿಂದುಧರ್ಮದಲ್ಲಿ ಸಮಾವಿಷ್ಟರಾದರು. ಫ್ರ್ಯಾಂಕ್, ಗಾಥ್, ಬರ್ಗಂಡಿಯನ್ನರ ಸ್ವತಂತ್ರ ರಾಷ್ಟ್ರಗಳು ಈಗಿನ ಫ್ರಾನ್ಸ್, ಇಟಲಿ, ಜರ್ಮನಿಗಳಲ್ಲಿ ತಲೆಯೆತ್ತಿದವು; ಅದರಂತೆ ಭಾರತದಲ್ಲಿ ಚೌಹಾನ, ಗುಹಿಲೋತ, ಪರಮಾರ, ಚಾಲುಕ್ಯ, ರಾಷ್ಟ್ರಕೂಟ, ಯಾದವ, ಚೋಳ, ಪಾಂಡ್ಯ ಇವರ ರಾಜ್ಯಗಳು ನಿರ್ಮಾಣವಾದವು. ಯುರೋಪಿನಲ್ಲಿ ಸೇಂಟ್ ಬೆನೆಡಿಕ್ಟನು ಕ್ರೈಸ್ತ ಧರ್ಮದ ಸಂಘ ಟನೆ ಮಾಡಿದನು; ಭಾರತದಲ್ಲಿ ಶಂಕರಾಚಾರ್ಯರು ವೈದಿಕ ಧರ್ಮನ್ನು ಪುನರು- ಜ್ಜೀವನ ಗೊಳಿಸಿದರು.

**ಯುರೋಪ-ಭಾರತದಲ್ಲಿಯ ವೈಷಮ್ಯ :—** ಆದರೆ ಇಬ್ಬರ ಧರ್ಮ ಸಂಘ ಟನೆಗಳಲ್ಲಿ ಎಷ್ಟೊಂದು ಅಂತರ! ಯುರೋಪಿನಲ್ಲಿ ಜೀರ್ಝಾನ್ ಮತ್ತು ಸೆಂಟ್ ಪಾಲರ ತತ್ತ್ವಜ್ಞಾನ, ಧರ್ಮಗುರುಗಳನ್ನು ಸಿದ್ಧಪಡಿಸುವುದಕ್ಕಾಗಿ ಸೇಂಟ್ ಬೆನೆ ಡಿಕ್ಟನು ಯೋಜಿಸಿದ ಮಠ ಸಂಘ, ಸೇಂಟ್ ಆಗಸ್ಟಾಯಿನನಂತಹ ಪ್ರಚಾರಕರು, ಪೋಪನಂತಹ ಧರ್ಮಗುರುವಿನ ಆಜ್ಞೆಗಳು, ದೇಶ ದೇಶಗಳಲ್ಲಿದ್ದ ಆರ್ಚ್‌ಬಿಶಪ್ ಬಿಶಪ್ಪರ ಮೂಲಕ ಆ ಆಜ್ಞೆಗಳ ಪರಿಪಾಲನೆ ಇವೆಲ್ಲವುಗಳು ಒಂದಕ್ಕೊಂದು ಅತ್ಯಂತ ಸಂಬದ್ಧವಾಗಿದ್ದುದರಿಂದ ಆ ಸಾಮರ್ಥ್ಯದ ಮುಂದೆ ರಾಜರೂ ನಡುಗುತ್ತಿದ್ದರು. ಈ ಸಂಘಟನೆಗಳಿಗೆ ಧರ್ಮದಂಡಯಾತ್ರೆ (ಕ್ರೂಸೆಡ್ಸ) ಕೈಕೊಳ್ಳಲು ಧನಿಕರು ರಾಶಿರಾಶಿಯಾಗಿ ಹಣ ಸುರಿಯುತ್ತಿದ್ದರು. ತರುಣರು ವಾರಕರಿಗಳೂ ಯೋಧರೂ ಆಗುತ್ತಿದ್ದರು. ಗ್ರೀಕರ ವಿದ್ಯೆ-ಶಾಸ್ತ್ರಗಳ ಅಧ್ಯಯನವು ಈ ಕ್ರೈಸ್ತ ಮಠಗಳಲ್ಲಿ ನಡೆಯುತ್ತಿತ್ತು. ಸಂಸ್ಕೃತಿ ಕಳೆಗೊಳ್ಳಲಿಕ್ಕೆ ಬರಿ ವ್ಯಕ್ತಿ ಮಾತ್ರ ತೇಜಸ್ವಿಯಾದರೆ ಸಾಲದು. ಅದನ್ನು ರಕ್ಷಿಸಿಕೊಂಡು ಹೋಗಲು ಸಂಘಟನೆಯೂ ಬೇಕು. ಶಂಕರಾ ಚಾರ್ಯರ ವೈದಿಕಧರ್ಮದ ಪುನರುಜ್ಜೀವನವೂ ರಾಜಪುತರ ಉದಯವೂ ಬಹ್ವಂಶ ದಿಂದ ಸಮಕಾಲೀನವಾದರೂ ಅವುಗಳಲ್ಲಿ ಎಷ್ಟು ಮಾತ್ರವೂ ಪರಸ್ಪರ ಸಂಬಂಧ ವಿರಲಿಲ್ಲ. ರಾಜಪುತರು ಅತ್ಯಂತ ಪರಾಕ್ರಮಿಗಳಾದರೂ ಸಂಘಟನಾ ಕಾರ್ಯದಲ್ಲಿ

ಕುಶಲರಲ್ಲವೆಂದು ಹೇಳದೆ ಗತ್ಯಂತರವಿಲ್ಲ. ಧಾರ್ಮಿಕ ಸಂಘಟನೆಯಿಲ್ಲದಿದ್ದರೂ ರಾಜಕೀಯ ಉದ್ದೇಶದಿಂದಲೂ ಅವರು ಒಂದುಗೂಡಲಿಲ್ಲ. ಹೆಚ್ಚೇನು? ಹದಿನೆಂಟನೆಯ ಶತಕದಲ್ಲಿ ಶಿಂದೆ, ಹೋಳಕರ, ಗಾಯಕವಾಡ ಮೊದಲಾದ ಮರಾಠಾ ಸರದಾರರಲ್ಲಿದ್ದಷ್ಟು ನಡಿಲಾದ ಒಕ್ಕಟ್ಟು ಕೂಡ ರಾಜಪುತರಲ್ಲಿ ಉಂಟಾಗಲಿಲ್ಲ. ದೇಶ ಅಥವಾ ರಾಷ್ಟ್ರಕಲ್ಪನೆ ಹುಟ್ಟುವ ಮೊದಲು ದೇವಧರ್ಮ ರಕ್ಷಣೆಯ ಕಲ್ಪನೆಯೇ ಮಾನವನನ್ನು ಕಷ್ಟಸೋಸುವುದಕ್ಕೆ ಪ್ರವೃತ್ತಗೊಳಿಸಿತು. ಈ ಪ್ರವೃತ್ತಿಗೆ ಯುರೋಪದಲ್ಲಿಯಂತೆ ಭಾರತದಲ್ಲಿಯೂ ಸಂಘಟನೆಯ ಜೋಡು ಸಿಕ್ಕಿದ್ದರೆ, ಮುಸಲ್ಮಾನರ ಆಘಾತಗಳಿಂದ ಯುರೋಪಿನ ರಕ್ಷಣೆಯಾದಂತೆ ಭಾರತದ ರಕ್ಷಣೆಯೂ ಒಂದು ವೇಳೆ ಆಗಬಹುದಿತ್ತೋ ಏನೋ. ಒಂದು ವೇಳೆ ಎನ್ನುವುದಕ್ಕೆ ಕಾರಣ ಇಷ್ಟೆ, ಯುರೋಪವು ಮುಸಲ್ಮಾನರೊಳಗೆ ಸುಸಂಸ್ಕೃತರೆನಿಸಿದ ಅರಬರೊಡನೆ ಕಾದಾಡಬೇಕಾಯಿತು; ಆದರೆ, ಅವರಿಗಿಂತ ಕಾಡು ಜನರಾಗಿದ್ದ ಅಫಗಾಣ ತುರ್ಕರನ್ನು ಪ್ರಾಚೀನ ಕಾಲದ ಕೊನೆಯ ಭಾಗದಲ್ಲಿ ಭಾರತವು ಎದುರಿಸಬೇಕಾಯಿತು. ಅರಬರು ಗ್ರೀಕ ಮತ್ತು ರೋಮನ್ ವಿದ್ಯೆಗಳನ್ನು ರಕ್ಷಿಸಿದರು, ಮಾತ್ರವಲ್ಲ, ಯುರೋಪಿನಲ್ಲಿ ಎಷ್ಟೋ ಕ್ರೈಸ್ತ ಧರ್ಮಗುರುಗಳು ಸ್ಪೇನದಲ್ಲಿ ಕಾರ್ಡೋವಾ ಎಂಬಲ್ಲಿದ್ದ ಅರಬೀ ವಿಶ್ವವಿದ್ಯಾಲಯದಲ್ಲಿ ಅಭ್ಯಸಿಸಿದರು. ಭಾರತದಲ್ಲಿ ಮಾತ್ರ ಈ ಉಭಯ ಜನಾಂಗಗಳ ಪರಸ್ಪರ ಸಹವಾಸದ ಲಾಭವೇ ಈ ವಿದ್ಯೆಗೆ ಸಿಕ್ಕಲಿಲ್ಲ. ಹಿಂದುಗಳು ಜಾತೀಯ ಕೋಟೆ ಕಟ್ಟಿಕೊಂಡು ಬಾಗಲಿಕ್ಕಿಕೊಂಡು ಒಳಗೆ ಕುಳಿತರು; ಮತ್ತು ಮುಸಲ್ಮಾನರಿಗೆ ಪ್ರದೇಶಗಳನ್ನು ಗೆಲ್ಲುವ ಹೊರತು ಬೇರೇನೂ ಸಾಧಿಸಲಿಲ್ಲ. ಮುಂದೆ ಎಷ್ಟೋ ಶತಕಗಳ ಸಹವಾಸದ ತರುವಾಯ ಹಿಂದು ಸಂತರು ಮುಸಲ್ಮಾನರಲ್ಲಿಯ ಬಂಧು ಭಾವದ ಸಂದೇಶವನ್ನು ಎತ್ತಿಕೊಂಡರು. ಎರಡೂ ಖಂಡಗಳಲ್ಲಿಯ ಒಂದೂವರೆ ಸಾವಿರ ವರುಷಗಳ ಇತಿಹಾಸದ ತುಲನಾತ್ಮಕ ಪರಾಮರ್ಶೆ ಮತ್ತು ಭಾರತವು ಹಿಂದುಳಿದುದರ ಕಾರಣಮೀಮಾಂಸೆ ಹೀಗಿದೆ.

**ಸಮಾರೋಪ** :— ಮೇಲಿನ ತುಲನೆಯಿಂದ ಭಾರತದ ಹಿನ್ನಡೆಯ ಸಮಗ್ರ ಕಲ್ಪನೆ ಬರಲಾರದು. ಮುಸಲ್ಮಾನರ ಆಗಮನಕ್ಕಿಂತ ಎಷ್ಟೋ ವರುಷ ಮೊದಲು ಭಾರತದಲ್ಲಿ ಕರ್ಮಠತನ, ವ್ರತವೈಕಲ್ಯಗಳು, ಆತ್ಮಸಂತುಷ್ಟ ವೃತ್ತಿಗಳು ಬೆಳೆದಿದ್ದವೆಂಬುದು ಆಲ್ಬೆರುನಿಯ ಗ್ರಂಥದಿಂದ ತಿಳಿದುಬರುತ್ತದೆ. ಹಾಗೆಯೆ, ವಿದ್ಯೆ ಕಲೆಗಳ ಕೆಲವು ಶಾಖೆಗಳಲ್ಲಿ ಮುಸಲ್ಮಾನರ ಆಗಮನದ ತರುವಾಯವೂ ಪ್ರಗತಿ ಕುಂಠಿತವಾಯಿತು. ಅಬೂಬೆಟ್ಟದಲ್ಲಿಯ ಜೈನ ಮಂದಿರಗಳ ಶಿಲ್ಪಕಲೆ ದೇವಶಿಲ್ಪಿ ವಿಶ್ವಕರ್ಮನನ್ನು ಬೆರಗುಗೊಳಿಸುವಷ್ಟು ಸುಂದರವಾಗಿದೆ. ಮತ್ತು ಅದು ಮುಸಲ್ಮಾನರು ಇಲ್ಲಿಗೆ ಬಂದ ಮೇಲೆಯೆ ನಿರ್ಮಾಣವಾಯಿತು. ಯುರೋಪಿನಲ್ಲಿ ಗ್ರೀಸ ರೋಮಗಳಲ್ಲಿ ಹಿರೋಡೋಟಸ್, ಥುಸಿಡಾಯಡಿಸ್ ಅಥವಾ ಪ್ಲೀನಿಯವರಂತಹ ಇತಿಹಾಸಕಾರರು ಆಗಿ ಹೋದಂತೆ ಭಾರತದಲ್ಲಿ ಏಕೆ ಆಗಲಿಲ್ಲವೆಂಬುದನ್ನು ಹೇಳಲಾಗುವುದಿಲ್ಲ. ಇತಿಹಾಸಕಾರರು ಭೂತಕಾಲದ ಕನ್ನಡಿಯನ್ನು ವರ್ತಮಾನ

ಜನತೆಯ ಮುಂದೆ ಹಿಡಿಯುತ್ತಾರೆ; ಅದರಲ್ಲಿ ನೋಡಿಕೊಂಡು ಯಾರು ಬೇಕಾದವರು ಆತ್ಮನಿರೀಕ್ಷಣೆ ಮಾಡಿಕೊಂಡು ವರ್ತಮಾನ ಕಾಲದ ಅಗತ್ಯಗಳನ್ನು ಅರಿತುಕೊಂಡು ಕಾರ್ಯಪ್ರವೃತ್ತರಾಗಬೇಕು ಪ್ರಾಚೀನ ಕಾಲದಲ್ಲಿ ಬೌದ್ಧ ಸಮ್ಮೇಲನಗಳು ನೆರೆಯುತ್ತಿದ್ದವು; ಆ ಧರ್ಮದ ತತ್ತ್ವಗಳನ್ನು ಅಲ್ಲಿ ಚಿಕಿತ್ಸಾಪೂರ್ವಕವಾಗಿ ಚರ್ಚಿಸಲಾಗುತ್ತಿತ್ತು. ಹರ್ಷನ ತರುವಾಯ ಇಂತಹ ಬೌದ್ಧ ಸಮ್ಮೇಲನಗಳು ಜರುಗಿದ ಉಲ್ಲೇಖಗಳು ಸಿಕ್ಕಿಲ್ಲ. ಮತ್ತು ಮಹಾಭಾರತ ಕಾಲದ ಅನಂತರ ವೈದಿಕ ಧರ್ಮೀಯರ ಸಮ್ಮೇಲನವು ಎಲ್ಲಿಯೂ ಕೂಡಿದಂತಿಲ್ಲ. ವ್ಯಕ್ತಿಗೇ ಆಗಲಿ, ಸಮಾಜಕ್ಕೇ ಆಗಲಿ ಕಾರ್ಯ ಮಾಡುವುದಕ್ಕೆ ಆತ್ಮನಿರೀಕ್ಷಣೆಯ ಅಗತ್ಯವಿರುತ್ತದೆ. ಇಂತಹ ಸಂಧಿ ಇತಿಹಾಸಗ್ರಂಥಗಳಲ್ಲಿಯೂ ಪ್ರಾಸಂಗಿಕವಾಗಿ ಉದ್ದೇಶಪೂರ್ವಕವಾಗಿ ಜರುಗಿಸುವ ಸಮ್ಮೇಲನಗಳಲ್ಲಿಯೂ ದೊರೆಯುತ್ತದೆ ಈ ಪದ್ಧತಿಯಿಂದ ಚಿಕಿತ್ಸಕ ಬುದ್ಧಿ ಬೆಳೆಯುತ್ತದೆ, ಶಾಸ್ತ್ರೀಯ ದೃಷ್ಟಿ ತೆರೆಯುತ್ತದೆ, ಪರಂಪರಾಗತ ಆಚಾರ ವಿಚಾರಗಳಿಗೇ ಅಂಟಿಕೊಳ್ಳುವ ಮೋಹ ದೂರಾಗುತ್ತದೆ. ಹರ್ಷೋತ್ತರ ಕಾಲದ ಪ್ರಾಚೀನ ಭಾರತದ ಇತಿಹಾಸವು ನಮಗೆ, 'ಭಾರತೀಯರಲ್ಲಿ ಪರಾಕ್ರಮವಿದೆ, ಬುದ್ಧಿಯಿದೆ, ತ್ಯಾಗವಿದೆ; ಆದರೆ ಸಂಘಟನೆ ಮಾತ್ರವಿಲ್ಲ' ಎಂಬುದನ್ನು ತೋರಿಸುತ್ತದೆ. ಸಂಘಟನೆಯ ಅಭಾವದಿಂದ ಮಡಿಕೆಗಳು ವಿಸ್ಖಲಿತವಾದವು; ಮತ್ತು ತಮ್ಮ ಪ್ರಾಚೀನ ಭಾರತೀಯ ಸಂಸ್ಕೃತಿಯ ಗಾಢ ಅಜ್ಞಾನದ ಮೂಲಕ ತಮ್ಮ ವೈಶಿಷ್ಟ್ಯಗಳನ್ನು ಆಧರಿಸಿ ನವೀನ ವಿಚಾರಗಳನ್ನು ಕಲಮು ಮಾಡುವುದು ಯಾರಿಗೂ ಸಾಧ್ಯವಾಗಲಿಲ್ಲ. ಪ್ರಾಚೀನ ಭಾರತೀಯ ಇತಿಹಾಸದ ಅಭ್ಯಾಸಕರಿಗೆ ಈ ವೈಶಿಷ್ಟ್ಯಗಳು ತಿಳಿದುಬಂದು, ಭಾವೀ ಭಾರತದ ಪುನರ್ಘಟನೆಯಲ್ಲಿ ಅವರು ಜಾಗರೂಕತೆಯಿಂದ ಭಾಗವಹಿಸುವರೆಂದು ನಂಬುಗೆಯಿದೆ.

## ಪ್ರಶ್ನೆ

೧. ಮೌರ್ಯೋತ್ತರ ಪ್ರಾಚೀನ ಭಾರತದ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯ ಸಂಕ್ಷಿಪ್ತ ವರ್ಣನೆ ಮಾಡಿರಿ.

೨. ಭಕ್ತಿಮಾರ್ಗದ ಮಹತ್ವ ಹೇಳಿರಿ. ಬೌದ್ಧಧರ್ಮದ ಅವನತಿಯಾಗಲು ಈ ಮಾರ್ಗವು ಹೇಗೆ ಕಾರಣವಾಯಿತು?

೩. ಪ್ರತಿಯೊಂದರ ವಿಷಯವಾಗಿ ಒಂದೊಂದು ವಾಕ್ಯವೃಂದವನ್ನು ಬರೆಯಿರಿ.
(ಅ) ಅಜಂತೆಯ ಚಿತ್ರಕಲೆ. (ಬ) ವೇರೂಳದ ಶಿಲ್ಪ ಕಲೆ. (ಕ) ಪ್ರಾಚೀನ ಭಾರತದ ಆಟಪಾಟಗಳು (ಡ) ಪ್ರಾಚೀನ ಭಾರತದ ಸ್ತ್ರೀಯರ ಸ್ಥಿತಿ.

# ಅಭ್ಯಾಸ ಮತ್ತು ಚಿಂತನಕ್ಕಾಗಿ

**ಅಭ್ಯಾಸ :**

೧. ಗುಪ್ತಕಾಲದಲ್ಲಿ ರಚಿತವಾದ ಐದು ಸಂಸ್ಕೃತ ಗ್ರಂಥಗಳ ಮತ್ತು ಐವರು ಪಂಡಿತರ ಹೆಸರುಗಳನ್ನು ಹೇಳಿರಿ.

೨. ಕನಸಿನಲ್ಲಿ ಯುಅನ್ ಚ್ವಾಂಗನ ಭೆಟ್ಟಿ ನಿಮಗಾಯಿತೆಂದು ತಿಳಿಯಿರಿ : ಆಗ ನಿಮ್ಮಿಬ್ಬರಲ್ಲಿ ನಡೆಯಬಹುದಾದ ಮಾತುಕತೆಗಳನ್ನು ಸಂವಾದರೂಪದಲ್ಲಿ ಬರೆಯಿರಿ.

೩. ಟಿಪ್ಪಣಿ ಬರಿಯಿರಿ : (೧) ದಕ್ಷಿಣದಲ್ಲಿಯ ದೇವಾಲಯಗಳು; (೨) ಫಾಹೈನ; (೩) ಕುಮಾರಜೀವ; (೪) ಖೋತಾನದಲ್ಲಿ ಬೌದ್ಧಧರ್ಮ; (೫) ರಾಜಪುತರ ಕಾರ್ಯ.

೪. ಪ್ರತಿಯೊಂದರ ಬಗ್ಗೆ ಒಂದೊಂದು ವಾಕ್ಯ ಬರೆಯಿರಿ : ಧರ್ಮರತ್ನ; ಕುಮಾರ ಜೀವ; ಇತ್ಸಿಂಗ್; ಯವದ್ವೀಪ.

೫. ಚಿತ್ರಕಲೆಯ ಮಹತ್ವವೇನು ? ಪ್ರಾಚೀನ ಭಾರತೀಯ ಚಿತ್ರಕಲೆಯ ವಿಷಯವಾಗಿ ನಿಮಗೆ ಗೊತ್ತಿದ್ದುದನ್ನು ಬರೆಯಿರಿ.

೬. ಪ್ರಾಚೀನ ಕಾಲಖಂಡದಲ್ಲಿಯ ಭಾರತೀಯರ ಗುಣದೋಷಗಳನ್ನು ಪಟ್ಟಿಮಾಡಿರಿ. ಈಗ ಅದರಲ್ಲಿ ಏನಾದರೂ ಹೆಚ್ಚುಕಡಿಮೆಯಾಗಿವೆಯೋ ಹೇಗೆಂಬುದನ್ನು ಹೇಳಿರಿ.

**ಚಿಂತನಕ್ಕಾಗಿ :**

## ಕಾಲಪಟ ೪

[ ಕ್ರಿ. ವ. ೨೫೧ ರಿಂದ ೭೫೦. ಪ್ರಮಾಣ ೧ ಇಂಚು = ೧೦೦ ವರುಷ ]

| | | |
|---|---|---|
| | ೨೫೧ | |
| ಚೀನದ ಮಣ್ಣಿನ ಪಾತ್ರೆ (೨೫೨) | | ಗುಪ್ತಸಾಮ್ರಾಜ್ಯದ ಸ್ಥಾಪನೆ (೩೨೦) |
| | ೩೫೦ | |
| ಚೀನದಲ್ಲಿ ಕುಮಾರ ಜೀವ (೪೦೧–೪೧೩) | | ಸಮುದ್ರಗುಪ್ತನರಾಜ್ಯ (೩೩೦-೩೭೫) ವಿಕ್ರಮಾದಿತ್ಯಗುಪ್ತನಿಂದ ಶಕರ ಸೋಲು (೩೯೨) ಗುಪ್ತಸಾಮ್ರಾಜ್ಯದಲ್ಲಿ ಫಾಹೈನನ ಪ್ರವಾಸ (೪೦೫-೪೧೧) |
| | ೪೫೦ | |
| | | ಸ್ಕಂದಗುಪ್ತನ ಮೃತ್ಯು (೪೮೦) |
| | ೫೫೦ | |
| ಮಹುಮ್ಮದಪೈಂಗಬರರ ಜನ್ಮ (೫೭೦) ಹಿಜರೀ ಸನ್ (೬೨೨) ಭಾರತದಲ್ಲಿ ಯು-ಅನ್-ಚ್ವಂಗ (೬೩೦-೬೪೫) | | ಹರ್ಷವರ್ಧನನ ರಾಜ್ಯ (೬೦೬-೬೪೭) ಪುಲಕೇಶಿ (೬೦೯-೬೪೨) |
| | ೬೫೦ | |
| ನಾಲಂದದಲ್ಲಿ ಇತ್ಸಿಂಗ್ (೬೭೫-೬೮೫) ಚಾರ್ಲಸ್ ಮಾರ್ಟೆಲನಿಂದ ಮುಸಲ್ಮಾನರ ಪರಾಭವ. (೭೩೨) | | ಭಾರತದ ಮೇಲೆ ಮಹಮ್ಮದ ಕಾಶೀಮನ ದಾಳಿ (೭೧೧) ಪಾರಶಿಗಳು ಭಾರತಕ್ಕೆ ಬಂದರು (೭೧೭) |
| | ೭೫೦ | |



# ಕಾಲಪಟ ೫

[ ಕ್ರಿ. ವ. ೭೫೧ ರಿಂದ ೧೨೫೦. ಪ್ರಮಾಣ ೧ ಇಂಚು = ೧೦೦ ವರ್ಷ ]

—— ೭೫೧

ಬಗದಾದದ ಖಲಿಫಾ, ಹರೂನ ಅಲ್ ರಶೀದ ( ೭೮೬–೮೦೯ )

ಆದ್ಯಶಂಕರಾಚಾರ್ಯರ ಜನ್ಮ (೭೮೮)

—— ೮೫೦

ಕಂಬುಜ ಸಾಮ್ರಾಜ್ಯದ ಮಹಾರಾಜ ಪರಮಶಿವ ಲೋಕಯಶೋವರ್ಮ (೮೮೯–೯೧೦)

—— ೯೫೦

ರಶಿಯದಲ್ಲಿ ಕ್ರೈಸ್ತಧರ್ಮ (೯೮೮)

ಭಾರತದ ಮೇಲೆ ಮಹಮೂದ ಗಝ್ನಿಯ ಮೊದಲನೆಯ ದಾಳಿ ( ೧೦೦೧ ) ಸೋಮನಾಥನ ಮೇಲೆ ಅವನ ದಾಳಿ ( ೧೦೨೪ )

—— ೧೦೫೦

ಇಂಗ್ಲಂಡಿನಲ್ಲಿ ಜರ್ಮನರ ವಿಜಯ ( ೧೦೬೬ )

—— ೧೧೫೦

ಲಿಂಗಾಯತಧರ್ಮದಸ್ಥಾಪನೆ (೧೧೬೦) ತರಾಯನದಯುದ್ಧ– ಪೃಥ್ವೀರಾಜನ ವಿಜಯ(೧೧೯೧), ತರಾಯನದಎರಡನೆಯ ಯುದ್ಧ ಶಹಾಬುದ್ದೀನನ ಜಯ (೧೧೯೨) ಭಾರತದಲ್ಲಿ ಮುಸಲ್ಮಾನೀ ರಾಜ್ಯ ( ೧೨೦೬ )

ಮಗ್ನಾ ಚಾರ್ಟ ( ೧೨೧೫ )

—— ೧೨೫೦ [ ಠಾಣೇಶ್ವರದ ಯುದ್ಧ

## ೧. ಭಾರತೀಯ ಸಂಸ್ಕೃತಿಯಲ್ಲಿ ಗೀತೆಯ ಮಹತ್ವ:

ಆದ್ಯಶಂಕರಾಚಾರ್ಯರು ತಮ್ಮ ಸುಪ್ರಸಿದ್ಧ ಶಾಂಕರ ಭಾಷ್ಯವನ್ನು ಬರೆದು ಪ್ರಾಚೀನ ವೈದಿಕ ಪರಂಪರೆಯನ್ನು ಎಂಟನೆಯ ಶತಕದ ವರೆಗೆ ತಂದು ಮುಟ್ಟಿಸಿದರು. ಆ ಪರಂಪರೆ ಹದಿಮೂರನೆಯ ಶತಕದಲ್ಲಿ ಜ್ಞಾನೇಶ್ವರನಿಂದ, ಮತ್ತು ಇಪ್ಪತ್ತನೆಯ ಶತಕದಲ್ಲಿ ತಿಲಕ ಅರವಿಂದ ಘೋಷರಿಂದ ಪುನರುಜ್ಜೀವನಗೊಂಡಿತು. ಸಾರಾಂಶ: ಭಾರತೀಯರ ಆಧ್ಯಾತ್ಮಿಕ ಜೀವನವು ಗೀತೆಯ ಮೇಲಿನ ಟೀಕೆ-ಪ್ರತಿಟೀಕೆಗಳಲ್ಲಿ ವ್ಯಕ್ತವಾಗುತ್ತದೆ; ಆದರೆ, ಯಾವೊಬ್ಬ ಟೀಕಾಕಾರನನ್ನು ಸಂಪೂರ್ಣ ಪ್ರಮಾಣ ವೆಂದು ಮನ್ನಿಸುವ ಪ್ರಘಾತವಿಲ್ಲದ್ದರಿಂದ, ಧರ್ಮಗ್ರಂಥವು ಒಂದಾಗಿದ್ದರೂ ವೈದಿಕ ಧರ್ಮದ ಅನುಯಾಯಿಗಳಲ್ಲಿ ಸಾಂಪ್ರದಾಯಿಕರ ಸಂಕುಚಿತತೆ ಬಂದಿರುವುದಿಲ್ಲ. ಇದು ಈ ಧರ್ಮದ ವಿಶೇಷ.

---

## ೨. ಭಾರತದೊಡನೆಯ ಯುಅನ್ ಚ್ವಂಗನ ಪತ್ರವ್ಯವಹಾರ:

[ಭಾರತದಲ್ಲಿ ಬಹುಕಾಲ ವಾಸವಾಗಿದ್ದುದರಿಂದ ಇಲ್ಲಿ ವಿದ್ವಾಂಸರೊಡನೆ ಹ್ಯೂ-ಎನ್-ತ್ಸಂಗನ ಸಂಬಂಧವು ಆತ್ಮೀಯವಾಗಿ ಬೆಳೆದಿತ್ತು; ಆದರಿಂದ ಬರು ಹೋಗುವ ಯಾತ್ರಿಕರೊಡನೆಲ್ಲ ಅವನ ಪತ್ರವ್ಯವಹಾರ ಸಾಗಿರುತ್ತಿತ್ತು. ಇಂತಹ ಎರಡು ಸಂಸ್ಕೃತ ಪತ್ರಗಳನ್ನು ಚೀನದಲ್ಲಿ ಜತನದಿಂದ ಕಾದಿರಿಸಲಾಗಿದೆ. ಹ್ಯೂ-ಎನ್-ತ್ಸಂಗನ ಕಲಿಯುವ ಹಂಬಲ ಭಾರತದ ವಿದ್ವಾಂಸರ ಬಗ್ಗೆ ಅವನಲ್ಲಿದ್ದ ಆದರ, ಅವನ ವಿಷಯದಲ್ಲಿ ಭಾರತೀಯ ವಿದ್ವಾಂಸರಿಗೆನಿಸುತ್ತಿದ್ದ ಆತ್ಮೀಯತೆ—ಇವು ಗಳು ಕೆಳಗಿನ ಪತ್ರಗಳಲ್ಲಿ ಕಂಡುಬರುತ್ತವೆ: —

'ಇಂಡಿಯಾ ರೀ-ಡಿಸ್ಕವರ್ಡ್' ಎಂಬ ಪುಸ್ತಕದಲ್ಲಿಯ ಪತ್ರಗಳ ಭಾವಾರ್ಥ ವನ್ನು ಗ್ರಹಿಸಿ ಇಲ್ಲಿ ಕೊಡಲಾಗಿದೆ.]

## ಹ್ಯೂ-ಎನ್-ತ್ಸಂಗನಿಗೆ ಪತ್ರ

[ಭಾರತದಲ್ಲಿಯ ಬೌದ್ಧಧರ್ಮೀಯ ವಿದ್ವಾಂಸನಾದ ಸ್ಥವಿರ ಪ್ರಜ್ಞಾದೇವ ನೆಂಬವನು ಕ್ರಿ. ಶ. ೬೫೪ರಲ್ಲಿ ಚೀನದಲ್ಲಿದ್ದ ಹ್ಯೂ-ಎನ್-ತ್ಸಂಗನಿಗೆ ಕಳಿಸಿದ ಓಲೆ.]

ಭಾರತವರ್ಷ. ಕ್ರಿ. ಶ. ೬೫೪

ಸಾದರ ಅಭಿವಾದನ. ನಿಮ್ಮ ಓಲೆ ಕೈಸೇರಿತು.

.... ನಾವು ತಮ್ಮನ್ನು ಮರೆತಿಲ್ಲ. ಇದರೊಡನೆ ತಮಗೆ ಉಡುಗರೆಯಾಗಿ ಒಂದು ಜೊತೆ ಧೋತರ ಕಳಿಸಿದೆ. ತಾವು ಬಹಳ ದೂರ ಇದ್ದೀರಿ. ಪ್ರವಾಸದ ತೊಂದರೆಗಳನ್ನು ಮನದಂದು ಇಂತಹ ಸಾಮಾನ್ಯ ಉಡುಗೊರೆ ಕಳಿಸುತ್ತಿದ್ದೇವೆ. ಆದರೆ ತಾವು ಇದರ ಕ್ಷುದ್ರತೆಯನ್ನು ಗಮನಿಸದೆ ಸ್ವೀಕರಿಸುವಿರೆಂದು ನಂಬಿದ್ದೇನೆ.

ತಮಗೆ ಬೇಕಾಗಿರುವ ಸೂತ್ರಗಳ ಮತ್ತು ಶಾಸ್ತ್ರಗ್ರಂಥಗಳ ಪಟ್ಟಿಯನ್ನು ದಯವಿಟ್ಟು ಕಳಿಸಿರಿ; ಎಂದರೆ ನಾವು ಅವುಗಳನ್ನು ಪ್ರತಿಮಾಡಿ ಕಳಿಸುತ್ತೇವೆ.

ತಮ್ಮ
ಪ್ರಜ್ಞಾದೇವ

## ಹ್ಯೂ–ಎನ್–ತ್ಸಂಗನ ಉತ್ತರ

ಸಾದರ ಪ್ರಣಾಮ, ನಿಮ್ಮ ಓಲೆ ಕೈಸೇರಿತು.

ತಮ್ಮ ಪತ್ರ ತಲುಪಿತು.... ತಮ್ಮ ಶ್ರೇಷ್ಠಗುರು ಶೀಲಭದ್ರರು ತೀರಿಕೊಂಡ ಸುದ್ದಿ ಇದೀಗ ಭಾರತದಿಂದ ಬಂದ ರಾಜದೂತನ ಮುಖದಿಂದ ತಿಳಿಯಿತು. ಕೇಳಿ ಅತಿಶಯ ದುಃಖವಾಯಿತು.

ಭಾರತದಿಂದ ನಾನು ತಂದಿದ್ದ ಗ್ರಂಥಗಳಲ್ಲಿ ಮತ್ತು ಸೂತ್ರಗಳಲ್ಲಿ 'ಯೋಗಚರ್ಯಾಭೂಮಿ' ಮತ್ತು ಇತರ ಕೆಲವು ಗ್ರಂಥಗಳನ್ನು ಮೂವತ್ತು ಭಾಗಗಳಲ್ಲಿ ಭಾಷಾಂತರಿಸಿದ್ದೇನೆ. ದಾರಿಯಲ್ಲಿ ಸಿಂಧುನದಿಯನ್ನು ದಾಟುತ್ತಿರುವಾಗ ಧರ್ಮಗ್ರಂಥಗಳ ಒಂದು ಗಂಟು ನದಿಯಲ್ಲಿ ಬಿದ್ದುಹೋಯಿತು !

ನನಗೆ ಬೇಕಾದ ಗ್ರಂಥಗಳ ಪಟ್ಟಿಯನ್ನು ಈ ಪತ್ರದ ಜೊತೆಯಲ್ಲಿ ಇರಿಸಿದ್ದೇನೆ. ತಮಗೆ ಅನುಕೂಲವಾದಾಗ ಈ ಗ್ರಂಥಗಳನ್ನು ಪ್ರತಿಮಾಡಿ ಕಳಿಸಬೇಕಾಗಿ ವಿನಂತಿ.

ಜೊತೆಯಲ್ಲಿ ಕೆಲವು ಕಿರಿಯ ಕಾಣಿಕೆಗಳನ್ನು ಕಳಿಸುತ್ತಲಿದ್ದೇನೆ; ಅಂಗೀಕರಿಸಬೇಕು.

ತಮ್ಮ
ಹ್ಯೂ–ಎನ್–ತ್ಸಂಗ್

## ೩. ಖೋತಾನದಲ್ಲಿ ಬುದ್ಧನ ರಥಯಾತ್ರೆ :

[ ಜಗನ್ನಾಥಪುರಿಯ ರಥೋತ್ಸವವು ಬಹಳ ಪ್ರಸಿದ್ಧವಿದೆ. ರಥಯಾತ್ರೆ ಅಥವಾ ರಥೋತ್ಸವ ಬಹು ಪ್ರಾಚೀನಕಾಲದಿಂದಲೂ ಭಾರತದಲ್ಲಿ ರೂಢಿಯಲ್ಲಿದೆ. ಬೌದ್ಧಮತದ ಮಹಾಯಾನ ಪಂಥದವರು ಈ ಉತ್ಸವಕ್ಕೆ ಅತಿ ವ್ಯಾಪಕ ಸ್ವರೂಪ ವನ್ನಿತ್ತರು. ಮಧ್ಯ ಆಶಿಯದಲ್ಲಿ ಖೋತಾನ ನದಿಯ ಬಳಿಯ ಖೋತಾನ ನಗರ ದಲ್ಲಿ ಪ್ರಾಚೀನ ಕಾಲದಲ್ಲಿ ಬೌದ್ಧಧರ್ಮವು ಪ್ರಚಲಿತವಾಗಿತ್ತು. ಅಲ್ಲಿ ಕಂಡ ರಥ ಯಾತ್ರೆಯ ವರ್ಣನೆಯನ್ನು ಫಾಹೈನನೆಂಬ ಚೀನೀ ಪ್ರವಾಸಿ ಮಾಡಿದ್ದಾನೆ.— ಅದು ಕೆಳಗಿನಂತಿದೆ. ಅವನು ಆ ಮಾರ್ಗವಾಗಿಯೆ ಭಾರತಕ್ಕೆ ಬಂದಿದ್ದನು. ( ಕ್ರಿ. ವ. ೩೯೯–೪೧೪ ).

" ಇಲ್ಲಿ ಪ್ರತಿವರುಷ ರಥಯಾತ್ರೆ ಹೊರಡುತ್ತದೆ. ನಾಲ್ಕನೆಯ ತಿಂಗಳ ಮೊದ ಲನೆಯ ದಿನದಿಂದ ಜನರು ಹಾದಿ ಬೀದಿಗಳನ್ನು ಸ್ವಚ್ಛಮಾಡುತ್ತಾರೆ; ಊರನ್ನು ಸಿಂಗ ರಿಸುತ್ತಾರೆ; ಒಟ್ಟಾರೆ ದೃಶ್ಯ ಶೋಭಾಯಮಾನವಾಗಿರುತ್ತದೆ. ನಗರದ ಅಗಸೆಯ ಮೇಲೆ ಒಂದು ದೊಡ್ಡ ಚಂಪ್ರಶಾಲೆ ತಯಾರಿಸುತ್ತಾರೆ. ರಾಣಿವಂಶದ ಸ್ತ್ರೀಯರು ಉತ್ಸವವನ್ನು ನೋಡಲು ಕುಳಿತುಕೊಳ್ಳಲಿಕ್ಕೆ ಆ ಬಾಗಿಲ ಮೇಲೆಯೇ ಸ್ಥಳ ಮಾಡಿ ರುತ್ತಾರೆ. ಊರಿಂದ ಒಂದು ಮೈಲಂತರದಲ್ಲಿ ನಾಲ್ಕು ಗಾಲಿಗಳ ಒಂದು ಭವ್ಯ ರಥ ವನ್ನು ಸಿದ್ಧಪಡಿಸುತ್ತಾರೆ. ಅದು ೩೦ ಅಡಿ ಎತ್ತರವಿರುತ್ತದೆ. ತೂಗಾಡುವ ಅರಮನೆ ಯಂತೆ ಅದು ಕಾಣುತ್ತದೆ. ರತ್ನಗಳ ಒಡವೆಗಳಿಂದ, ಮಣಿಗಳ ತೋರಣಗಳಿಂದಲೂ ಅದನ್ನು ಸಜ್ಜುಗೊಳಿಸಿರುತ್ತಾರೆ. ಅಲ್ಲಲ್ಲಿ ಬೆಳ್ಳಿ–ಬಂಗಾರಗಳ ಅಲಂಕಾರಗಳನ್ನು ಹಾಕುತ್ತಾರೆ. ಸುತ್ತಲೂ ರೇಶಿಮೆ ಮತ್ತು ಜರತಾರಿಯ ತೆರೆ ಹಾಕಿರುತ್ತಾರೆ.

ಆಮೇಲೆ ರಥದಲ್ಲಿ ಬುದ್ಧನ ಸುವರ್ಣ ಮೂರ್ತಿಯನ್ನು ಕುಳ್ಳಿರಿಸುತ್ತಾರೆ. ಅದರ ಇಬ್ಬದಿಗಳಲ್ಲಿಯೂ ' ಬೋಧಿಸತ್ತ್ವ' ವನ್ನು ನಿಲ್ಲಿಸುತ್ತಾರೆ. ಅಲ್ಲದೆ ಚಿನ್ನ-ಬೆಳ್ಳಿ- ಸ್ಫಟಿಕಗಳ ಅನೇಕ ಮೂರ್ತಿಗಳನ್ನು ಅಲ್ಲಲ್ಲಿ ಇರಿಸಿರುತ್ತಾರೆ. ಆಮೇಲೆ ಮೆರವಣಿಗೆ ಹೊರಡುತ್ತದೆ. ವಾದ್ಯ-ವಾದನಗಳೊಡನೆ ರಥವು ಊರ ಕಡೆ ಸಾಗುತ್ತದೆ. ಅಗಸೆಯ ಬಳಿ ಅದು ಬರುತ್ತಲೂ ರಾಜನು ತನ್ನ ಹಳೆಯ ವಸ್ತ್ರಭರಣಗಳನ್ನು ತೆಗೆದು, ಹೊಸ, ಬಟ್ಟೆ ಹೊಸ ಮುಕುಟ ಧರಿಸುತ್ತಾನೆ. ಮತ್ತು ಬರಿಗಾಲಿಂದ ರಥದ ಎದುರಿಗೆ ಹೋಗು ತ್ತಾನೆ. ಅನೇಕ ಅಧಿಕಾರಿಗಳೂ ರಾಜಸೇವಕರೂ ಅವನನ್ನು ಹಿಂಬಾಲಿಸುತ್ತಾರೆ. ಬುದ್ಧನನ್ನು ಪೂಜಿಸಿ, ಧೂಪಾರತಿ ಮಾಡಿ ರಾಜನು ಹೂವೇರಿಸುತ್ತಾನೆ. ನಗರ ಅಗ ಸೆಯನ್ನು ರಥವು ತಲುಪುತ್ತಲೇ ರಾಣಿ ಮತ್ತು ಆಕೆಯ ಜೊತೆಗಾರ್ತಿಯರು ರಥದ ಮೇಲೆ ಹೂಮಳೆ ಕರೆಯುತ್ತಾರೆ. ಸತತವಾಗಿ ಹದಿನಾಲ್ಕು ದಿವಸ ಈ ರಥಯಾತ್ರೆ ನಡೆದಿರುತ್ತದೆ."

## ೪. ಸಾಮ್ರಾಟ್ ಸಮುದ್ರಗುಪ್ತನ ಪರಾಕ್ರಮ:

[ ಈ ಗುಪ್ತಕಾಲೀನ ಶಿಲಾಸ್ತಂಭವು ಈಗ ಅಲಹಾಬಾದಿನ ಕೋಟೆಯೊಳಗೆ ಇರಿಸಲಾಗಿದೆ. ಅದರಲ್ಲಿ, ಚಂಪೂರೂಪದಲ್ಲಿ ಎಪ್ಪತ್ತೈದು ಸಾಲುಗಳಲ್ಲಿ ಸಮುದ್ರ ಗುಪ್ತನ ದಿಗ್ವಿಜಯಗಳನ್ನು ಬಣ್ಣಿಸಿದೆ; ಅದರ ಸ್ವಲ್ಪ ಭಾಗವನ್ನು ಪರಿಚಯಕ್ಕಾಗಿ ಇಲ್ಲಿ ಕೊಟ್ಟಿದೆ. ಆರಂಭದಲ್ಲಿ ಗುಪ್ತಸಾಮ್ರಾಜ್ಯದ ಸಂಸ್ಥಾಪಕನಾದ ಚಂದ್ರಗುಪ್ತನು ಅನೇಕ ಮಕ್ಕಳಲ್ಲಿ ಸಮುದ್ರಗುಪ್ತನನ್ನು ಭಾವೀರಾಜನನ್ನಾಗಿ ಆರಿಸಿದನೆಂಬ ಸಂಗತಿಯಿದೆ. ಅವನು ಗೆದ್ದ ರಾಜ್ಯಗಳ ನಾಮಾವಳಿಗಾಗಿ ಮೂಲ ಲೇಖವನ್ನು ನೋಡಬಹುದು. ]

" ಓಲಗದಲ್ಲಿಯ ಸಭಾಸದರು ಉತ್ಸುಕರಾದರು. ತಂದೆಯ ಅಂತಃಕರಣ ತುಂಬಿಬಂದಿತು. ಅವನ ಕಿವಿ ಮೇಲಿನ ಕೂದಲು ನೆಟ್ಟಗಾದವು. ಕಣ್ಣುಗಳಲ್ಲಿ ನೀರು ತುಂಬಿತು. ಅವನು ಪ್ರೀತಿಯಿಂದ ತನ್ನ ಹಲವು ಮಕ್ಕಳಲ್ಲಿ ಸಮುದ್ರಗುಪ್ತನ ಕಡೆ ನೋಟ ಬೀರಿದನು. ಅವನನ್ನು ತಬ್ಬಿಕೊಂಡು, ' ನೀನೇ ದೊರೆಯಾಗಲು ತಕ್ಕವನು; ನೀನೇ ಈ ಅಖಿಲ ಭೂಮಿಯನ್ನು ಪೊರೆ! ' ಎಂದು ನುಡಿದನು.

ಅವನು ನೂರು ಬಗೆಯ ಕಾಳಗಗಳಲ್ಲಿ ನಿಪುಣನಾಗಿದ್ದಾನೆ; ಅವನ ' ಸ್ವಭುಜಾ ಪರಾಕ್ರಮ ಗುಣವೇ ಅವನಿಗೆ ಸಹಾಯಕವಾಗಿದೆ. ಪರಾಕ್ರಮವೇ ಅವನ ವಿಶೇಷ. ಪರಶು, ಬಾಣ, ಭಲ್ಲೆ, ಶಕ್ತಿ, ಖಡ್ಗ....ಇತ್ಯಾದಿ ಶಸ್ತ್ರಗಳಿಂದ ನೂರಾರು ಗಾಯಗಳಾಗಿದ್ದುದರಿಂದ ಅವನ ಶರೀರವು ಹೆಚ್ಚು ಶೋಭಿಸುತ್ತದೆ.

" ದೇವಗುರು ಬೃಹಸ್ಪತಿಯನ್ನು ತನ್ನ ತೀವ್ರ ಬುದ್ಧಿಯಿಂದಲೂ ತುಂಬುರ ನಾರದರನ್ನು ತನ್ನ ಗಾಂಧರ್ವಲಾಲಿತ್ಯಗಳಿಂದಲೂ ಅವನು ನಾಚಿಸಿದ್ದಾನೆ. "

— ಹಿಂದುಸ್ತಾನದ ಸಾಧನರೂಪ ಇತಿಹಾಸ. ( ಪು. ೪೭ )

---

# ಸಂದರ್ಭ ಚಿತ್ರಗಳು









ಈ ಚಿತ್ರಗಳನ್ನು ಕುರಿತು ಪ್ರಶ್ನೆಗಳನ್ನು ಕೆಳಗೆ ಕೊಟ್ಟಿದೆ. ಸಂದರ್ಭಗಳಿಗಾಗಿ ಅನುಕ್ರಮವಾಗಿ ಖಂಡ ೪, ಖಂಡ ೨, ಖಂಡ ೬, ಖಂಡ ೫ ಓದಿ ಉತ್ತರ ಕೊಡಿರಿ. ಪ್ರತಿಯೊಂದು ಚಿತ್ರಕ್ಕೆ ಶೀರ್ಷಿಕೆಯನ್ನು ಸೂಚಿಸಿರಿ.

## ಪ್ರಶ್ನೆಗಳು

ಚಿತ್ರ ೧: ಅಥೆನ್ಸಿನ ಬೀದಿಯಲ್ಲಿ ಇಂತಹ ಪ್ರಶ್ನೋತ್ತರಗಳು ಯಾವಾಗ ನಡೆಯುತ್ತಿದ್ದವು ?

ಚಿತ್ರ ೨: 'ಏನು ನಮ್ಮ ನಿಮ್ಮ ಪೂರ್ವಜರು ಒಂದೇ ಇದ್ದರು!' ಎಂದು ಯಾರು ಯಾರಿಗೆ ಎನ್ನುತ್ತಿದ್ದಾರೆ.

ಚಿತ್ರ ೩: ಯಾವ ರಾಜನ ಕಾಲದ ದೃಶ್ಯವಿದು ? ಅದೇ ಕಾಲದ್ದೆಂದು ಹೇಳಲು ಕಾರಣವೇನು ?

ಚಿತ್ರ: ೪ 'ಕಾಯಿದೆಗಳನ್ನು ಮೇಜಿನ ಮೇಲೆ ಬರೆದಿಟ್ಟಿದ್ದಾರೆ. ಸರಿ, ಉತ್ತಮವಾಯಿತು.' ಈ ವ್ಯವಸ್ಥೆ ಯಾವ ರಾಜ್ಯದಲ್ಲಿತ್ತು ?

